# ಕೋ. ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧನಾ ವಿದ್ಯಾರ್ಥಿ
ಗುರುಬಸವರಾಜ ಕೆ. ಬಿ.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಮುಖ್ಯಸ್ಥರು ಹಾಗೂ ಪ್ರವಾಚಕರು
ಚರಿತ್ರೆ ವಿಭಾಗ



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೦೮-೦೯

# ಕೋ. ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆ

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ನಿಬಂಧ)

ಸಂಶೋಧನಾ ವಿದ್ಯಾರ್ಥಿ
ಗುರುಬಸವರಾಜ ಕೆ. ಬಿ.

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಮುಖ್ಯಸ್ಥರು ಹಾಗೂ ಪ್ರವಾಚಕರು
ಚರಿತ್ರೆ ವಿಭಾಗ






ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬
೨೦೦೮-೦೯

<u>ಮಾರ್ಗದರ್ಶಕರ ಪ್ರಮಾಣಪತ್ರ</u>

"ಕೋ.ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆ" ಎಂಬ ನಿಬಂಧನವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಶ್ರೀ ಕೆ.ಬಿ.ಗುರುಬಸವರಾಜ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧನವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ:

13-10-09

(ಡಾ.ವಿರೂಪಾಕ್ಷಿ ಪೂಜಾರಹಳ್ಳಿ)
ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬.

# ಪ್ರಮಾಣಪತ್ರ

"ಕೋ.ಚೆನ್ನಬಸಪ್ಪನವರ ಜೀವನ ಮತ್ತು ಸಾಧನೆ" ಎಂಬ ನಿಬಂಧಣವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್.ಪದವಿಗಾಗಿ ಸಮಾಜ ವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧಣವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ: ವಿದ್ಯಾರಣ್ಯ

ದಿನಾಂಕ:


(ಕೆ.ಬಿ.ಗುರುಬಸವರಾಜ)

ಸಂಶೋಧನಾ ವಿದ್ಯಾರ್ಥಿ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬.

## ಪರಿವಿಡಿ

# ಅಧ್ಯಾಯ-೧
# ಅಧ್ಯಯನದ ಉದ್ದೇಶ, ವ್ಯಾಪ್ತಿ, ಮಹತ್ವ ಹಾಗೂ ಸ್ವರೂಪ

## ಪ್ರಸ್ತಾವನೆ

ಜಗತ್ತು ಹುಟ್ಟಿದಾಗಿನಿಂದ ಚರಿತ್ರೆ ನಿರ್ಮಾಣವಾಗಿದೆ ಎಂದು ಹೇಳಬಹುದು. ಹಾಗಾಗಿ ಚರಿತ್ರೆಯ ನೆಲೆಯನ್ನು ಗುರಿತಿಸುವುದು ಕಷ್ಟಕರವಾಗಿದೆ. ಚರಿತ್ರೆಯ ವ್ಯಾಪ್ತಿ ವಿಶಾಲವಾಗಿದ್ದರೂ ಸಹ ಕೆಲವು ವಿದ್ವಾಂಸರು ಚರಿತ್ರೆಯ ಚೌಕಟ್ಟನ್ನು ನಿರ್ಧರಿಸಲು ಪ್ರಯತ್ನಿಸಿದ್ದಾರೆ. ಅಂತವರಲ್ಲಿ ಹೆರೊಡೋಟಸ್, ಅರಿಸ್ಟಾಟಲ್, ಥಾಮಸ್ ಕಾರ್ಲೈಲ್ ಮುಂತಾದವರು ಪ್ರಮುಖರಾಗಿರುತ್ತಾರೆ.

ಇತಿಹಾಸದ ಪಿತಾಮಹನಾದ ಹೆರೊಡೋಟಸನು ಚರಿತ್ರೆಯನ್ನು "ಮಹಾನ್ ವೀರರ ಕಥಾನಕ" ಎಂದು ವ್ಯಾಖ್ಯಾನಿಸಿದ್ದಾನೆ. ಮತ್ತೊಬ್ಬ ಇತಿಹಾಸಕಾರ ಥಾಮಸ್ ಕಾರ್ಲೈಲ್ ಅವರು, "ಶ್ರೇಷ್ಠ ವ್ಯಕ್ತಿಗಳ ಆತ್ಮಕಥನವೇ ಇತಿಹಾಸ" ಎಂದಿದ್ದಾರೆ. ಅಂದರೆ ಒಬ್ಬ ವ್ಯಕ್ತಿಯಲ್ಲಿರುವ ನಾಯಕತ್ವದ ಗುಣಗಳು, ಹೋರಾಟದ ದಾರಿಗಳು, ಸಮಾಜಮುಖಿ ಕಾರ್ಯಗಳು, ಅವರಲ್ಲಿರುವ ಚಿಂತನೆಗಳ ಫಲವಾಗಿ ಬದಲಾವಣೆಗಳು ಕಂಡಬರುತ್ತವೆ. ಅಂತಹ ಬದಲಾವಣೆಗಳೇ ಐತಿಹಾಸಿಕ ಘಟನೆಗಳು ಸಂಭವಿಸಲು ಕಾರಣಗಳಾಗಿವೆ. ಉದಾಹರಣೆಗೆ ಗಾಂಧೀಜಿಯವರ ವ್ಯಕ್ತಿತ್ವ, ಅಹಿಂಸಾ ನೀತಿ, ಸಂಘಟನೆಯ ಶಕ್ತಿ, ಮೊದಲಾದ ತತ್ವ ಸಿದ್ಧಾಂತಗಳು ಅವರಿಗೆ ವಿಶಿಷ್ಟ ಸ್ಥಾನವನ್ನು ತಂದುಕೊಟ್ಟಿವೆ. ಇಂತಹ ಮಹಾನ್ ವ್ಯಕ್ತಿಗಳು ಒಂದು ವಿಶಿಷ್ಟ ಸಾಮರ್ಥ್ಯವನ್ನು ಮೈಗೂಡಿಸಿ ಕೊಂಡಿರುತ್ತಾರೆ. ಅಂಥವರ ಬದುಕು 'ಜನ ಸೇವೆಯೇ ಜನಾರ್ಧನ ಸೇವೆ' ಎನ್ನುವ ನಿಟ್ಟಿನಲ್ಲಿರುತ್ತದೆ. ಅವರು ತಮ್ಮ ತಾಯಿನಾಡಿಗಾಗಿ ತಮ್ಮ ತನುಮನವನ್ನು ಮುಡುಪಾಗಿಟ್ಟು ಸಮಾಜದಲ್ಲಿರುವ ಅಸಮತೋಲನವನ್ನು ನಿವಾರಿಸುವ ಮೂಲಕ ಇಂದಿನ ಯುವಕರಿಗೆ ಆದರ್ಶ ಪ್ರಾಯರಾಗಿದ್ದಾರೆ. ಅಂದರೆ ಮಹಾನ್ ವ್ಯಕ್ತಿಗಳ ಚಿಂತನೆಗಳು ಪ್ರಸ್ತುತವಾಗಿ ಸಹಕಾರಿಯಾಗಿದ್ದು, ಅವರ ಅಸ್ಪೃಶ್ಯತೆ ವಿರೋಧಿ ಆಚರಣೆಗಳಂತಹ ಕಾರ್ಯಗಳು ಇಡೀ ಮನುಕುಲಕ್ಕೆ ಆದರ್ಶವಾಗಿರುತ್ತವೆ,

ಭಾರತದಲ್ಲಿ ಬ್ರಿಟಿಷರ ದಾಸ್ಯವನ್ನು ತೊಲಗಿಸಲು ಅನೇಕ ನಾಯಕರು ಹೋರಾಟ ಮಾಡಿದರು. ಅವರಲ್ಲಿ 'ದಾದಾಬಾಯಿ ನವರೋಜಿ', 'ಲೋಕಮಾನ್ಯ ತಿಲಕ್', 'ಗೋಪಾಲ ಕೃಷ್ಣಗೋಖಲೆ', 'ಲಾಲ ಲಜಪತರಾಯ', 'ವೀರಸಾವರ್ಕರ', 'ಅರವಿಂದ ಘೋಷ,' 'ಎಂ.ಜಿ. ರಾನಡೆ', 'ಬಿಪನ್ ಚಂದ್ರಪಾಲ್', 'ವಲ್ಲಬಾಯಿಪಟೇಲ್', 'ಗಾಂಧೀಜಿ', 'ಭಗತ್‌ಸಿಂಗ್', 'ಚಂದ್ರಶೇಖರ್ ಅಜಾದ್', 'ಉದಮ್ ಸಿಂಗ್', 'ಸುಭಾಷಚಂದ್ರ ಭೋಸ್', 'ನೆಹರು' ಮತ್ತು ಅಂಬೇಡ್ಕರ್ ಮೊದಲಾದವರೂ ರಾಷ್ಟ್ರ ಮಟ್ಟದಲ್ಲಿ ನಾಯಕರಾಗಿ ಬೆಳಕಿಗೆ ಬಂದರು. ಅಲ್ಲದೆ ಸ್ವಾತಂತ್ರ್ಯ ಸಂಗ್ರಾಮದ ಚುಕ್ಕಾಣಿಯನ್ನು ಹಿಡಿದು ಮಾರ್ಗದರ್ಶನವಿತ್ತರು. ಇವರಂತೆ ಕರ್ನಾಟಕದಲ್ಲಿಯೂ ಕೂಡ 'ಹರ್ಡೇಕರ್ ಮಂಜಪ್ಪ', 'ಆರ್. ಆರ್. ದಿವಾಕರ್', 'ಗಂಗಾಧರ್ ರಾವ್ ದೇಶಪಾಂಡೆ', 'ಎಸ್ ನಿಜಲಿಂಗಪ್ಪ' ಮುಂತಾದವರು ರಾಷ್ಟ್ರ ನಾಯಕರೊಂದಿಗೆ ಕೈ ಜೋಡಿಸಿ ಬೆಳೆದರು.

ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಭಾಗವಹಿಸಿ ನಾಡು ನುಡಿಗೆ ಸಂಬಂಧಿಸಿದಂತೆ ಅನೇಕ ಮಹನೀಯರು ದುಡಿದಿದ್ದಾರೆ. ಅಂತಹ ಅನೇಕ ಮಹನೀಯರಲ್ಲಿ ಒಬ್ಬರಾದ ನಿವೃತ್ತಿ ನ್ಯಾಯಾಧೀಶರು, ಸಾಹಿತಿ ಹಾಗೂ ಪ್ರಗತಿಪರ ಚಿಂತಕರು ಆಗಿರುವ ಕೋ. ಚೆನ್ನಬಸಪ್ಪನವರು ಒಬ್ಬರಾಗಿದ್ದಾರೆ.

ಕೋ. ಚೆನ್ನಬಸಪ್ಪನವರು (ಇನ್ನುಮುಂದೆ ಕೋ.ಚೆ. ಎಂದು ಬಳಸಲಾಗುವುದು) ಒಂದು ಮಧ್ಯಮ ವರ್ಗದ ಕುಟುಂಬದ ಕೋ. ವೀರಣ್ಣ, ಬಸಮ್ಮನವರ ಮಗನಾಗಿ ಜನಿಸಿದರು. ತಾಯಿಯ ತವರೂರಲ್ಲಿ ಕಿರಿಯ ಪ್ರಾಥಮಿಕ ಮತ್ತು ಹಿರಿಯ ಪ್ರಾಥಮಿಕ ಶಿಕ್ಷಣವನ್ನು ಪಡೆದು ಬಡತನದ ಮಧ್ಯೆ ಗುರಣ್ಣನವರ ಬೆಂಬಲದೊಂದಿಗೆ 'ಹೈಯರ್ ಎಲಿಮೆಂಟರಿ'(ಮಾಧ್ಯಮಿಕ ಶಿಕ್ಷಣ) ಶಿಕ್ಷಣವನ್ನು ಬಳ್ಳಾರಿಯಲ್ಲಿ ಪಡೆದರು. ಈ ವೇಳೆಗಾಗಲೇ ಅವರಿಗೆ ಭಾರತದ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಗಳ ಪ್ರಭಾವ ಉಂಟಾಗಲು ಆರಂಭಿಸಿತ್ತು. ಈ ಮಧ್ಯೆ ಪದವಿ ವ್ಯಾಸಂಗಕ್ಕೆಂದು ಅನಂತಪುರಕ್ಕೆ ಹೋದಾಗ, ಗಾಂಧೀಜಿಯವರು 'ಚಲೇ ಜಾವ್' ಚಳವಳಿಗೆ ಕರೆ ನೀಡಿದ್ದರು. ಈ ಹಿನ್ನೆಲೆಯಲ್ಲಿ ಚಳವಳಿಗೆ ಭಾಗವಹಿಸಿದ ಕೋ.ಚೆ. ಜೈಲು ಶಿಕ್ಷೆ ಅನುಭವಿಸಬೇಕಾಗಿ ಬಂತು. ಅಲ್ಲದೇ ಒಂದು ವರ್ಷಕಾಲ ವಿದ್ಯಾಭ್ಯಾಸ ಕುಂಟಿತವಾಯಿತು. ಪದವಿ ಪಡೆಯುವುದರೊಳಗೆ ಅವರ ವಿವಾಹ ನೆರವೇರಿತ್ತು. ವಿವಾಹದ ನಂತರ ಬೆಳಗಾವಿಯಲ್ಲಿ ಕಾನೂನು ಪದವಿ ಪಡೆಯಲೆಂದು ತೆರಳಿದರು. ಆ ಸಂದರ್ಭದಲ್ಲಿ ಏಕೀಕರಣ ಪರಿಷತ್ತಿನ ಸದಸ್ಯರಾಗಿ ಬಳ್ಳಾರಿ ಜಿಲ್ಲೆಯ ಪ್ರಶ್ನೆಗಳು ಬಂದಾಗಲೆಲ್ಲಾ ಸೂಕ್ತ ಉತ್ತರ ನೀಡುತ್ತಿದ್ದರು. ಈ ರೀತಿಯಾಗಿ ಏಕೀಕರಣ ಚಳವಳಿಯಲ್ಲಿ ದುಮುಕಿದರು. ಭಾಷಾವಾರು ಪ್ರಾಂತಗಳ ರಚನೆಗೆಂದು ಕೇಂದ್ರ ಸರ್ಕಾರ ಕೆಲವು ಆಯೋಗಗಳನ್ನು ನೇಮಿಸಿತ್ತು. ಈ ಆಯೋಗಗಳ ಮುಂದೆ ಕೋ. ಚೆಯವರು ಬಳ್ಳಾರಿ ಜಿಲ್ಲಾ ಕ್ರಿಯಾ ಸಮಿತಿಯ ಪರವಾಗಿ ಮನವಿ ಪತ್ರಗಳನ್ನು ಸಲ್ಲಿಸಿದರು. ಈ ಮಧ್ಯೆ ಕರ್ನಾಟಕ ಪ್ರಾದೇಶಿಕ ಕಾಂಗ್ರೆಸ್ ಕಮಿಟಿ, ಭಾಷಾವಾರು ಪ್ರಾಂತಗಳ ರಚನೆಗೆ ಒಮ್ಮತದ ಬೆಂಬಲ ನೀಡದ ಕಾರಣ ಕರ್ನಾಟಕ ರಾಜ್ಯ ರಚನೆಗೆ ವಿಳಂಬ ಮಾಡುತ್ತಿದ್ದ ಕಾಂಗ್ರೆಸ್‌ನ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ಅದರ ವಿರುದ್ಧವಾಗಿಯೇ ಚುನಾವಣೆಯಲ್ಲಿ ಸ್ಪರ್ಧಿಸಿ ಸೋತರು.

೧೯೪೬ರಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದ ಕೋ. ಚೆಯವರು ೧೯೬೫ರ ವೇಳೆಗೆ ಜಿಲ್ಲಾ ನ್ಯಾಯಾಧೀಶರಾಗಿ ನೇಮಕಗೊಂಡರು. ಆಗ ಅವರು ಬಹು ಧೀರ್ಘಕಾಲ ಇತ್ಯರ್ಥ ವಾಗದೇ ಇರುವ ಕೇಸುಗಳಿಗೆ ಕೈ ಹಾಕಿ ಅವುಗಳನ್ನು ವಿಚಾರಣೆಗೆ ಒಳಪಡಿಸಿ ತೀರ್ಪು ನೀಡಿದರು. ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಹೊಂದಿದ ನಂತರ ಮತ್ತೆ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಈ ಮಧ್ಯೆ ಅನೇಕ ಸಂಘ-ಸಂಸ್ಥೆಗಳಲ್ಲಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು.

ಕೋ. ಚೆಯವರು ವೃತ್ತಿಯಿಂದ ನ್ಯಾಯಾಧೀಶರಾಗಿದ್ದರು. ಆದರೆ ಅವರ ಪ್ರವೃತ್ತಿಯಲ್ಲಿ ಉತ್ತಮ ಸಾಹಿತಿಗಳಾಗಿದ್ದರು. ಇವರು ಅನೇಕ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೇ ಇವರ ಬರವಣಿಗೆಯೂ ತೀಕ್ಷ್ಣವಾಗಿದ್ದು, ಓದುಗರ ಮನ ಪರಿವರ್ತನೆಗೆ ಕಾರಣವಾಗಿದೆ ಎಂದು ಹೇಳಬಹುದು.

ಕೋ. ಚೆ ಎಂಬ ಕಾವ್ಯನಾಮದಿಂದಲೇ ಹೆಚ್ಚು ಪ್ರಸಿದ್ಧಿ ಹೊಂದಿರುವ ಇವರು, ಈ ವರೆಗೆ ೪ ಕವನ ಸಂಕಲನ, ೬ ಕಥಾ ಸಂಕಲನ, ೯ ಕಾದಂಬರಿಗಳು ೯ ಜೀವನ ಚರಿತ್ರೆಗಳು, ೨೫ ವಿಮರ್ಶೆ, ನಾಟಕ, ಪ್ರಬಂಧ, ೧೮ ಅನುವಾದಗಳು, ೬ ಸಂಪಾದಿತ, ೯ ಇತರ ಕೃತಿಗಳನ್ನು ರಚಿಸಿದ್ದಾರೆ. ಇವರು, ಬಸವಣ್ಣ, ಅರವಿಂದೋ, ರಾಮಕೃಷ್ಣ ಪರಮಹಂಸ ಹಾಗೂ ಸ್ವಾಮಿ ವಿವೇಕಾನಂದರ ಪರಮ ಭಕ್ತರು, ಇವರು ಅರವಿಂದರ 'ದಿವ್ಯ ಜೀವನ' ತತ್ವ ನಿಷ್ಠೆ ಮಹಾ ಕಾವ್ಯ 'ಸಾವಿತ್ರಿ' ಗಳನ್ನು ಭಾಷಾಂತರ ಮಾಡಿದ್ದಾರೆ. ಇವರ ಇತ್ತೀಚಿನ ಕಾದಂಬರಿ 'ಬೇಡಿ ಕಳಚಿತು ದೇಶ ಒಡೆಯಿತು' ಇದು ಸ್ವಾತಂತ್ರ್ಯ ಸಂಗ್ರಾಮವನ್ನು ಬಿಂಬಿಸುವ ದೇಶಾಭಿಮಾನಕ್ಕೆ ಹಿಡಿದ ಕನ್ನಡಿಯಾಗಿದೆ.

ಇವರು ಇಂದಿಗೂ ಅನೇಕ ಸಂಘ ಸಂಸ್ಥೆಗಳಲ್ಲಿ ಸೇರಿಕೊಂಡು ಸಮಾಜ ಸೇವೆಯಲ್ಲಿ ತೊಡಗಿರುವುದು ಪ್ರಶಂಸನೀಯವಾಗಿದೆ.

**ಅಧ್ಯಯನದ ಉದ್ದೇಶ**

ಪ್ರಸ್ತುತ ಅಧ್ಯಯನವು ಕೋ. ಚೆನ್ನಬಸಪ್ಪನವರ 'ಜೀವನ ಮತ್ತು ಸಾಧನೆ' ಕುರಿತು ಸಂಶೋಧನೆ ಮಾಡುವ ಉದ್ದೇಶವನ್ನು ಹೊಂದಲಾಗಿದೆ. ಕೋ. ಚೆಯವರು ಒಂದು ಮಧ್ಯಮ ವರ್ಗದಲ್ಲಿ ಹುಟ್ಟಿ ತಮ್ಮ ಸ್ವ ಸಾಮರ್ಥ್ಯದಿಂದ ಮೇಲೇರಿದ ವ್ಯಕ್ತಿಯಾಗಿದ್ದು, ಇಂದಿನ ಯುವ ಜನರಿಗೆ ಆದರ್ಶ ಪ್ರಾಯರಾಗಿದ್ದಾರೆ. ಅಲ್ಲದೆ ಅವರು ಹೊಂದಿದ ದೇಶ ಭಕ್ತಿ, ನಾಡ ಭಕ್ತಿಯು ಅವರಲ್ಲಿ ಹೇಗೆ ಪ್ರಭಾವಿತವಾಗಿತ್ತು ಎಂಬುದನ್ನು ಇಲ್ಲಿ ದಾಖಲಿಸುವ ಉದ್ದೇಶ ಹೊಂದಿದ್ದು, ಅವರ ಕಾಲೇಜಿನ ದಿನಗಳಲ್ಲಿ ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಯಲ್ಲಿ ಭಾಗವಹಿಸಿರುವ ಪ್ರಸಂಗಗಳನ್ನು ಇಲ್ಲಿ ಚರ್ಚಿಸಲಾಗುತ್ತಿದೆ.

ಪ್ರಸ್ತುತ ಸಂದರ್ಭಕ್ಕೆ ಇವರ ಹೋರಾಟಗಳು ಬಹು ಮುಖ್ಯ ಮಾನದಂಡಗಳಾಗುತ್ತವೆ. ಇಂದಿನ ದಿನದಲ್ಲಿ ರಾಷ್ಟ್ರ ಪ್ರೇಮದ ಕಲ್ಪನೆ ಕಡಿಮೆಯಾಗಿರುವ ಯುವಕರಿಗೆ ರಾಜಕೀಯ

ದುರುದ್ದೇಶದಿಂದ ಪ್ರತ್ಯೇಕ ರಾಜ್ಯದ ಹೋರಾಟಗಾರರಿಗೆ ಇವರ ಜೀವನ ಚಿತ್ರಣವನ್ನು ತಿಳಿಸುವ ಮಹತ್ವದ ಉದ್ದೇಶವನ್ನು ಹೊಂದಿದ್ದು, ಹಾಗೆ ಇವರೊಬ್ಬ ಸಾಹಿತಿಗಳಾಗಿರುವುದರಿಂದ ಅವರ ಬರವಣಿಗೆಗಳನ್ನು ಇಲ್ಲಿ ತಿಳಿಸುವುದರೊಂದಿಗೆ ನಾಡು-ನುಡಿಗಾಗಿ ಸಲ್ಲಿಸಿದ ಸೇವೆಗಳನ್ನು ಮತ್ತು ಚಿಂತನೆಗಳನ್ನು ಇಲ್ಲಿ ಪ್ರಸ್ತಾಪಿಸಿ, ಪ್ರಸ್ತುತ ಸಂದರ್ಭದಲ್ಲಿ ಅವರ ಚಿಂತನೆಗಳು ಹೇಗೆ ಸಹಕಾರಿಯಾಗಿವೆ ಎಂಬುದನ್ನು ಇಲ್ಲಿ ತಿಳಿಸುವ ಉದ್ದೇಶವನ್ನು ಈ ಅಧ್ಯಯನ ಒಳಗೊಂಡಿದೆ.

ಪ್ರಸ್ತುತವಾಗಿ ಶ್ರೀಮಂತರು ತಮ್ಮ ಆಸೆಗಳಿಗೆ ಮತ್ತೊಬ್ಬರನ್ನು ಬಲಿಕೊಡುವ ಈ ದಿನಗಳಲ್ಲಿ ಸ್ವ ಸಾಮರ್ಥ್ಯದಿಂದ ಮೇಲೆತ್ತಿರುವುದನ್ನು ಇಲ್ಲಿ ದಾಖಲಿಸುವುದರೊಂದಿಗೆ, ಬಡವರ, ಶೋಷಕರಿಗೆ ಮಾದರಿಯಾಗುವ ನಿಟ್ಟಿನಲ್ಲಿ ಈ ಅಧ್ಯಯನ ನಡೆಸುವ ಉದ್ದೇಶವನ್ನು ಹೊಂದಲಾಗಿದೆ.

ಕೋ. ಚೆಯವರು ಬಹುಮುಖ ಪ್ರತಿಭೆ ಹಾಗೂ ವ್ಯಕ್ತಿತ್ವವನ್ನು ಹೊಂದಿದವರಾಗಿದ್ದು, ಅವರೊಬ್ಬ ನ್ಯಾಯವಾದಿಯಾಗಿ ಮತ್ತು ಜಿಲ್ಲಾ ನ್ಯಾಯಾಧೀಶರಾಗಿ ನಿರ್ವಹಿಸಿದ ಕಾರ್ಯಗಳನ್ನು ಪ್ರಸ್ತಾಪಿಸುವುದರೊಂದಿಗೆ ಅವರು ನ್ಯಾಯಾಧೀಶರಾಗಿ ತಾಳಿದ ಧೋರಣೆಗಳನ್ನು ಉಲ್ಲೇಖಿಸುವುದರ ಮೂಲಕ ಇಂದಿನ ನ್ಯಾಯಾಂಗದ ವ್ಯವಸ್ಥೆಗೆ ಕೋ. ಚೆಯವರು ನಿಲುವುಗಳು ಅವಶ್ಯಕವಾಗಿದ್ದು, ಅವುಗಳನ್ನು ಇಲ್ಲಿ ದಾಖಲಿಸುವ ನಿಟ್ಟಿನಲ್ಲಿ ಅಧ್ಯಯನ ನಡೆಸಲಾಗುತ್ತಿದೆ.

ಕೋ. ಚೆಯವರು ವಿವಿಧ ಕ್ಷೇತ್ರಗಳಲ್ಲಿ ಕಾರ್ಯೋನ್ಮುಖವಾಗಿ ತಮ್ಮ ಸೇವೆ ಸಲ್ಲಿಸಿದರು. ಅವರು ಬಳ್ಳಾರಿ ಜಿಲ್ಲೆಗೆ ಸೇರಿದ್ದರು ಎಂಬುದು ಈ ಭಾಗದ ಬಹುತೇಕ ಜನರಿಗೆ ತಿಳಿಯದಾಗಿರುವುದು. ಹಾಗಾಗಿ ತೆರೆಮರೆಯಲ್ಲಿರುವ ಇಂತಹ ವ್ಯಕ್ತಿಯನ್ನು ಅಧ್ಯಯನ ಮಾಡಿ ಅವರ ಜೀವನ ಮತ್ತು ಸಾಧನೆಗಳನ್ನು ತಿಳಿಸುವ ಅವಶ್ಯಕತೆ ತುಂಬಾ ಇದೆ. ಹಾಗಾಗಿ ಕೋ. ಚೆಯವರು ಜೀವನ ಮತ್ತು ಸಾಧನೆ ಕುರಿತು ನಿಬಂಧನೆ ರಚಿಸಲಾಗಿದೆ.

**ಅಧ್ಯಯನದ ವಿಧಿ-ವಿಧಾನಗಳು**

ಕೋ. ಚೆಯವರ ಜೀವನ ಮತ್ತು ಸಾಧನೆಗಳನ್ನು ಕುರಿತು ಚಾರಿತ್ರಿಕವಾಗಿ ಅಧ್ಯಯನ ಮಾಡಲಾಗಿದೆ, ಇಲ್ಲಿನ ಸಂಗತಿಗಳನ್ನು ತಾತ್ವಿಕವಾಗಿ, ವಿಮರ್ಶಾತ್ಮಕವಾಗಿ ವಿಶ್ಲೇಷಣೆ ನಡೆಸಲಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಪ್ರಾಥಮಿಕ ಮತ್ತು ಆನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಜೊತೆಗೆ ಸಮಕಾಲೀನ ಸಂದರ್ಭದಲ್ಲಿ ಎಲ್ಲಾ ಆಗುಹೋಗುಗಳ ನಡುವೆ ನಡೆದ ಪತ್ರವ್ಯವಹಾರ, ಹಳೆಯ ದಾಖಲೆ ಮತ್ತು ಪತ್ರಿಕೆಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ಹಾಗೆಯೇ ಕೋ.ಚೆಯವರೊಂದಿಗೆ ಸಂದರ್ಶನ ನಡೆಸಿ ಅವರ ಹೇಳಿಕೆಗಳನ್ನು ವಾಸ್ತವವಾಗಿ ತಿಳಿಯುವ ದೃಷ್ಟಿಯಿಂದ ಕ್ಷೇತ್ರಕಾರ್ಯ ಕೈಗೊಂಡು ಅವಶ್ಯಕವಾಗಿರುವ ಎಲ್ಲಾ ದಾಖಲೆಗಳನ್ನು ವಿಮರ್ಶೆಗೆ ಒಳಪಡಿಸಿ, ಅಧ್ಯಯನಕ್ಕೆ ಚರಿತ್ರೆಯ ಶಿಸ್ತಿನ ವಿಧಿ-ವಿಧಾನಗಳ ಮೂಲಕ ಅಧ್ಯಯನವನ್ನು ಮಾಡಲಾಗಿದೆ. ಕೋ. ಚೆಯ ಸಮಕಾಲಿನವರನ್ನು ಭೇಟಿ ಮಾಡಿ ಅವರ ಬಗೆಗಿನ ಮಾಹಿತಿ ಪಡೆದು ವಿಶ್ಲೇಷಿಸಲಾಗಿದೆ. ಕೋ. ಚೆಯವರು ಬರೆದ ಕೃತಿಗಳಲ್ಲದೆ, ಇತರರೂ ಅವರ ಬಗ್ಗೆ ಬರೆದವುಗಳನ್ನು ಅಧ್ಯಯನ ಮಾಡಲಾಗಿದೆ.

**ಅಧ್ಯಯನದ ಸ್ವರೂಪ**

ಪ್ರಸ್ತುತ ಅಧ್ಯಯನವು ಕೋ.ಚೆಯವರ ಜೀವನ ಮತ್ತು ಸಾಧನೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಒಟ್ಟು ಎಂಟು ಅಧ್ಯಯನಗಳನ್ನು ಮಾಡಿಕೊಳ್ಳಲಾಗಿದೆ.

ಅಧ್ಯಾಯ ಒಂದರಲ್ಲಿ ಪ್ರಸ್ತಾವನೆ, ಅಧ್ಯಯನದ ಉದ್ದೇಶ, ವಿಧಿ–ವಿಧಾನ ಮತ್ತು ಸ್ವರೂಪವನ್ನು ವಿಶ್ಲೇಷಿಸಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೋ. ಚೆಯವರ ಜೀವನವನ್ನು ಸಮಗ್ರವಾಗಿ ಪರಿಚಯಿಸಲಾಗಿದೆ, ಇದರಲ್ಲಿ ವೈಯಕ್ತಿಕ ಬದುಕು, ರಾಜಕೀಯ ಜೀವನ ಮತ್ತು ಸಾರ್ವತ್ರಿಕ ಜೀವನವನ್ನು ಕುರಿತು ಬೆಳಕು ಚೆಲ್ಲಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಸ್ವಾತಂತ್ರ್ಯ ಚಳವಳಿಯ ಹಿನ್ನಲೆ, ಕೋ.ಚೆಯವರ ಮೇಲೆ ಪ್ರಭಾವ ಬೀರಿದ ಅಂಶಗಳು, ಅನಂತಪುರದಲ್ಲಿ ಕಾಲೇಜಿನ ವಿದ್ಯಾರ್ಥಿಯಾಗಿ ಚಳವಳಿಯಲ್ಲಿ ಭಾಗವಹಿಸಿ, ಜೈಲು ಶಿಕ್ಷೆಯನ್ನು ಅನುಭವಿಸಿದ ಘಟನೆಗಳನ್ನು ಮತ್ತು ಇವರನ್ನು ಬಿಡುಗಡೆಗೊಳಿಸಿದ ಬಳ್ಳಾರಿಯ ಕಲಾವಿದ ಹಾಗೂ ವಕೀಲರಾದ ರಾಘವ ಅವರನ್ನು ಕುರಿತು ವಿಶ್ಲೇಷಿಸುವುದರ ಜೊತೆಗೆ, ಚಳವಳಿಯಲ್ಲಿ ಭಾಗವಹಿಸಿದ ನಂತರದ ಜೀವನವನ್ನು ಇಲ್ಲಿ ಪರಿಚಯಿಸಿಕೊಡಲಾಗಿದೆ.'

ನಾಲ್ಕನೆಯ ಅಧ್ಯಾಯದಲ್ಲಿ ಭಾಷಾವಾರು ಪ್ರಾಂತ ರಚನೆಯ ಹಿನ್ನೆಲೆ, ಅವುಗಳು ಉಂಟುಮಾಡಿದ ಪ್ರಭಾವವನ್ನು ಪ್ರಸ್ತಾಪಿಸುತ್ತಾ ಕೋ. ಚೆಯವರ ಏಕೀಕರಣ ಚಳವಳಿಯಲ್ಲಿ ಭಾಗವಹಿಸಿದ ಬಗೆಯನ್ನು ಚರ್ಚಿಸುವುದರೊಂದಿಗೆ ಭಾಷಾವಾರು ಪ್ರಾಂತ ರಚನೆಯಲ್ಲಿ ಅವರ ಪಾತ್ರವನ್ನು ಇಲ್ಲಿ ಚರ್ಚಿಸಲಾಗಿದೆ.

'ನ್ಯಾಯವಾದಿಯಾಗಿ ಮತ್ತು ನ್ಯಾಯಾಧೀಶರಾಗಿ ಕೋ. ಚೆನ್ನಬಸಪ್ಪನವರು' ಎಂಬ ಐದನೇ ಅಧ್ಯಾಯದಲ್ಲಿ ಕೋ. ಚೆಯವರ ನ್ಯಾಯಾಲಯದ ಅನುಭವಗಳನ್ನು ಮತ್ತು ಕಾರ್ಯನಿರ್ವಹಿಸಿದ ಪ್ರಮುಖ ಕೇಸುಗಳನ್ನು ಸಮೀಕ್ಷಿಸಲಾಗುತ್ತದೆ.

ಅಧ್ಯಾಯ ಆರರಲ್ಲಿ ಕೋ.ಚೆಯವರ ಚಿಂತನೆಗಳನ್ನು ಮತ್ತು ಅವರ ಸಾಹಿತ್ಯ ರಚನೆಗಳನ್ನು ಕುರಿತು ವಿವರಿಸಲಾಗುತ್ತಿದೆ. ಇದರಲ್ಲಿ ಕೋ. ಚೆಯವರ ಚಿಂತನೆಗಳನ್ನು ನಾಲ್ಕು ರೀತಿಯಾಗಿ ಗುರುತಿಸಲಾಗಿದೆ. ಹಾಗೆಯೇ ಅವರ ಸಾಹಿತ್ಯ ಕೃತಿಗಳನ್ನು ಮತ್ತು ಬರವಣಿಗೆಯಲ್ಲಿ ವ್ಯಕ್ತವಾಗಿರುವ ವಿಚಾರಗಳನ್ನು ಸಂಕ್ಷಿಪ್ತವಾಗಿ ಪ್ರಸ್ತುತ ಸಂದರ್ಭಕ್ಕೆ ತಕ್ಕಂತೆ ತಿಳಿಸಲಾಗುತ್ತದೆ.

ಅಧ್ಯಾಯ ಏಳರಲ್ಲಿ ಕೋ. ಚೆಯವರ ಸಮಾಜಮುಖಿ ಕಾರ್ಯಗಳನ್ನು ಅಧ್ಯಯನ ಮಾಡಲಾಗುತ್ತಿದ್ದು, ಅವರ ಶೈಕ್ಷಣಿಕ ಮತ್ತು ಅಧ್ಯಾತ್ಮಿಕ ಕ್ಷೇತ್ರಗಳಿಗೆ ಸಲ್ಲಿಸಿರುವ ಸೇವೆಗಳನ್ನು ಇಲ್ಲಿ ವಿವರಿಸಲಾಗುತ್ತದೆ.

ಅಧ್ಯಾಯ ಎಂಟರಲ್ಲಿ ಒಟ್ಟಾರೆ ಈ ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಉಪಸಂಹಾರದಲ್ಲಿ ವಿಶ್ಲೇಷಿಸಲಾಗಿದೆ, ಇವುಗಳ ಜೊತೆ ಅನುಬಂಧಗಳು, ಛಾಯಾಚಿತ್ರಗಳು ಮತ್ತು ಗ್ರಂಥ ಋಣಿಯನ್ನು ನೀಡಲಾಗಿದೆ.

# ಅಧ್ಯಾಯ ೨

## ಕೋ ಚೆನ್ನಬಸಪ್ಪನವರ ಜೀವನ ಪರಿಚಯ

೨.೧ ವೈಯಕ್ತಿಕ ಜೀವನ

೨.೨ ರಾಜಕೀಯ ಜೀವನ

೨.೩ ಸಾರ್ವಜನಿಕ ಜೀವನ

# ಅಧ್ಯಾಯ ೨
# ಕೋ ಚೆನ್ನಬಸಪ್ಪನವರ ಜೀವನ ಪರಿಚಯ

---

**ನಾ**ಡು ಕಂಡ ಮುತ್ಸದ್ಧಿ ನಾಯಕ, ಸ್ವಾತಂತ್ರ್ಯ ಹೋರಾಟಗಾರ, ಏಕೀಕರಣದ ರುವಾರಿ, ಸಾಹಿತಿ, ಚಿಂತಕ, ಕನ್ನಡ ಪರ ಸಂಘಟನಾಕಾರದ ಕೋ. ಚೆನ್ನಬಸಪ್ಪನವರ ವೈಯಕ್ತಿಕ ಬದುಕು, ರಾಜಕೀಯ ಹಾಗೂ ಸಾರ್ವಜನಿಕ ಜೀವನವನ್ನು ಈ ಅಧ್ಯಯನದಲ್ಲಿ ವಿವರಿಸಲಾಗುತ್ತಿದೆ

ಬಳ್ಳಾರಿ ಜಿಲ್ಲೆಯ ಎಂಟು ತಾಲೂಕುಗಳಲ್ಲಿ ಕೂಡ್ಲಿಗಿ ತಾಲೂಕು ಒಂದು. ಈ ತಾಲೂಕಿನ ಗಡಿಯಲ್ಲಿ ಬರುವ ಕೊನೆಯ ಹಳ್ಳಿಯಾದ ಆಲೂರು ಕೋ. ಚೆನ್ನಬಸಪ್ಪನವರ ಊರು. ಈ ಆಲೂರು ಪಕ್ಕದಲ್ಲಿಯೇ ಮಹಾದಾಸೋಹಿ ಮೂಲ ಶರಣಾರ್ಯರ ಮೂಲ ಸಮಾಧಿ ಕಾನಾಮಡುಗಿನಲ್ಲಿದೆ. ಇಂತಹ ಐತಿಹಾಸಿಕ ಸ್ಥಳದ ಪಕ್ಕದಲ್ಲಿಯೇ ಆಲೂರು ಕೂಡ ಇದೆ.

ಈ ಭಾಗದ ಪ್ರತಿ ಮನೆಯಲ್ಲಿ ಹುಟ್ಟಿದ ಬಹುತೇಕ ಹಿರಿಯ ಮಕ್ಕಳಿಗೆ ಶರಣಪ್ಪ, ಶರಣಮ್ಮ, ಚೆನ್ನಬಸಪ್ಪ, ಚೆನ್ನಬಸಮ್ಮ ಎಂದು ಶರಣಾರ್ಯರ ನಾಮಕರಣ ಮಾಡುವುದು ಸರ್ವೇ ಸಾಮಾನ್ಯವಾಗಿದೆ.[೧] ಈ ಹಿನ್ನೆಲೆಯಲ್ಲಿ ಕೋ. ಚೆನ್ನಬಸಪ್ಪನವರ ಹೆಸರಿನ ಮೇಲೆ ಶರಣಾರ್ಯರ ಪ್ರಭಾವವಿದೆ.

## ೨.೧ ವೈಯಕ್ತಿಕ ಬದುಕು

ಕೋ. ಚೆನ್ನಬಸಪ್ಪನವರು ಆಲೂರು ಗ್ರಾಮದ ಲಿಂಗಾಯತ ಸಮುದಾಯಕ್ಕೆ ಸೇರಿದ ಕೋಣಂ ವೀರಣ್ಣ ಬಸಮ್ಮ ಎಂಬ ದಂಪತಿಗಳಿಗೆ ಹಿರಿಯ ಮಗನಾಗಿ ೧೯೨೨ರ ಮಾರ್ಚ್ ೧ರಂದು (ತನ್ನ ತಾಯಿಯ ತವರೂರಾದ ಕಾನಾಮಡುಗಿ)ನಲ್ಲಿ ಜನಿಸಿದರು. ಇವರ ತಾಯಿ ಕಾನಾಮಡುಗಿನ ಬೆನಕಶೆಟ್ಟಿಯ ವಂಶಕ್ಕೆ ಸೇರಿದವರು. ಕೋ. ವೀರಣ್ಣನವರು ತಮ್ಮ ಬಾಲ್ಯಾವಸ್ಥೆಯಲ್ಲಿಯೇ ತಂದೆಯನ್ನು ಕಳೆದುಕೊಂಡು ತಾಯಿಯ ಆಶ್ರಯದಲ್ಲಿ ಬೆಳೆದರು.

ಇವರ ತಂದೆ ಕಾಯಕ ನಿಷ್ಠುರರು, ವ್ಯಾಪಾರ ಮತ್ತು ಕೃಷಿಕ ವೃತ್ತಿಯನ್ನು ಕೈಗೊಂಡು ಜೀವನ ಸಾಗಿಸಿದವರು. ಅಂದು 'ಮಳೆ ಇದ್ದರೇ ಬೆಳೆ' ಎಂಬುವಂತ ಪರಿಸ್ಥಿತಿ ಇದ್ದರಿಂದ ಇವರ ಮನೆತನದ ಆರ್ಥಿಕ ಪರಿಸ್ಥಿತಿ ಅಷ್ಟೇನು ಉತ್ತಮವಾಗಿರಲಿಲ್ಲ. ಇಂಥವರ ಉದರದಲ್ಲಿ ಜನಿಸಿದ ಕೋ. ಚೆನ್ನಬಸಪ್ಪನವರು ತಮ್ಮ ಸ್ವಂತ ವ್ಯಕ್ತಿತ್ವದ ಫಲಶ್ರುತಿಯಿಂದಾಗಿ ಸ್ವಾತಂತ್ರ್ಯ ಹೋರಾಟಗಾರರಾಗಿ, ಏಕೀಕರಣ ಚಳವಳಿಯ ನಾಯಕರಾಗಿ, ಸಾಹಿತಿಗಳಾಗಿ, ಸಮಾಜ ಸುಧಾರಕರಾಗಿ, ಜಿಲ್ಲಾ ನ್ಯಾಯಾಧೀಶರಾಗಿ ಹಾಗೆಯೇ ವಕೀಲರಾಗಿ ಕರ್ನಾಟಕ ರಾಜ್ಯದ್ಯಾಂತ ಗುರಿತಿಸಿಕೊಂಡಿದ್ದಾರೆ.

**ಮನೆತನದ ಹಿನ್ನೆಲೆ**

ಕೋ. ಚೆಯವರ ಮನೆತನವು ಮೂಲತಃ ಲಿಂಗಾಯತ ಸಮುದಾಯ. ಇವರ ಅಜ್ಜ ಚೆನ್ನವೀರಪ್ಪನವರು. "ಮೂಲತಃ ಕಳೆದ ಶತಮಾನದ ಕೊನೆಯಲ್ಲಿ-ಚಿತ್ರದುರ್ಗ ಜಿಲ್ಲೆಯ ಜಗಳೂರು ತಾಲೂಕು, ಅಣಬೂರು ಎಂಬ ಹಳ್ಳಿಯವರು."[೨] ಅವರು ಚಿಕ್ಕಂದಿನಲ್ಲಿಯೇ ತಂದೆ-ತಾಯಿಗಳನ್ನು ಕಳೆದುಕೊಂಡು ತಬ್ಬಲಿಯಾಗಿ ಬೆಳೆದವರು. ಅಣಬೂರಿಗೆ ಚೆನ್ನವೀರಪ್ಪನವರ ಹಿರಿಯರು ಶಿವಮೊಗ್ಗ ಜಿಲ್ಲೆಯಿಂದ ವಲಸೆ ಬಂದಿದ್ದರು. ಕೋ. ಚೆಯವರ ಪೂರ್ವಿಕರು ಶಿವಮೊಗ್ಗದಲ್ಲಿ ಇದ್ದುಕೊಂಡು ಬಳ್ಳಾರಿ ಜಿಲ್ಲೆಯೊಡನೆ ವ್ಯಾಪಾರ ಸಂಪರ್ಕವನ್ನು ಹೊಂದಿದ್ದರು. ಆಗ ಅವರು ಕೋಣನ(ಕೋಣಗಳ) ಮೇಲೆ ಅಡಿಕೆ ವ್ಯಾಪಾರ ಮಾಡುತ್ತಿದ್ದರಿಂದ[೩] ಕೋ.ಚೆಯವರ ಪೂರ್ವಿಕರಿಗೆ "ಕೋಣನವರು"[೪]ಎಂದು ಕರೆದಿದ್ದಾರೆ.

ಕೋ. ಚೆಯವರ ತಾತನ ದೂರದ ಸಂಬಂಧಿಗಳು ಕೂಡ್ಲಿಗಿ ತಾಲೂಕಿನ 'ಹುಡೇಂ' ಎಂಬಲ್ಲಿ ನೆಲೆಸಿದ್ದರ ಬಗ್ಗೆ ಕೋ. ಚೆಯವರ ಆತ್ಮಕಥನದಲ್ಲಿ ದಾಖಲಿಸಿದ್ದಾರೆ. ಅದು ಕೋಣನವರ ಇನ್ನೊಂದು ಶಾಖೆಯಾಗಿದ್ದು, ಅಲ್ಲಿಗೆ ವಲಸೆ ಹೋದ ಬಗ್ಗೆ ತಿಳಿದು ಬರುತ್ತದೆ.

ಕೋ. ಚೆಯವರ ಪೂರ್ವಿಕರು 'ಹುಡೇಂ'ಗೆ ವಲಸೆ ಹೋದ ತರುವಾಯ ಆಲೂರಿಗೆ ಒಂದು ಶಾಖೆ ಬಂದು ನೆಲಸಿತ್ತು. ಅದರಲ್ಲೂ ಗಡ್ಡೆ ಚನ್ನಪ್ಪಜ್ಜ ಕುಟುಂಬವು ಒಂದು. ಇವರು ತಮ್ಮ ಸ್ವ-ಸಾಮರ್ಥ್ಯದಿಂದ ದುಡಿದು ತಕ್ಕ ಮಟ್ಟಿಗೆ ಶ್ರೀಮಂತರಾಗಿದ್ದರೂ, ಅವರು ಉಳ್ಳಾಗಡ್ಡೆ ವ್ಯಾಪಾರ ಮಾಡುತ್ತಿದ್ದರಿಂದ ಅವರಿಗೆ ಗಡ್ಡೆ ಚನ್ನಪ್ಪಜ್ಜ ಎಂದು ಕರೆಯುತ್ತಾರೆ. ಅವರೇ ಕೋ. ಚೆಯವರ ಪೂರ್ವಿಕರನ್ನು ಅಲೂರಿಗೆ ಕರೆತಂದು ಸಹಾಯಧನ ನೀಡಿ ವ್ಯಾಪಾರಕ್ಕೆ ಹಚ್ಚಿದರು. ಹೀಗೆ ಕೋ.ಚೆಯವರ ಪೂರ್ವಿಕರು ಅಲೂರಿಗೆ ಬಂದು ನೆಲೆಸಿದರು ಎಂದು ತಿಳಿದು ಬರುತ್ತದೆ.

ಕೋ. ಚೆಯವರ ತಾಯಿಯ ತವರಿನವರ ಹಿರಿಯರೆಲ್ಲಾ ಆಗರ್ಭ ಶ್ರೀಮಂತಿಕೆಯಲ್ಲಿ ಮೆರೆದವರು. ಅವರನ್ನು ಬೆನಕ ಶೆಟ್ಟಿಯವರು ಎಂದು ಆ ಊರಿನವರು ಕರೆಯುತ್ತಾರೆ. ಅಂತಹ ಮನೆತನದಲ್ಲಿ ಜನಿಸಿದ ಕೋ. ಚೆಯವರ ತಾಯಿ ಬಸಮ್ಮನವರು ಅಪಾರ ದೈವಭಕ್ತರಾಗಿದ್ದರು. ಆದ್ದರಿಂದ ತಾಯಿಯ ಮಡಿಲಲ್ಲಿ ಬೆಳೆದ ಕೋ.ಚೆಯವರಿಗೆ ಬಸವ ಭಕ್ತಿ, ಗುರುಭಕ್ತಿ ಮುಂತಾದವುಗಳ ಪ್ರಭಾವ ಕೋ.ಚೆಯವರ ಮೇಲೆ ಬೀರಿತು.

**ಬಾಲ್ಯ ಮತ್ತು ಶಿಕ್ಷಣ**

ಅಂದಿನ ಶಿಕ್ಷಣದ ವ್ಯವಸ್ಥೆಯು ಇಂದಿನ ಹಾಗೆ ಇರಲಿಲ್ಲ. ಆಗ ಐದನೇ ತರಗತಿ ಓದಿದವರು ಉಪಾಧ್ಯಾಯರಾಗಲಿಚ್ಛಿಸಿದರೆ, 'ಲೋಯರ್ ಟೀಚರ್ ಟ್ರೈನಿಂಗ್ ಶಾಲೆ'ಯಲ್ಲಿ ಒಂದು ವರ್ಷ ತರಬೇತಿ ಪಡೆದರೆ ಸಾಕಾಗಿತ್ತು. ಅವರನ್ನು ಉಪಾಧ್ಯಾಯರಾಗಿ ನೇಮಕ ಮಾಡುತ್ತಿದ್ದರು. ಹಾಗೆ ಅಂದು ಶಾಲೆಗೆ ಮಕ್ಕಳನ್ನು ಸೇರಿಸುವ ವ್ಯವಸ್ಥೆ ಇಂದಿನ ಹಾಗೆ ಇರಲಿಲ್ಲ. ಮಕ್ಕಳನ್ನು ಶಾಲೆಗೆ ಸೇರಿಸುವ ದಿನದಂದು ಸ್ವರಸತಿ ಪೂಜೆಯನ್ನು ಮಕ್ಕಳ ಕೈಯಿಂದ ಮಾಡಿಸಿ ಹುಡುಗರನ್ನು ಶಾಲೆಗೆ ಸೇರಿಸಿಕೊಳ್ಳುತ್ತಿದ್ದರು.

ಆರಂಭದ ದಿನದಂದು ಶಿಕ್ಷಕರು ಸ್ಲೇಟಿನ ಮೇಲೆ ಅಥವಾ ಹಲಗೆಯ ಮೇಲೆ 'ಶ್ರೀ ಓಂ ನಮಃ ಶಿವಾಯ', 'ಸಿದ್ಧಂ ನಮಃ' ಎಂದು ಬರೆದು, ಅದರ ಮೇಲೆ ವಿದ್ಯಾರ್ಥಿಯಿಂದ ತಿದ್ದಿಸುತ್ತಿದ್ದರು.೫ ಈ ರೀತಿಯಾಗಿ ಶಾಲೆಗೆ ದಾಖಲಾತಿಯನ್ನು ಮಾಡಿಕೊಳ್ಳುತ್ತಿದ್ದರು. ಇಂತಹ ಸಂದರ್ಭದಲ್ಲಿ ಕೋ. ಚೆಯವರು ಇನ್ನು ನಾಲ್ಕು ವರ್ಷದವರಾಗಿದ್ದಾಗಲೇ (ಅವರಿಗೆ ಶಾಲೆಗೆ ಸೇರಿಸುವ ವಯಸ್ಸು ಆಗಿರಲಿಲ್ಲ) ಅವರ ಸೋದರಮಾವನಾದ ಅಯ್ಯಪ್ಪನ ಜೊತೆಗೆ ಶಾಲೆಗೆ ಹೋಗಲು ಪ್ರಾರಂಭಿಸಿದರು. ಆಗಲೇ ಅವರು ಓದಲು, ಬರೆಯಲು ಕಲಿತು ಕೊಂಡರು. ಅವರಿಗೆ ಐದು ವರ್ಷ ,ತುಂಬಿದ ನಂತರ ಅಧಿಕೃತವಾಗಿ ಶಾಲೆಗೆ ದಾಖಲಿಸಿದರೂ ಅವರಿಗೆ ಮೊದಲನೇ ತರಗತಿಯ ಪಠ್ಯಗಳ ಅಭ್ಯಾಸವಾಗಿ ಹೋಗಿತ್ತು. ಅಂದು ಒಂದೇ ಕೋಣೆಯಲ್ಲಿ ಎಲ್ಲ ತರಗತಿಯ ವಿದ್ಯಾರ್ಥಿಗಳು ಕುಳಿತು ಕೊಳ್ಳಬೇಕಾಗಿದ್ದರಿಂದ ಕೋ. ಚೆಯವರಿಗೆ ಮುಂದಿನ ತರಗತಿಯ ಪಠ್ಯಗಳು ಸುಲಭವಾಗಿ ತಿಳಿದುಕೊಳ್ಳಲು ನೆರವಾಗುತ್ತಿತ್ತು. ಹಾಗೂ ತರಗತಿಯಲ್ಲಿ ಬೋಧಿಸುವ ಉಪಾಧ್ಯಾಯರುಗಳಾದ ಚೆನ್ನಬಸಯ್ಯ, ಜಿ. ಸೀತಾ ರಾಮ್‌ಭಟ್ ಹಾಗೂ ಎಸ್.ಎಂ. ಚೆನ್ನವೀರಯ್ಯನವರು ಕೋ. ಚೆಯವರ ಜ್ಞಾನಾರ್ಜನೆಯ ದಾಹವನ್ನು ನೀಗಿಸಲು ನೆರವಾದರು.

ಅಂದಿನ ಪಂಚಾಯ್ತಿ ಬೋರ್ಡ್ ಅಧ್ಯಕ್ಷರಾಗಿದ್ದ ಗುರಣ್ಣನವರು ಡೇವಿಡ್ ಎಂಬ ಶಾಲಾ ತನಿಖಾಧಿಕಾರಿಯವರ ಸಲಹೆ ಮೇರೆಗೆ ಹೈಯರ್ ಎಲಿಮೆಂಟರಿ ಶಾಲೆಯನ್ನು ಆರಂಭಿಸಿದರು. ಕೋ. ಚೆಯವರು ಕಾನಾಮಡುಗಿನಲ್ಲಿ ಲೋಯರ್ ಎಲಿಮೆಂಟರಿ ಶಾಲೆಯನ್ನು ಪೂರ್ಣಗೊಳಿಸುವ ಸಮಯಕ್ಕಾಗಲೇ ಹೈಯರ್ ಎಲಿಮೆಂಟರಿ ಶಾಲೆ ಸ್ಥಾಪನೆಯಾಗಿದ್ದರಿಂದ ಕಾನಾಮಡುಗಿನಲ್ಲೇ ವಿಧ್ಯಾಭ್ಯಾಸವನ್ನು ಮುಂದುವರೆಸಿದರು. ಆದರೆ ಮುಂದಿನ ಶಿಕ್ಷಣದ ದಾರಿ ಸುಗಮವಾಗಿರಲಿಲ್ಲ. ಅವರ ತಂದೆ ಮಗನಿಗೆ ಒಂದು ಅಂಗಡಿಯನ್ನು ತೆರೆದು ವ್ಯಾಪಾರಕ್ಕೆ ತೊಡಗಿಸಬೇಕೆಂದುಕೊಂಡಿದ್ದರು. ಆದರೆ ಕೋ. ಚೆಯವರಿಗೆ ಓದ ಬೇಕೆಂಬ ಆಸೆ ಇದ್ದುದರಿಂದ ಗುರಣ್ಣನವರ (ಗುರಣ್ಣನವರು ಕೋ. ಚೆಯವರ ಅಜ್ಜಿಯ ಸೋದರಳಿಯ) ಬಳಿಹೋಗಿ ವಿಷಯವನ್ನು ಪ್ರಸ್ತಾಪಿಸಿದರು. ಇದನ್ನು ತಿಳಿದ ಗುರಣ್ಣನವರು ಕೋ. ಚೆಯವರ ತಂದೆಗೆ ಬುದ್ಧಿ ಹೇಳಿ ಮಗನ ವಿದ್ಯಾಭ್ಯಾಸಕ್ಕೆ ಅನುಮತಿ ದೊರೆಕಿಸಿಕೊಟ್ಟರು.

ಕೋ. ಚೆಯವರ ಜೊತೆಗೆ ಉತ್ತೀರ್ಣರಾದ ಹುಡುಗರಲ್ಲಿ ಏಳು ವಿದ್ಯಾರ್ಥಿಗಳು ಹೈಸ್ಕೂಲಿಗೆ ಹೋಗಬೇಕೆಂದು ನಿಶ್ಚಯಿಸಿದ್ದರು. ಅವರೆಲ್ಲ ರಾಯದುರ್ಗದಲ್ಲಿ ಹೈಸ್ಕೂಲ್ ಸೇರಲು ಹೋದಾಗ

ಅಲ್ಲಿಯ ಮುಖ್ಯೋಪಾಧ್ಯಾಯರಾದ 'ಸುಂದಂ ಐಯರ್'ರವರು ಈ ಏಳು ಜನರಿಗೆ ಒಂದು ದಿನವೆಲ್ಲಾ ಪರೀಕ್ಷೆ ನಡೆಸಿ, ಮರುದಿನ ಫಲಿತಾಂಶ ಪ್ರಕಟಿಸಿ ನಿಮ್ಮನ್ನು 'ಫೋರ್ತ್ ಫಾರಂ'ಗೆ ಸೇರಿಸುವುದಿಲ್ಲ. ಬೇಕಾದರೆ ಏಳನೆ ತರಗತಿಗೆ (ಈಗಿನ ಆರನೇ ತರಗತಿಗೆ) ಸೇರಿಸುತ್ತೇನೆಂದು ತಿಳಿಸಿದರು. ಆದರೆ ಫೋರ್ತ್ ಫಾರಂಗೆ ಸೇರುವ ಆಸೆ ನಿರಾಸೆ ಆದುದರಿಂದ ಬಳ್ಳಾರಿಯ ಮುನಿಸಿಫಲ್ ಹೈಸ್ಕೂಲಿನಲ್ಲಿ ಸೇರುವ ಪ್ರಯತ್ನ ಮಾಡಿದರು. ಅಲ್ಲಿ ವೇದಾಂತಂ ಐಯಂಗಾರರು ಮುಖ್ಯೋಪಾಧ್ಯಾಯರಾಗಿದ್ದರು. ಇವರು ಸಹ ಇಂಗ್ಲಿಷಿನಲ್ಲಿ ಪ್ರಶ್ನೆಗಳನ್ನು ಕೇಳತೊಡಗಿದರು. ಆದರೆ ಕೋ. ಚೆಯವರು ಬಾಯಿ ತೆರೆಯಲಿಲ್ಲ. ಆಗ ಮುಖ್ಯೋಪಾಧ್ಯಾಯರು ಕನ್ನಡದಲ್ಲಿ ಉತ್ತರಿಸು ಎಂದಾಗ ಸರಾಗವಾಗಿ ಉತ್ತರಿಸಿದರು. ಮುಖ್ಯೋಪಾಧ್ಯಾಯರು ಇಂಗ್ಲಿಷಿನಲ್ಲಿ ಉತ್ತರಿಸಲು ಪ್ರಯತ್ನಿಸು ಎಂದಾಗ ಮನಸ್ಸಿನಲ್ಲೇ ವಾಕ್ಯಗಳನ್ನು ಹೊಂದಿಸಿಕೊಳ್ಳುತ್ತಾ ಮೂರು-ನಾಲ್ಕು ವಾಕ್ಯಗಳನ್ನು ಹೇಳಿದರು. ಆಗ ಹತ್ತಿರದಲ್ಲಿದ್ದ ಚೆನ್ನಬಸಪ್ಪ (ಏಳು ಜನ ವಿಧ್ಯಾರ್ಥಿಗಳನ್ನು ಕರೆದುಕೊಂಡು ಹೋಗಿದ್ದರು) ನವರಿಗೆ ತೆಲುಗು ಭಾಷೆಯಲ್ಲಿ ಪರವಾಲೇದಂಡಿ! ಎಂದು ಹೈಸ್ಕೂಲ್ ಸೇರಲು ಪ್ರವೇಶ ದೊರಕಿಸಿಕೊಟ್ಟರು. ಆದರೆ ಕೋ. ಚೆಯವರು ಎಸ್.ಎಸ್.ಎಲ್.ಸಿ ಓದುವಾಗ ಟೈಫಾಯಿಡ್ ಜ್ವರಕ್ಕೆ ತುತ್ತಾಗಿದ್ದರಿಂದ ಒಂದು ವರ್ಷ ವಿದ್ಯಾಭ್ಯಾಸ ಮೊಟಕಾಯಿತು. ಮತ್ತೆ ೧೯೩೩ ರಲ್ಲಿ ಮರು ಪರೀಕ್ಷೆಯಲ್ಲಿ ಕುಳಿತು ಉತ್ತಮ ಅಂಕದೊಡನೆ ಉತ್ತೀರ್ಣರಾಗಿ ಅನಂತಪುರದ ಕಾಲೇಜಿಗೆ ಉನ್ನತ ವ್ಯಾಸಂಗಕ್ಕೆ ಸೇರಿಕೊಂಡರು. ಕಾಲೇಜಿಗೆ ಸೇರಿಕೊಂಡ ಸಂದರ್ಭದಲ್ಲಿಯೇ ಭಾರತ ಸ್ವತಂತ್ರ್ಯ ಚಳವಳಿಯ ಅಂತಿಮಘಟ್ಟದ ಹೋರಾಟ ಪ್ರಾರಂಭವಾಗಿತ್ತು. ಗಾಂಧೀಜಿಯವರು 'ಇದು ನನ್ನ ಕೊನೆಯ ಹೋರಾಟ ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯೊಂದಿಗೆ 'ಚಲೇ ಜಾವ್ ಚಳವಳಿ'ಯನ್ನು ಆರಂಭಿಸಿದರು. ಇದು ಭಾರತದದ್ಯಾಂತ ವಿದ್ಯುತ್ ಸಂಚಾರದ ರೀತಿಯಲ್ಲಿ ಅನೇಕ ವಿದ್ಯಾರ್ಥಿಗಳು ಈ ಚಳವಳಿಯಲ್ಲಿ ಭಾಗವಹಿಸಿದ್ದರು.

ಗಾಂಧೀಜಿಯ 'ಅಹಿಂಸಾ ನೀತಿ'ಯ ಮಾರ್ಗದ ಮೂಲಕ ಕೋ. ಚೆಯವರು ಕೂಡ ಚಳವಳಿಯಲ್ಲಿ ಭಾಗವಹಿಸಿದರು. ಇವರು ಬ್ರಿಟಿಷ್ ಆಡಳಿತದ ವಿರುದ್ಧ ಭಾಷಣ ಮಾಡುವುದು, ಶಾಲೆ ಕಾಲೇಜುಗಳನ್ನು ಬಂದ್ ಮಾಡಿಸುವುದು, ಬ್ರಿಟಿಷ್ ಆಡಳಿತದ ವಿರುದ್ಧ ಉಗ್ರವಾದ ಲೇಖನಗಳನ್ನು ಬರೆಯುವುದರ ಮುಖಾಂತರ ಕಾಲೇಜಿನ ವಿದ್ಯಾರ್ಥಿಗಳನ್ನು ಚಳವಳಿಗೆ ಸಂಘಟಿಸುತ್ತಿದ್ದರು. ಇದೇ ಸಂದರ್ಭದಲ್ಲಿ ಆಕಸ್ಮಿಕವಾಗಿ ಅನಂತಪುರ ಕಾಲೇಜಿನ ಕೆಮಿಸ್ಟ್ರಿ ಲ್ಯಾಬ್ ಸ್ಫೋಟವಾಗಿತ್ತು. ಅದನ್ನು ಸ್ಫೋಟಿಸಿದವರಲ್ಲಿ ಇವರೂ ಒಬ್ಬರು ಎಂದು ಆಪಾದನೆಯನ್ನು ಹೊರಿಸಿ ಜೈಲಿಗೆ ಹಾಕಲಾಗಿತ್ತು. ಆದರೆ ಬಳ್ಳಾರಿಯ ಸುಪ್ರಸಿದ್ಧ ವಕೀಲರೂ ನಟರೂ ಆಗಿದ್ದ ಟಿ. ರಾಘವ ಅವರು ಈ ಕೇಸಿನಲ್ಲಿ ಇವರ ಪಾತ್ರ ಏನೂ ಇಲ್ಲವೆಂದು ಸಾಬೀತುಪಡಿಸಿ ಅವರನ್ನು ಜೈಲಿನಿಂದ ಬಿಡುಗಡೆ ಗೊಳಿಸಿದರು. ಅದರೆ ಚಳವಳಿಯಲ್ಲಿ ಭಾಗವಹಿಸಿ ಜೈಲು ಸೇರಿದ್ದರಿಂದ ಮತ್ತೊಂದು ವರ್ಷ ವಿದ್ಯಾಭ್ಯಾಸಕ್ಕೆ ತೊಂದರೆ ಉಂಟಾಗಿತ್ತು. ಇಂತಹ ಪರಿಸ್ಥಿತಿಯಲ್ಲಿ ಮನೆಯವರ ಒತ್ತಾಯದಿಂದ ಕೋ. ಚೆಯವರ ವಿವಾಹವು ಸರೋಜಮ್ಮ ಎಂಬುವರೊಂದಿಗೆ

ನೆರವೇರಿತು. ಈ ವಿವಾಹದ ನಂತರವು ಗುರಣ್ಣನವರ ಸಲಹೆ ಮೇರೆಗೆ ಕಾನೂನು ಪದವಿ ವ್ಯಾಸಂಗ ಮಾಡಲು ಬೆಳಗಾವಿಗೆ ಹೋದರು. ಆದರೆ ಮನೆಯಲ್ಲಿ ಆರ್ಥಿಕ ಪರಿಸ್ಥಿತಿ ತುಂಬಾ ಕೆಟ್ಟಿದ್ದರಿಂದ ಬಹು ಕಷ್ಟದಿಂದ ಕಾನೂನು ಪದವಿ ಪಡೆದರು.

### ವೃತ್ತಿ ಜೀವನ

ಕೋ. ಚೆಯವರು ಬಾಲ್ಯದ ದಿನಗಳಲ್ಲಿ ತಂದೆಗೆ ಸಹಾಯಕರಾಗಿ ಅಂಗಡಿಯಲ್ಲಿ ಕುಳಿತು ವ್ಯಾಪಾರ ಮಾಡುತ್ತಿದ್ದರೂ ಅವರಿಗೆ ವ್ಯಾಪಾರದ ಅನುಭವ ಉಂಟಾಗಲಿಲ್ಲ. ಅದರೆ ಅವರಿಗೆ ಓದಿನಲ್ಲಿ ಆಸಕ್ತಿ ಹೆಚ್ಚಾಗಿತ್ತು, ಅದಕ್ಕೆ ತಕ್ಕಂತೆ ಗುರಣ್ಣನವರು ಪ್ರೋತ್ಸಾಹಿಸಿದರು. ಅದರೆ ಗುರಣ್ಣನವರಿಗೆ ಐ.ಸಿ.ಎಸ್ ಮಾಡಿಸಬೇಕೆಂದು ಆಸೆ ಇತ್ತಾದ್ದರೂ ಅದು ೧೯೪೨ರ 'ಕ್ವಿಟ್ ಇಂಡಿಯಾ ಚಳವಳಿ'ಯ ಕಾರಣದಿಂದ ಆಗಲಿಲ್ಲ. ಆದರೆ ಚಳವಳಿಯಲ್ಲಿ ಭಾಗವಹಿಸಿದ್ದಾನೆ ಎಂದು ಕಾಲೇಜಿನ ಪ್ರಿನ್ಸಿಪಾಲರಾದ ಮೆನನ್ ಅವರೇ ಕೋ. ಚೆಯವರನ್ನು 'ಕಿಂಗ್ಸ್ ಕಮಿಷನ್ಸ್ ಆಫೀಸರ್' ಹುದ್ದೆಗೆ ಸಿಫಾರಸ್ಸು ಮಾಡುತ್ತೇನೆ ಎಂದು ಹೇಳಿದರು. ಕೋ. ಚೆಯವರು ಅದನ್ನು ಸ್ಪಷ್ಟವಾಗಿ ನಿರಾಕರಿಸಿದರು. ಅವರಿಗೆ ಸರ್ಕಾರಿ ನೌಕರಿ ಮಾಡುವುದಕ್ಕೆ ಇಷ್ಟವಿರಲಿಲ್ಲ. ಏಕೆಂದರೆ ಅಂದು ಆಂಗ್ಲರ ಆಡಳಿತವಿದ್ದು ಅವರ ಆಡಳಿತದಲ್ಲಿ ನೌಕರಿ ಸೇರಿದರೆ ಅವರ ಗುಲಾಮ ಗಿರಿಯನ್ನು ,ಒಪ್ಪಕೊಂಡಂತೆ ಆಗುತ್ತದೆ ಎಂಬುವ ನಿಲುವನ್ನು ಹೊಂದಿದರು. ಹಾಗಾಗಿ ಬಂದ ವೃತ್ತಿಯನ್ನು ಬೇಡ ಎಂದು ನಿರಾಕರಿಸಿದರು. ಆದರೆ ಗುರಣ್ಣನವರ ಸೂಚನೆಯಂತೆ ಕಾನೂನು ಪದವಿ ಪಡೆದು ಸ್ವತಂತ್ರ್ಯವಾಗಿ ಬಳ್ಳಾರಿ ಜಿಲ್ಲಾ ನ್ಯಾಯಾಲದಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು. ಮುಂದೆ ೧೯೬೫ ನೇ ಡಿಸೆಂಬರ್ ೧೦ರಂದು ಜಿಲ್ಲಾ ನ್ಯಾಯಾಧೀಶರಾಗಿ ನೇಮಕಗೊಂಡು ತಮ್ಮ ಕರ್ತ್ಯವ್ಯ ನಿರ್ವಹಿಸಿದರು. ಆದರೆ ನಿವೃತ್ತಿಯ ನಂತರ ಸರ್ಕಾರ ವಿವಿಧ ಹುದ್ದೆಗಳಿಗೆ ಕಾನೂನು ಸಲಹೆಗಾರನಾಗಿ ನೇಮಿಸಿಕೊಳ್ಳುವ ಚಿಂತನೆ ನಡೆಸಿತ್ತಾದರೂ ಅದು ಜಾತಿ ರಾಜಕೀಯದಿಂದ ಕೈ ತಪ್ಪಿತು. ಹಾಗಾಗಿ ಮತ್ತೆ ೧೯೭೭ರಲ್ಲಿ ನಿವೃತ್ತಿ ಹೊಂದಿದ ನಂತರ ವಕಾಲತ್ತನ್ನು ಆರಂಭಿಸಿದರು. ಇಂದಿಗೂ ಅವರು ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ತಮ್ಮ ವೃತ್ತಿ ಜೀವನದಲ್ಲಿ ನಿರತರಾಗಿದ್ದಾರೆ.

### ವೈವಾಹಿಕ ಜೀವನ

೧೯೪೨ರ 'ಚಲೇ ಜಾವ್ ಚಳವಳಿ'ಯಲ್ಲಿ ಭಾಗವಹಿಸಿ ಜೈಲು ಸೇರಿದ್ದರಿಂದ ಕೋ. ಚೆಯವರು ಒಂದು ವರ್ಷಕಾಲ ವಿದ್ಯಾಭ್ಯಾಸ ಮುಂದವರಿಸಲು ಸಾಧ್ಯವಾಗಿರಲಿಲ್ಲ. ಅಲ್ಲದೆ ಅವರು ಚಳವಳಿಯಲ್ಲಿ ಭಾಗವಹಿಸಿ ಆದರ್ಶದ ಮಾತುಗಳನ್ನಾಡುತ್ತಿದ್ದರು. ಆಗ ಗುರಣ್ಣನವರ ಸಹೋದರ ಚೆನ್ನಬಸವಣ್ಣ ಕೋ. ಚೆಯವರ ಆದರ್ಶಮಾತುಗಳನ್ನು ಕೇಳಿ, 'ನಾಳೆ ಬೆಳಿಗ್ಗೆ ಮಣ್ಣ ತಿಮ್ತಿ ಏನು? ಬರೇ ಒಣಾ ವೇದಾಂತ ಓದ್ತಾನೆ' ಎಂದು ಸಿಟ್ಟಿನಿಂದ ಬೈದರು. ಕೊನೆಗೆ ಇವರ ಹುಚ್ಚು ಆದರ್ಶಗಳಿಗೆ ಕಡಿವಾಣ ಹಾಕಲು ಎಂಬುವಂತೆ ವಿವಾಹವಾಗು ಎಂದು ಒತ್ತಾಯಿಸುತ್ತಿದ್ದರು. ಆದರೆ ಅಂದಿನ ಪರಿಸ್ಥಿತಿಯಲ್ಲಿ ಜೀವನ ನಡೆಸುವುದು ಕಷ್ಟವಾಗಿರುವಾಗ ಈ ಮದುವೆ ಮಾಡಿಕೊಂಡು ಹೆಣಗುವುದಕ್ಕೆ ಕೋ. ಚೆಯವರು ಸಿದ್ಧರಿರಲಿಲ್ಲ.

ಆಗ ಗುರಣ್ಣನವರು ಕರೆಕಳಿಸಿಕೊಂಡು 'ನೋಡು ತಮ್ಮ ಯೋಚ್ನೆ ಮಾಡು ಮದುವೆ ಮಾಡಿಕೊಂಡರೂ ಯಾರಾದರು ಪುಣ್ಯಾತ್ಮರು ಮುಂದಿನ ಓದಿಗೆ ಅನುಕೂಲ ಮಾಡಬೌದು' ಎಂದರು. ಆದರೆ ಮಾವನ ದುಡ್ಡಿನಿಂದ ಓದಲೇಬೇಕಾದರೆ ಅಂತಹ ಓದು ನನಗೆ ಬೇಡ ಎಂದು ನಿರಾಕರಿಸಿದರು. ಹೀಗೆ ಸತತ ಎರಡು ತಿಂಗಳು ಬಲವಂತ ಪಡಿಸಿ ಕೊನೆಗೂ ಮದುವೆಗೆ ಒಪ್ಪಿಸಿದರು. ಹೆಣ್ಣು ನೋಡಲೆಂದು ಮೊಳಕಾಲ್ಮುರಿನಲ್ಲಿರುವ ನೇರ್ಲಳ್ಳಿ ವಂಶಸ್ಥರ ಮನೆಗೆ ಹೋಗಿದ್ದರು. ಆದರೆ ಅಲ್ಲಿ ಕನ್ಯೆ ಇರದೇ ಚಳ್ಳಕೆರೆಯಲ್ಲಿ ಇರುವುದನ್ನು ತಿಳಿದು ಚಳ್ಳಕೆರೆಗೆ ತೆರಳಿದರು. ಅಂದು ಅಲ್ಲಿ ನೋಡಿದ ಸರೋಜಮ್ಮನವರೆ ಕೋ.ಚೆಯವರ ಬಾಳ ಸಂಗತಿಯಾಗಿ ೨೪ನೇ ಡಿಸೆಂಬರ್ ೧೯೪೨ರಂದು ಕೈ ಹಿಡಿದರು. ಹೀಗೆ ಬಾಳ ಸಂಗಾತಿಯಾಗಿ ಬಂದ ಸರೋಜಮ್ಮನವರು ಇವರ ಜೀವನದುದ್ದಕ್ಕೂ ಕಷ್ಟ-ಸುಖವನ್ನು ಅನುಭವಿಸಿದರು. ಕೋ.ಚೆಯವರ ಪ್ರತಿ ಕಾರ್ಯಗಳಿಗೆ ಸ್ಫೂರ್ತಿ ತುಂಬುತ್ತಾ ಅವರ ಏಳಿಗೆಯನ್ನು ಬಯಸು ವಂತಾದರು.

### ೨.೨ ರಾಜಕೀಯ ಜೀವನ

ಭಾರತಕ್ಕೆ ಸ್ವಾತಂತ್ರ್ಯ ಬಂದು ನಾಲ್ಕು ವರ್ಷಗಳೇ ಕಳೆದರೂ ಕೂಡ ಕೇಂದ್ರ ಸರ್ಕಾರ ಭಾಷಾವಾರು ಪ್ರಾಂತ್ಯಗಳ ರಚನೆಯ ಕಾರ್ಯ ಕೈಗೊಂಡಿರಲಿಲ್ಲ. ಇದರಿಂದ ಬೇಸತ್ತ ಕೋ. ಚೆಯವರು ಕಾಂಗ್ರೆಸ್ ಪಕ್ಷಕ್ಕೆ ರಾಜೀನಾಮೆ ನೀಡಿ ಏಕೀಕರಣಕ್ಕೆ ಅಡ್ಡಿಯನ್ನುಂಟು ಮಾಡುತ್ತಿದ್ದ ಕಾಂಗ್ರೆಸ್ ವಿರುದ್ಧ ಹೋರಾಟಕ್ಕೆ ಇಳಿದರು. ಅಲ್ಲದೇ ಅವರ ಸಂಪಾದಕತ್ವದಲ್ಲಿ ನಡೆಯುತ್ತಿದ್ದ 'ರೈತ ಪತ್ರಿಕೆ'ಯಲ್ಲಿ ಪ್ರಾಂತೀಯ ನಾಯಕರಿಂದ ಹಿಡಿದು ಕೇಂದ್ರದ ನಾಯಕರವರೆಗೆ ಯಾರನ್ನು ಬಿಡದೆ ವಿಮರ್ಶಿಸತೊಡಗಿದರು.

೧೯೫೨ರಲ್ಲಿ ಪ್ರಥಮ ಸಾರ್ವತ್ರಿಕ ಚುನಾವಣೆ ನಡೆದಾಗ ಕೋ. ಚೆಯವರು, ಆಚಾರ್ಯ ಕೃಪಲಾನಿ ಅವರ ಕೆ.ಎಂ.ಪಿ.ಪಿ. (ಕೃಷಿಕರ್ ಮಜದೂರ್ ಪ್ರಜಾ ಪಾರ್ಟಿ) ಪಕ್ಷದಿಂದ ಮದ್ರಾಸ್ ವಿಧಾನಸಭೆಗೆ ಸ್ಪರ್ಧಿಸಿದರು. ಕೋ. ಚೆಯವರು ಚುನಾವಣೆಗೆ ಸ್ಪರ್ಧಿಸಲು ಗುರಣ್ಣನವರ ಆರ್ಥಿಕ ಮತ್ತು ನೈತಿಕ ಬೆಂಬಲ ಇದ್ದೇ ಇತ್ತು. ಆದರೆ ಕಾಂಗ್ರೆಸ್ ಪಕ್ಷ ಒಬ್ಬ ಪ್ರಬಲ ಶ್ರೀಮಂತ ಅಭ್ಯರ್ಥಿಯನ್ನು ಕಣಕ್ಕಿಳಿಸಿತು. ಇನ್ನೊಬ್ಬರು ಕೊಟ್ಟೂರಿನ ವರ್ತಕರು ಸ್ವತಂತ್ರವಾಗಿ ಸ್ಪರ್ಧಿಸಿದರು. ನೋಡಲು ಅದೊಂದು ತ್ರಿಕೋಣ ಸ್ಪರ್ಧೆಯಂತ್ತಿದಾರೂ ಆ ಸ್ಪರ್ಧೆಯಲ್ಲಿ ಅತಿ ದುರ್ಬಲ ಹಾಗೂ ಅತಿ ಚಿಕ್ಕ ಅಭ್ಯರ್ಥಿ ಕೋ.ಚೆನ್ನಬಸಪ್ಪನವರೇ ಆಗಿದ್ದರು.

ಚುನಾವಣೆಯ ಪ್ರಚಾರ ಮೂರು ಜನ ಅಭ್ಯರ್ಥಿಗಳಿಂದ ಆರ್ಭಟದಿಂದ ನಡೆಯಿತು. ಕೊಟ್ಟೂರಿನಿಂದ ಸ್ವತಂತ್ರ ವಾಗಿ ಸ್ಪರ್ಧಿಸಿದ ಅಭ್ಯರ್ಥಿಗೆ ಹಣ ಬಲ ಜೊತೆಗೆ ಕೂಡ್ಲಿಗಿ ತಾಲೂಕಿನ ಪ್ರತಿ ಹಳ್ಳಿಯಲ್ಲಿಯೂ ಅವರ ಬಂಧುಗಳ ಬೆಂಬಲ ಅವರಿಗೆ ಇತ್ತು, ಇನ್ನು ಕಾಂಗ್ರೆಸ್ ಉಮೇದುವಾರರು ಆಗರ್ಭ ಶ್ರೀಮಂತರು ಹಾಗು ಸಂಸ್ಥೆಯ ಬಲ, ಹಣದ ಬಲ, ಕಾರ್ಯಕರ್ತರ ಬೆಂಬಲ ಇತ್ತು. ಆದರೆ ಕೋ. ಚೆಯವರಿಗೆ ಹಣವಿರಲಿಲ್ಲ. ಆದರೆ ಕೂಡ್ಲಿಗಿ ತಾಲೂಕಿನ ಪ್ರತಿ ಹಳ್ಳಿಯ ಜನರಿಗೆ ಇವರು ಗೊತ್ತಿದ್ದರು. ಆದ್ದರಿಂದ ಇವರ ಬಳಿ ಕೇವಲ

ನಿಷ್ಠಾವಂತ, ಪ್ರತಿಷ್ಠಿತ ಮುಖಂಡರ ಬೆಂಬಲ ಮಾತ್ರ ಇತ್ತು, ಆದರೆ ಕೋ. ಚೆಯವರ ಆಪ್ತ ಸ್ನೇಹಿತರು ಇನ್ನೂ ಕಾಂಗ್ರೆಸ್ ಸಂಸ್ಥೆಯ ಮೇಲೆ ನಂಬಿಕೆ ಇಟ್ಟಿದ್ದರಿಂದ ಇವರನ್ನು ಬೆಂಬಲಿಸಲಿಲ್ಲ. ಇನ್ನು ಕೋ. ಚೆಯವರ ಒಳಿತನ್ನು ಬಯಸುತ್ತಾ ಬಂದಿದ್ದ ಗುರಣ್ಣನವರು ಕೋ. ಚೆಯವರ ಬೆಂಬಲಕ್ಕೆ ನಿಂತು ಊರೂರು ತಿರುಗಿ ಪ್ರಚಾರ ಮಾಡಿದರು. ಆದರೆ ಚುನಾವಣೆ ನಡೆದು ಫಲಿತಾಂಶ ಬಂದಾಗ ಕೋ. ಚೆಯವರಿಗೆ ಹನ್ನೆರಡು ಸಾವಿರ ಮತಗಳು, ಕಾಂಗ್ರೆಸ್ ಪಕ್ಷದ ಅಭ್ಯರ್ಥಿಗೆ ಹದಿಮೂರು ಸಾವಿರ, ಸ್ವತಂತ್ರ್ಯ ಉಮೇದುವಾರರಿಗೆ ಹದಿನೆಂಟು ಸಾವಿರ ಮತಗಳು ಬಂದಿದ್ದವು.

ಇದು ಕೋ. ಚೆಯವರು ಎದುರಿಸಿದ ಮೊದಲ ಚುನಾವಣೆಯಾಗಿತ್ತು. ನಂತರ ಅವರು ಬಹುದಿನಗಳ ಕಾಲ ರಾಜಕೀಯ ಜೀವನಕ್ಕೆ ಪ್ರವೇಶಿಸಲೇ ಇಲ್ಲ. ಆದರೆ ೧೯೭೭ರ ಕೊನೆಯಲ್ಲಿ ಅಥವಾ ೧೯೭೮ರ ಆರಂಭದಲ್ಲಿ ಕೋ. ಚೆಯವರು 'ಕರ್ನಾಟಕ ಕಾರ್ಮಿಕರ ಹಿತಾರಕ್ಷಣಾ ಸಮಿತಿ'ಯ ಅಧ್ಯಕ್ಷರಾಗಿದ್ದರು. ಅಂದಿನ ಪರಿಸ್ಥಿತಿಯಲ್ಲಿ ಕರ್ನಾಟಕದಲ್ಲಿದ್ದ ಕಾರ್ಖಾನೆಗಳಲ್ಲಿ ಕನ್ನಡಿಗರು ಅಲ್ಪಸಂಖ್ಯಾತರಾಗುವ ಪರಿಸ್ಥಿತಿ ನಿರ್ಮಾಣವಾಗಿದ್ದರಿಂದ ಸರ್ಕಾರದ ಮೇಲೆ ಒತ್ತಡ ತಂದು ಕಾರ್ಖಾನೆಗಳಲ್ಲಿ ಕನ್ನಡಿಗರಿಗೆ ಮೊದಲ ಆದ್ಯತೆಯನ್ನು ದೊರೆಕಿಸಿ ಕೊಡುವುದು ಅತೀ ಅವಶ್ಯಕವಾಗಿತ್ತು. , ಅಂತಹ ಪರಿಸ್ಥಿತಿಯಲ್ಲಿ ಕೋ. ಚೆಯವರನ್ನು ವಿಧಾನ ಪರಿಷತ್ತಿಗೆ ಸ್ವರ್ಧಿಸುವಂತೆ ಕಾರ್ಮಿಕ ಮುಖಂಡರೆಲ್ಲರು ಒತ್ತಾಯ ಪಡಿಸುತ್ತಿದ್ದರು. ಅದರಲ್ಲಿ ಒಬ್ಬ ಕಾರ್ಮಿಕ ಮುಖಂಡ 'ನೀವು ವಿಧಾನ ಪರಿಷತ್ ಸದಸ್ಯರಾದರೆ ನಮ್ಮ ಕೆಲಸಕ್ಕೆ ಬಲ ಬಂದೀತು' ನೀವು ಯಾಕೆ ಪ್ರಯತ್ನಿಸಬಾರದು? ಸಾರ್, ಎಂದಿದ್ದರು. ಅದಕ್ಕೆ ಪ್ರತಿಯಾಗಿ ಕೋ. ಚೆಯವರು ನಾನೆ? ಪ್ರಯತ್ನ ನನ್ನಿಂದ ಸಾಧ್ಯವಿಲ್ಲ ವಿಧಾನ ಪರಿಷತ್ತಿಗೆ ನಾಮಕರಣ ಮಾಡಿಕೊಳ್ಳಲು ಮುಖ್ಯಮಂತ್ರಿಗಳ ಮನೆ ಬಾಗಿಲಿಗೆ ಎಡತಾಕಬೇಕು, ಅವರ ಮರ್ಜಿ ಸಂಪಾದಿಸಬೇಕು. ಅದೆಲ್ಲ ನನ್ನ ಸ್ವಭಾವಕ್ಕೆ ಒಗ್ಗುವುದಿಲ್ಲ.ಯಾರ ಮನೆ ಬಾಗಿಲಿಗೂ ನಾನು ಇಂತದ್ದಕ್ಕೆಲ್ಲ ಅಲೆದಾಡುವುದಿಲ್ಲ. ಈಗಿನ ರಾಜಕೀಯ ಪರಿಸ್ಥಿತಿಯಲ್ಲಿ ನನಗೆ ಪುರಸ್ಕಾರ ಸಿಗಲಾರದು.[೭] ಎಂದು ಅವರು ತಮ್ಮ ನಿರಾಶೆಯ ಭಾವನೆಯನ್ನು ವ್ಯಕ್ತಪಡಿಸಿದರು. ಆದರೆ ಉಪಾಧ್ಯಾಯರ ಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಸ್ವರ್ಧಿಸಿದರೆ ನೀವು ಹೇಳುವ ಹಾಗೆ ಯಾವ ರಾಜಕೀಯ ವ್ಯಕ್ತಿಗಳ ಹತ್ತಿರ ಹೋಗುವ ಅವಶ್ಯಕತೆಯು ಬೀಳುವುದಿಲ್ಲ ಎಂದಾಗ ಕೋ. ಚೆಯವರು ಯೋಚನೆ ಮಾಡೋಣ ಇನ್ನೂ ಮೂರು ತಿಂಗಳು ಇದೆಯಲ್ಲಿ ಎಂದು ಹೇಳಿಬಿಟ್ಟರು. ಈ ಕುರಿತು ಕೋ.ಚೆಯವರು ಸಾಹಿತಿ ಬಳಗದವರೊಡನೆ ಮಾತನಾಡಲು ಆರಂಭಿಸಿದರು. ಆಗ ಬೀಚಿಯವರೊಡನೆ ದೂರವಾಣಿಯಲ್ಲಿ ಮಾತನಾಡಿ, ವಿಧಾನ ಪರಿಷತ್ತಿನ ಶಿಕ್ಷಕ ಕ್ಷೇತ್ರದಿಂದ ಚುನಾವಣೆಗೆ ನಿಲ್ಲೆನ್ನುತ್ತಾರೆ, ನೀವು ಏನು ಹೇಳುತ್ತೀರಿ? ಎಂದಾಗ ಈಗಲಾದರೂ ನಿಮಗೆ ಬಂತಲ್ಲ ಎಂದು ನಕ್ಕುಬಿಟ್ಟರು. ಅಲ್ಲದೇ ಎಂದೋ ನೀವು ಅಲ್ಲಿರ ಬೇಕಾಗಿತ್ತು, ಬುದ್ಧಿಯಿದ್ದ ಸರ್ಕಾರ ಇದ್ದಿದ್ದರೆ ನಿಮ್ಮನ್ನು ಅವರೇ ಅಲ್ಲಿಗೆ ಕರೆಸಿಕೊಳ್ಳಬೇಕಾಗಿತ್ತು ಎಂದು ಹೇಳಿ ಚುನಾವಣೆಗೆ ಸ್ವರ್ಧಿಸಿ ಎಂದರು. ಕೋ. ಚೆಯವರು ಬಸವರಾಜ ಕಟ್ಟಿಮನಿಯವರ ಬಳಿ ವಿಚಾರಿಸಿದಾಗ ಅವರು, ಸಾಹಿತಿ ರಾಜಕೀಯಕ್ಕೆ ಕಾಲಿಟ್ಟರೆ ಅವನ ಲೇಖನಿಗೆ ತುಕ್ಕು

ಹಿಡಿಯುತ್ತದೆ. ಈ ತ್ಯಾಗಕ್ಕೆ ಸಿದ್ದರಾಗಿಯೆ ರಾಜಕೀಯಕ್ಕೆ ಕಾಲಿರಿಸಬೇಕು. ಅಲ್ಲದೇ ನೀವು ವಿಧಾನ ಪರಿಷತ್ತಿಗೆ ಹೋದರೆ ಆ ಸಂಸ್ಥೆಗೆ ದೊಡ್ಡ ಲಾಭವಾಗುತ್ತದೆ. ಆದರೆ ನೀವು ಸ್ವತಃ ನಷ್ಟ ಪಡಬೇಕು. ಕನ್ನಡ-ಕನ್ನಡಿಗರ ಒಳಿತಿಗಾಗಿ ನೀವು ಚುನಾವಣೆ ಸ್ವರ್ಧಿಸುವುದು ಒಳ್ಳೆಯದು ಎಂದರು. ಹಾಗೆ ಶಿವಮೊಗ್ಗದಲ್ಲಿದ್ದ ಜಿ. ಚಿದಾನಂದಪ್ಪ ವಕೀಲರಾದ ಮಲ್ಲಪ್ಪ, ನಂಜುಂಡಪ್ಪ ಆರ್.ಆರ್. ರುದ್ರಪ್ಪ ಮುಂತಾದವರೊಡನೆ ಚುನಾವಣೆ ವಿಷಯವನ್ನು ಪ್ರಸ್ತಾಪಿಸಿದರು. ಕೊನೆಗೆ ಕರ್ನಾಟಕ ಕಾರ್ಮಿಕ ಹಿತಾರಕ್ಷಣ ಸಮಿತಿಯ ಸದ್ಯಸ್ಯರಿಗೆ "ಅಧ್ಯಕ್ಷರು ತಮ್ಮ ಚುನಾವಣಾ ಕೆಲಸಕ್ಕಾಗಿ ಉಪಯೋಗಿಸಿಕೊಂಡರು ಎಂಬ ಆ ಕ್ಷೇಪಣೆ ಬಾರದಿದ್ದರೆ" ಚುನಾವಣೆಯಲ್ಲಿ ಸ್ವರ್ಧಿಸುವುದಾಗಿ ಹೇಳಿದರು. ವಾಸ್ತವವಾಗಿ 'ಹಿತ ರಕ್ಷಣಾ ಸಮಿತಿ'ಯವರ ಒತ್ತಾಯದ ಮೇರೆಗೆ ಸ್ವರ್ಧಿಸುತ್ತಿದ್ದರಿಂದ ಅಂತಹ ಅಕ್ಷೇಪಗಳು ಬರಲಿಲ್ಲ. ಕೊನೆಗೆ ಶಿವಮೊಗ್ಗಕ್ಕೆ ಹೋಗಿ ನಾಮಪತ್ರ ಸಲ್ಲಿಸಿದರು.

ಈ ಚುನಾವಣೆಯು ಒಂದು ತ್ರಿಕೋಣ ಸ್ವರ್ಧೆಯನ್ನು ಏರ್ಪಡಿಸಿತು. ಈ ಚುನಾವಣೆಯ ಮುಖ್ಯ ಉರಿಯಾಳುಗಳಾಗಿ ಜನತಾದಳದಿಂದ ಕೊಣಂದೂರು ಲಿಂಗಪ್ಪನವರು, ಉತ್ತರ ಕರ್ನಾಟಕದ ಶಿಕ್ಷಕರ ಸಂಘದ ಪರವಾಗಿ ಬಸವರಾಜ ಹೊರಟ್ಟಿಯವರು ಮತ್ತು ಕೋ. ಚೆನ್ನಬಸಪ್ಪನವರ ನಡುವೆ ಸ್ವರ್ಧೆ ಏರ್ಪಟ್ಟಿತು.

ಕೋ. ಚೆಯವರು ಮೂಲತಃ ಜಾತ್ಯಾತೀತತೆಯನ್ನು ಮೈಗೂಡಿಸಿಕೊಂಡವರು. ಆದುದರಿಂದ ಬಿ.ಜೆ.ಪಿ.ಯಿಂದ ಸ್ವರ್ಧಿಸುವ ಹಾಗಿರಲಿಲ್ಲ. ಇನ್ನು ಕಾಂಗ್ರೆಸ್ ಪಕ್ಷಕ್ಕೆ ೧೯೫೨ರಲ್ಲಿ ರಾಜೀನಾಮೆ ನೀಡಿ ಹೊರ ಬಂದಿದ್ದರು. ಆದರೆ ಜನತಾಪಕ್ಷದ ಅಂದಿನ ಅಧ್ಯಕ್ಷರಾಗಿದ್ದ ದೇವೇಗೌಡರು ಶ್ರೀ ಕೊಣಂದೂರು ಲಿಂಗಪ್ಪನವರನ್ನು ಬೆಂಬಲಿಸುವ ತಿರ್ಮಾನ ಕೈಗೊಂಡಿದ್ದರಿಂದ ಜನತಾ ಪಕ್ಷದ ಟಿಕೆಟ್ ದೊರೆಯಲಿಲ್ಲ. ಹಾಗಾಗಿ ಸ್ವತಂತ್ರ್ಯ ಅಭ್ಯರ್ಥಿಯಾಗಿ ಸ್ವರ್ಧಿಸಿದರು.

ಕೋ. ಚೆಯವರು ನಾಮಪತ್ರ ಸಲ್ಲಿಸಿದ ಸುದ್ದಿ ಪತ್ರಿಕೆಗಳಲ್ಲಿ ಪ್ರಸಿದ್ಧಿಯಾದ ಕೂಡಲೆ ಪಾಟೀಲ ಪುಟ್ಟಪ್ಪನವರು ತಮ್ಮ 'ಪ್ರಪಂಚ' ಮತ್ತು 'ವಿಶ್ವವಾಣಿ'ಯಲ್ಲಿ ಕೋ. ಚೆಯವರನ್ನು ಬೆಂಬಲಿಸುವ ಸುದ್ದಿ ಬಿತ್ತರಿಸಿದರು. ಬೀಚಿಯವರು ಒಂದು ಪತ್ರವನ್ನು (ಅನುಬಂಧ-[illegible]) ಬರೆದು ಶಿಕ್ಷಕ ಮತದಾರರು ಕೋ. ಚೆಯವರಿಗೆ ಮತ ನೀಡಬೇಕೆಂದು ವಿನಂತಿಸಿದರು. ಹಾಗೆ ಕಟ್ಟೀಮನಿ ಕಾಂಗ್ರೆಸ್ ಪಕ್ಷದಿಂದ ವಿಧಾನ ಪರಿಷತ್ತಿಗೆ ನಾಮಕರಣ ಹೊಂದಿದ್ದರಿಂದ ಬಾಹ್ಯ ಬೆಂಬಲ ನೀಡಿದರು. ಕೈಯ್ಯಾರ ಕಿಜ್ಞಣ್ಣರೈ ಒಂದು ಬಹಿರಂಗ ಪತ್ರ ಬರೆದು ಶಿಕ್ಷಕ ಮತದಾರರು ಕೋ. ಚೆಯವರನ್ನು ಬೆಂಬಲಿಸುವಂತೆ ವಿನಂತಿಸಿದರು. ಅದೇ ರೀತಿ ದೇ ಜವರೇಗೌಡರು, ಚೆನ್ನವೀರ ಕಣವಿಯವರು ತೆರೆಮರೆಯಲ್ಲಿದ್ದುಕೊಂಡು ಕೋ. ಚೆಯವರನ್ನು ಬೆಂಬಲಿಸಿದರು. ಒಟ್ಟಿನಲ್ಲಿ ಸಾಹಿತಿಗಳ ಬೆಂಬಲ ಕೋ. ಚೆಯವರಿಗೆ ದೊರೆಯಿತು. ಇನ್ನು ಚುನಾವಣೆಯ ಪ್ರಚಾರ ಬರದಿಂದ ಸಾಗಿ, ಕರಪತ್ರ ಹಂಚುವ ಕೆಲಸ 'ಹಿತರಕ್ಷಣಾ ಸಮಿತಿ' ಮಾಡಿದರೆ, ಬೀಚಿ ಮತ್ತು ಕೈಯಾರ ಕಿಜ್ಞಣ್ಣರೈಯವರು ಪತ್ರಿಕಾ ಹೇಳಿಕೆ ಕೊಟ್ಟು ಕೋ. ಚೆಯನ್ನು ಬೆಂಬಲಿಸುವಂತೆ ಜನ ಮನವಿ ಮಾಡಿದರು.

ಕೋ. ಚೆಯನ್ನು ಮೊದಲು ಶಿವಮೊಗ್ಗ ಜಿಲ್ಲೆಯ ಶಿಕ್ಷಕ ಮತದಾರರನ್ನು ಸಂಪರ್ಕಿಸಿದಾಗ ಕೋ. ಚೆಯವರಿಗೆ ಅಭೂತಪೂರ್ವ ಸ್ವಾಗತ ದೊರೆಯಿತು. ಇನ್ನು ಧಾರವಾಡಕ್ಕೆ ಪ್ರಚಾರಕ್ಕೆಂದು ಕೋ. ಚೆ ಬಂದಾಗ ಅಲ್ಲಿಯ ಒಬ್ಬ ಶಿಕ್ಷಕ 'ನಾವೇ ನಿಮ್ಮ ದರ್ಶನಕ್ಕೆ ಬರಬೇಕು ಎಂದು ಕೊಂಡಿದ್ದೆವು, ಆದರೆ ನೀವೇ ಬಂದಿರಿ' ನಿಮ್ಮ ದರ್ಶನ ಭಾಗ್ಯದಿಂದ ನಾನು ಧನ್ಯನಾದೆ ಎಂದು ತಮ್ಮ ಅಭಿಮಾನದ ಬೆಂಬಲ ಸೂಚಿಸಿದರು. ಆದರೆ ವಾಸ್ತವವಾಗಿ ಧಾರವಾಡದಿಂದ ಹೊರಟ್ಟಿ ನಿಂತಿದ್ದರಿಂದ ಅಲ್ಲಿಯ ಶಿಕ್ಷಕರ ಪ್ರತಿನಿಧಿಕ ಸಂಘವೊಂದರ ಬೆಂಬಲ ಅಷ್ಟು ಸಿಗಲಿಲ್ಲ. ಈ ಮಧ್ಯೆ ಕೋ. ಚೆಯವರು ಅಲ್ಪ ಸಂಖ್ಯಾತರ ಶಾಲಾ ಕಾಲೇಜುಗಳಿಗೆ ಭೇಟಿ ನೀಡಿದಾಗ ಬೇಡಿಕೆ ರೀತಿಯ ಪ್ರಶ್ನೆಗಳನ್ನು ಹಾಕುತ್ತಿದ್ದರು. ಅಲ್ಪ ಸಂಖ್ಯಾತರ ಈ ಶೈಕ್ಷಣಿಕ ಸಂಸ್ಥೆಗಳ ಬಗ್ಗೆ ನಿಮ್ಮ ನಿಲುವೇನು? ನಮ್ಮ ಸಂಸ್ಥೆಗಳ ಹಿತ ರಕ್ಷಣೆ ಮಾಡುವುದಾಗಿ ಮಾತು ಕೊಟ್ಟರೆ ನಮ್ಮ ಬೆಂಬಲ ನೀಡುತ್ತೇವೆ ಎನ್ನುತ್ತಿದ್ದರು. ಅಗ ಕೋಚೆಯವರು ನಾನು ಆರಿಸಿ ಬಂದರೇ ಸಂವಿಧಾನಾತ್ಮಕವಾಗಿ ಅಲ್ಪಸಂಖ್ಯಾತರ ಶಿಕ್ಷಣ ಸಂಸ್ಥೆಗೆ ಯಾವ ಹಕ್ಕುಗಳಿವೆ ಅವುಗಳನ್ನು ಎತ್ತಿ ಹಿಡಿಯುವುದಾಗಿ ಹೇಳುತ್ತಿದ್ದರು.

ಇನ್ನು ಬಳ್ಳಾರಿ ಜಿಲ್ಲಾ ಪ್ರವಾಸವನ್ನು ಕೊನೆಯದಾಗಿ ಇಟ್ಟುಕೊಂಡರು ಏಕೆಂದರೆ ಬಳ್ಳಾರಿ ಜಿಲ್ಲೆಯವರಾಗಿದ್ದ ಕೋ. ಚೆ ಬಳ್ಳಾರಿ ವೀರಶೈವ ಕಾಲೇಜಿನ ಆಡಳಿತ ಮಂಡಳಿಯಲ್ಲಿ ೧೯೪೮ರಿಂದ ೧೯೬೧ರವರೆಗೆ ಸದಸ್ಯರಾಗಿದ್ದರು. ಅಲ್ಲದೇ ಹೊಸಪೇಟೆ ವಿಜಯನಗರ ಕಾಲೇಜು ಸ್ಥಾಪನೆಯಾದಾಗಲೂ ಅದರ ಸದಸ್ಯರಾಗಿದ್ದರು. ಬಳ್ಳಾರಿ ಜಿಲ್ಲೆಯಲ್ಲಿ ಎರಡು ಪ್ರೌಢ ಶಾಲೆಗಳಾದ, ಶ್ರೀ ಶರಣಬಸವೇಶ್ವರ ಪ್ರೌಢಶಾಲೆ, ಹಡಗಲಿ ತಾಲೂಕು ಹೊಳಲಿನಲ್ಲಿ ಶ್ರೀ ವಿವೇಕಾನಂದ ಪ್ರೌಢಶಾಲೆಗಳ ಸ್ಥಾಪಕರಾಗಿದ್ದರು. ಹಾಗಾಗಿ ಕೋ. ಚೆವರಿಗೆ ಬಳ್ಳಾರಿ ಜಿಲ್ಲೆಯ ಶಿಕ್ಷಣ ಕ್ಷೇತ್ರದಿಂದ ದೊಡ್ಡಬೆಂಬಲವಿತ್ತು. ಆದರೂ ಪಶ್ಚಿಮದ ಹೊಳಲಿನಿಂದ ಪೂರ್ವದ ಬಳ್ಳಾರಿವರೆಗೆ, ಹಡಗಲಿ, ಹರಪನಹಳ್ಳಿ, ಕೊಟ್ಟೂರು, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಮರಿಯಮ್ಮನಹಳ್ಳಿ, ಹೊಸಪೇಟೆ, ಕಂಪ್ಲಿ, ಕುರುಗೋಡು, ಸಿರುಗುಪ್ಪ, ಕುಡಿತಿನಿ, ಬಳ್ಳಾರಿ ಮುಂತಾದ ಕಡೇ ಚುನಾವಣೆ ಪ್ರಚಾರ ಕೈಗೊಂಡರು.

ಬಳ್ಳಾರಿ ಜಿಲ್ಲೆಯಲ್ಲಿ ಕೋ. ಚೆಯವರ ಹೆಸರು ದೊಡ್ಡಮಟ್ಟದಲ್ಲಿತ್ತು. ಆದರೆ, ಆಗಿನ ಅಧಿಕಾರರೂಢ ರಾಜಕೀಯ ಪಕ್ಷವೇ ಅಧಿಕೃತ ಅಭ್ಯರ್ಥಿಯನ್ನು ಚುನಾವಣೆಗೆ ನಿಲ್ಲಿಸಿದ್ದರಿಂದ ತಮ್ಮ ಸಂಸ್ಥೆಗಳ ಉದ್ಧಾರ ಮತ್ತು ಹಿತದೃಷ್ಟಿಯಿಂದ ಸರ್ಕಾರೀ ಉಮೇದುವಾರರಿಗೆ ಒಗ್ಗಟ್ಟಿನಿಂದ ಬೆಂಬಲ ಕೊಡಬೇಕೆಂಬ ಸೂಚನೆ ಶಿಕ್ಷಕ ಮತದಾರರಿಗೆ ಮಾಡಲಾಗಿತ್ತು. ಆದರೆ ಕಾಲೇಜು ಆಡಳಿತದ ವ್ಯವಸ್ಥಾಪಕರ ತೀರ್ಮಾನವನ್ನು ಶಿಕ್ಷಕ ಮತದಾರರು ಪಾಲಿಸುವುದಿಲ್ಲ ಎಂಬ ನಂಬಿಕೆ ಕೋ. ಚೆಯವರಲ್ಲಿತ್ತು, ಏಕೆಂದರೆ ಕೋ. ಚೆಯವರು ವೀರಶೈವ ಕಾಲೇಜು ಆಡಳಿತ ಮಂಡಲಿಯ ಅಧ್ಯಕ್ಷರಾಗಿದ್ದಾಗ ವಿಶ್ವವಿದ್ಯಾಲಯದ ಅನುದಾನ ಆಯೋಗ (University Grant Commission) ಶಿಫಾರಸು ಮಾಡಿದ ವೇತನ ಶ್ರೇಣಿಯನ್ನು ಇಡೀ ರಾಜ್ಯದಲ್ಲಿ ಯಾವ ಸರ್ಕಾರಿ ಅಥವಾ ಖಾಸಗಿ ಕಾಲೇಜಗಳಲ್ಲಿ ಜಾರಿಯಲ್ಲಿ ತರದಿದ್ದಾಗ ಇವರು ಮೊಟ್ಟ

ಮೊದಲು ಜಾರಿಯಲ್ಲಿ ತಂದಿದ್ದರು. ಇದರಿಂದ ವೇತನ ಶ್ರೇಣಿಯನ್ನು ಪೂರ್ವಾನ್ವಯವಾಗಿ ಜಾರಿಗೊಳಿಸಿದ್ದರಿಂದ ಶಿಕ್ಷಕರಿಗೆ ಬಾಕಿ ಬರಬೇಕಾದ ಹಣದೊರೆಯಿತು. ಹಾಗೆ ವಿಶ್ವವಿದ್ಯಾಲಯ ಆಯೋಗದಿಂದ ಬಂದ ಬಾಕಿ ಹಣವನ್ನು ಶಿಕ್ಷಕರಿಂದ ಸಂಘಕ್ಕೆ ದಾನವಾಗಿ ಬರಮಾಡಿಕೊಳ್ಳಲು ಮಾಡಿದ ಪ್ರಯತ್ನವನ್ನು ಕೋ. ಚೆ ನಿಲ್ಲಿಸಿದ್ದರು. ಈ ತಿರ್ಮಾನಗಳಿಂದ ಸಂಘವು ಕೋಪಗೊಂಡಿತ್ತಾದರೂ ಅದರ ಲಾಭ ಪಡೆದ ಶಿಕ್ಷಕರು ಬೆಂಬಲಿಸುತ್ತಾರೆಂದು ನಂಬಿದ್ದರು. ಆದರೆ ವಾಸ್ತವವಾಗಿ ಫಲಿತಾಂಶ ಬಂದಾಗ ಬಳ್ಳಾರಿ ಜಿಲ್ಲೆಯ ಶಿಕ್ಷಕರ ಮತಗಳು ಗೆಲುವು ಗಳಿಸಿದ ಅಭ್ಯರ್ಥಿಗಿಂತ ಶೇ. ೧೦ರಷ್ಟು ವ್ಯತ್ಯಾಸ ಬಂದಿದ್ದವು. ಈ ಫಲಿತಾಂಶದಲ್ಲಿ ಕೋ. ಚೆಯವರು ೩ನೇ ಸ್ಥಾನದಲ್ಲಿ ಉಳಿಯುವುದರೊಂದಿಗೆ ಸೋಲು ಅನುಭವಿಸಿದರು. ಅದರೆ ತಮ್ಮ ಕರ್ತವ್ಯ ಮರೆಯದೆ ತಮಗೆ ಸಹಾಯ ಮಾಡಿದ ಪ್ರತಿಯೊಬ್ಬರಿಗೂ ಕೃತಜ್ಞತಾ ಪತ್ರಗಳನ್ನು ಕಳಿಸಿಕೊಟ್ಟರು.

**ತೆರೆಮರೆಯಲ್ಲಿ ನಡೆದ ರಾಜಕೀಯ ಕಸರತ್ತು**

ರಾಮಕೃಷ್ಣ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ಬಳ್ಳಾರಿ, ರಾಯಚೂರು, ಗುಲ್ಬರ್ಗಾ ಜಿಲ್ಲೆಯ ಯಾವುದಾದರು ಪದವೀದರ ಕ್ಷೇತ್ರದಿಂದ ವಿಧಾನ ಪರಿಷತ್ತಿಗೆ ಜನತಾದಳದ ಅಭ್ಯರ್ಥಿಯಾಗಿ ನಿಲ್ಲುವಂತೆ ಸೂಚಿಸಿದರು. ಅದಕ್ಕೆ ಕೋ. ಚೆಯವರು ನನ್ನನ್ನು ಮತಯಾಚನೆಗಾಗಿ ಯಾಕೆ ಕಳಿಸುತ್ತೀರಿ? ನಾನೊಲ್ಲೆ ನಿಮಗೆ ಬೇಕಾದರೆ ನಾಮಕರಣ ಮಾಡಿ' ಎಂದಿದ್ದರು. ಆ ಸಮಯದಲ್ಲಿ ಚಿತ್ರತಾರೆ ಆರತಿಯವರು ವಿಧಾನ ಪರಿಷತ್ತಿನ ಸದಸ್ಯತ್ವ ಸ್ಥಾನಕ್ಕೆ ರಾಜೀನಾಮೆ ಕೊಟ್ಟಾಗ ಕೋ. ಚೆಯವರು ಹೆಗಡೆಯವರಿಗೆ ತಮ್ಮನ್ನು ವಿಧಾನ ಪರಿಷತ್ತಿಗೆ ಅಯ್ಕೆ ಮಾಡಬೇಕೆಂದು ತಿಳಿಸಿದರು. ಆದರೆ ಜೆ.ಎಚ್. ಪಟೇಲರು ಲಿಂಗಾಯತರಲ್ಲದ ಒಬ್ಬ ಹಿಂದುಳಿದ ವರ್ಗದವರಾದ ಕೊಣಂದೂರು ಲಿಂಗಪ್ಪನವರನ್ನು ಪಕ್ಷದ ಅಭ್ಯರ್ಥಿಯಾಗಿ ಆರಿಸಬೇಕೆಂದು ಹಠ ಹಿಡಿದಿದ್ದರು. ಆದಕಾರಣ ಕೋ. ಚೆಯವರು ನಾಮಕರಣದ ಮೂಲಕ ವಿಧಾನ ಪರಿಷತ್ತಿಗೆ ಆಯ್ಕೆಯಾಗುವ ಪ್ರಯತ್ನ ವಿಫಲವಾಯಿತು. ಇದಾದ ಕೆಲವು ತಿಂಗಳ ನಂತರ ವಿಧಾನ ಪರಿಷತ್ತಿಗೆ ವಿಧಾನ ಸಭೆಯಿಂದ ಆಯ್ಕೆಮಾಡುವ ದ್ವೈವಾರ್ಷಿಕ ಚುನಾವಣೆ ಬಂತು. ಆಗಲೂ ರಾಮಕೃಷ್ಣ ಹೆಗಡೆಯವರನ್ನು ಕಂಡು ಕೇಳಿದರು. ಆಗ ಹೆಗಡೆಯವರು 'ಈ ಬಾರಿ ಕಷ್ಟವಾಗಲಾರದು ನೋಡೋಣ' ಎಂದಿದ್ದರು. ಆದರೆ ಪಾರ್ಟಿಯಲ್ಲಿದ್ದ ಇಬ್ಬರು ಸಚಿವರು ಈ ಬಾರಿ ಒಬ್ಬ ಎಸ್.ಸಿ. ಹಾಗೂ ಒಬ್ಬ ಮಹಿಳೆಗೆ ಅವಕಾಶ ಕೊಡಬೇಕೆಂದು ಹಠ ಹಿಡಿದಿದ್ದರಿಂದ ಎರಡನೇಯ ಬಾರಿಯು ವಿಧಾನಪರಿಷತ್ತಿಗೆ ಆಯ್ಕೆಯಾಗುವಲ್ಲಿ ಪ್ರಯತ್ನಿಸಿ ವಿಫಲರಾದರು.

ಈ ರೀತಿಯಾಗಿ ಮೊದಲು ಜೆ.ಎಚ್. ಪಟೇಲರ ಹಠದಿಂದ ಎರಡನೇ ಬಾರಿ ಎಂ.ಪಿ. ಪ್ರಕಾಶ ಹಾಗು ಎಸ್.ಆರ್. ಬೊಮ್ಮಾಯಿಯವರ ಹಠದಿಂದ ವಿಧಾನ ಪರಿಷತ್ತಿಗೆ ನಾಮಕರಣಗೊಂಡು ಆಯ್ಕೆಯಾಗುವ ಪ್ರಯತ್ನಗಳು ಫಲಿಸಲಿಲ್ಲ.

**ಜನತಾ ಪಕ್ಷದೊಂದಿಗಿನ ಸಂಬಂಧ**

ಕೋ. ಚೆಯವರು ಒಬ್ಬ ಜಾತ್ಯಾತೀತವಾದಿ. ಅವರು ೧೯೫೨ರ ಪೂರ್ವದಲ್ಲಿ ಕಾಂಗ್ರೆಸ್

ಪಕ್ಷದಲ್ಲಿ ನಿಷ್ಠೆ ಹೊಂದಿದ್ದರು. ಆದರೆ ಅಂದಿನ ಕಾಂಗ್ರೆಸ್ ಪಕ್ಷ ಏಕೀಕರಣಕ್ಕೆ ಬೆಂಬಲಿಸದ ಕಾರಣ ಅವರ ಮೂಲ ಸದಸ್ಯತ್ವಕ್ಕೆ ರಾಜೀನಾಮೇ ನೀಡಿ ಹೊರಬಂದಿದ್ದರು. ಇನ್ನು ಕೋಮವಾದಿಯ ಗುಂಪುಗಳಲ್ಲಿ ಎಂದೂ ಕೋ. ಚೆಯವರು ಕಾಣಿಸಿಕೊಳ್ಳಲಿಲ್ಲ. ೧೯೮೧ರ ಪೂರ್ವದಿಂದಲೂ ಜನತಾ ಪಕ್ಷದೊಂದಿಗೆ ಇವರು ಸಂಬಂಧ ಇಟ್ಟುಕೊಂಡಿದ್ದರು. ಆದರೆ ಹೆಗಡೆಯವರು ೧೯೮೧ರಲ್ಲಿ ಕರ್ನಾಟಕ ಜನತಾ ಪಕ್ಷವನ್ನು ಬಲಪಡಿಸುವಾಗ ಅವರೊಂದಿಗೆ ಸೇರಿಕೊಂಡು ಅದರ ಕಾನೂನು ಸಲಹೆಗಾರನಾಗಿ ಶ್ರಮಿಸಿದರು. ಆದರೆ ೧೯೮೧-೮೮ರವರೆಗೆ ಹೆಗಡೆಯವರು ಮುಖ್ಯಮಂತ್ರಿಗಳಾಗಿದ್ದಾಗ ಇವರನ್ನು ವಿಧಾನ ಪರಿಷತ್ತಿಗೆ ಆಯ್ಕೆ ಮಾಡುವ ಪ್ರಯತ್ನ ನಡೆಯಿತಾದರೂ ಅದು ಕೈಗೂಡಲಿಲ್ಲ. ಕೊನೆಗೆ ಕೋ. ಚೆಯವರು ಪಕ್ಷದಲ್ಲಿಯ ಒತ್ತಡ, ಗುಂಪುಗಳನ್ನು ತಿಳಿದುಕೊಂಡು ವಿಧಾನ ಪರಿಷತಿನ ಸದಸ್ಯತ್ವವೇ ಬೇಡ ಎಂದು ತಿರ್ಮಾನಿಸಿದ್ದುಂಟು. ಆದರೆ ಜನತಾ ಪಕ್ಷದ ಕಾನೂನು ಸಲಹೆಗಾರರಾಗಿ ಸರ್ಕಾರದ ದೋರಣೆ ರೂಪಿಸುವಲ್ಲಿ ಗಣನೀಯ ಪಾತ್ರ ವಹಿಸಿದ್ದರು.

ಹೆಗಡೆಯವರ ಸರ್ಕಾರ ಜಿಲ್ಲಾ ಪರಿಷತ್ತು, ತಾಲೂಕು ಸಮಿತಿ, ಮಂಡಲ ಪಂಚಾಯ್ತಿ ಮತ್ತು ನ್ಯಾಯ ಪಂಚಾಯ್ತಿಗಳ ಕಾಯಿದೆಗಳನ್ನು ರೂಪಿಸಿತು. ಇವುಗಳನ್ನು ಸಿದ್ಧಪಡಿಸುವಲ್ಲಿ ಕೋ. ಚೆಯವರ ಪಾತ್ರವೂ ಇತ್ತು. ೧೯೮೩ರಲ್ಲಿ ಸಿದ್ಧಪಡಿಸಿದ ಈ ಕಾಯ್ದೆಯಲ್ಲಿ ಮಹಿಳೆಯರಿಗೆ ಶೇ. ೨೫ರಷ್ಟು ಸ್ಥಾನಗಳನ್ನು ಮೀಸಲಿರಿಸಿದ್ದು, ಅದನ್ನು ಶೇ. ೩೩ರಷ್ಟು ಸ್ಥಾನಗಳನ್ನು ಮೀಸಲಿಡಬೇಕೆಂದು ಕೋ. ಚೆಯವರು ವಾದಿಸಿದರು. ಆದರೆ ಇದಕ್ಕೆ ಪಕ್ಷದಿಂದ ವಿರೋಧವಿದ್ದರಿಂದ ಶೇ. ೨೫ರಷ್ಟು ಮೀಸಲಾತಿಗೆ ಅನುಮತಿ ನೀಡಲಾಗಿತ್ತು.

ಜನತಾ ಪಕ್ಷದ ಕಾನೂನು ಸಲಹೆಗಾರನಾಗಿದ್ದಾಗಲೆ ಮೂರನೇ ಹಿಂದುಳಿದ ವರ್ಗಗಳ ಆಯೋಗ ಅಥವಾ ವೆಂಕಟಸ್ವಾಮಿ ಆಯೋಗದ ವರದಿ ಸಿದ್ಧವಾಗಿತ್ತು. ಅಗ ಕೋ. ಚೆಯವರು ಆಯೋಗದ ಶಿಫಾರಸುಗಳನ್ನು ಸರ್ಕಾರ ಒಪ್ಪಿಕೊಳ್ಳಬೇಕು. ಏಕೆಂದರೆ ಈ ಆಯೋಗವು ಸರ್ವೋಚ್ಚ ನ್ಯಾಯಾಲಯ ವಸಂತಕುಮಾರ್ ಕೇಸಿನಲ್ಲಿ ಸೂಚಿಸಿದ ಮಾರ್ಗ ಸೂಚಿಗಳನ್ನು ಅನುಸರಿಸಿದೆ ಎಂದು ವಾದಿಸಿದರು. ಆದರೆ ಒಕ್ಕಲಿಗರ ಸಂಘ, ಒಕ್ಕಲಿಗರ ರಾಜಕೀಯ ಮುಂದಾಳುಗಳು ಹೂಡಿದ ಹಿಂಸಾತ್ಮಕ ಚಳವಳಿಗೆ ಹೆದರಿದ ಸರ್ಕಾರ ವೆಂಕಟಸ್ವಾಮಿ ಆಯೋಗದ ವರದಿಯನ್ನು ತಿರಸ್ಕರಿಸಿತು. ಈ ಸಮಯದಲ್ಲಿ ಕೋ. ಚೆಯವರು ಹಿಂದುಳಿದವರು ಯಾರು ಎಂಬ ಗ್ರಂಥವನ್ನು ಪ್ರಕಟಿಸಿದರು.

೧೯೮೯ರ ನಂತರ ಕಾಂಗ್ರೆಸ್ ಪಕ್ಷ ಅಧಿಕಾರಕ್ಕೆ ಬಂದಿತು. ಆಗ ಜನತಾ ಪಕ್ಷದ ಶಾಸಕರ ಸಂಖ್ಯಾಬಲ ಕೇವಲ ೨೪ ಇತ್ತು. ಆಗಲೂ ಕೋ. ಚೆವರು ಜನತಾದಳದ ಕಾನೂನು ಸಲಹೆಗಾರರಾಗಿದ್ದರು. ಹಾಗಾಗಿ ಪಕ್ಷದಲ್ಲಿ ತುಂಬಾ ಗೌರವ ಕೊಡಲಾಗುತ್ತಿತ್ತು.

ಜೆ.ಎಚ್. ಪಟೇಲರು ನೇರವಾದಿಗಳು ಹಾಗು ಮುಚ್ಚುಮರೆಯಿಲ್ಲದವರು. ಆದರೆ ಕೋ.ಚೆಯವರು ಬಂದರೆ ಅವರ ಕೈಯಲ್ಲಿದ್ದ ಸಿಗರೇಟನ್ನು ನಂದಿಸಿಬಿಡುತ್ತಿದ್ದರು. ಒಂದು ಸಾರಿ ನೀವು ಸರಿಯಾಗಿ ಕೆಲ್ಸ ಮಾಡ್ರಿ ಅಂತ'' ಪಟೇಲರಿಗೆ ನೇರವಾಗಿ ಹೇಳಿದ್ದರು.

ಯಾವುದಾದರೂ ಆಪಾದನೆಗಳನ್ನು ಹೊರಿಸಿದಾಗ ಕೋ. ಚೆಯವರನ್ನು ಯಾರಾದರೂ 'ನೀವು ಇಂಥ ಸರ್ಕಾರ, ಇಂಥ ಮಂತ್ರಿಗಳ ಜೊತೆ ಹೇಗಿದ್ದೀರಿ?' ಎಂದಾಗ ಕೋ. ಚೆಯವರು " I am in it; but not of it" (ನಾನು ಅದರಲ್ಲಿದ್ದೇನೆ, ಆದರೆ ಅದರಂತಲ್ಲ)[೧೧] ಎಂದು ಹೇಳುತ್ತಿದ್ದರು. ಅವರು ೧೯೮೧ರಿಂದ ೧೯೯೬ರ ತನಕ ಸಕ್ರಿಯವಾಗಿ ಜನತಾ ದಳದಲ್ಲಿ ಗುರುತಿಸಿಕೊಂಡಿದ್ದರೂ ಅವರು ಹೇಳಿದಂತೆ ನಾನು ಅದರಲ್ಲಿದ್ದೇನೆ, ಆದರೆ ಅದರಂತಲ್ಲ. ಅನ್ನುವ ಹಾಗೆ ಯಾವುದೇ ರೀತಿಯಿಂದಲೂ ತಮ್ಮ ಸ್ಥಾನ–ಮಾನಕ್ಕೆ ಚ್ಯುತಿ ಬರುವಂತಹ ಕೆಲಸಗಳನ್ನು ಮಾಡಲಿಲ್ಲ.

**೨.೩. ಸಾರ್ವಜನಿಕ ಜೀವನ**

ಕೋ. ಚೆಯವರ ಮನೆತನವೇನೂ ಹೋರಾಟಗಾರರ ಮನೆತನವೇನಲ್ಲ. ಆದರೆ ಕೋ. ಚೆಯವರು ಬೆಳೆದ ಪರಿಸರವು ಹೋರಾಟಗಾರನನ್ನಾಗಿ ರೂಪಿಸಿತು. ಬಾಲ್ಯದಲ್ಲಿಯೇ ಸಾಹಿತ್ಯ ಕೃತಿಗಳನ್ನು ಅಭ್ಯಾಸ ಮಾಡುವುದರೊಂದಿಗೆ ವಿವೇಕಾನಂದರನ್ನೂ ಅಭ್ಯಾಸ ಮಾಡಿದ್ದರು.

ಗಾಂಧೀಜಿಯವರ ಅಸಹಕಾರ ಚಳವಳಿಯಲ್ಲಿ ಭಾಗವಹಿಸಿ, ಸೆರೆಮನೆ ಸೇರಿದ ಎಸ್. ನಿಜಲಿಂಗಪ್ಪನವರ ಬಗ್ಗೆ ಊರಿನ ಜನ ಮಾತನಾಡುತ್ತಿದ್ದಾಗ ಕೋ. ಚೆಯವರಿಗೆ ಎಂಟು ವರ್ಷ. ಒಂದು ಕಡೆ , ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿ ಇನ್ನೊಂದು ಕಡೆ ಹಳ್ಳಿ ಪರಿಸರದಲ್ಲಿ ಬೇರು ಬಿಟ್ಟಿದ್ದ ಅಸ್ಪೃಶ್ಯತೆಯ ಆಚರಣೆ ಮತ್ತು ಉಳ್ಳವರು ಇಲ್ಲದವರ ಮೇಲೆ ನಡೆಸುವ ದೌರ್ಜನ್ಯಗಳು ಕೋ. ಚೆಯವರ ಮೇಲೆ ತುಂಬಾ ಪ್ರಭಾವ ಬೀರಿದವು. ಗಾಂಧೀಜಿಯವರ ರಾಜಕೀಯ ನಿಲುವುಗಳನ್ನು ಒಪ್ಪಿಕೊಳ್ಳದಿದ್ದರೂ ಅವರ ಅಹಿಂಸಾ ನೀತಿಯನ್ನು ಒಪ್ಪಿಕೊಂಡು, 'ಅಹಿಂಸಾ ಪರಮೋಧರ್ಮ ಎಂಬ ನೀತಿಗನುಗುಣವಾಗಿ ತಮ್ಮ ಕಾರ್ಯಗಳಲ್ಲಿ ತೊಡಗಿಕೊಂಡರು.

**ಕನ್ನಡ ಬಳಕೆಯ ಬೇಡಿಕೆ**

ಕೋ. ಚೆಯವರು ಮೂಲತಃ ಬಳ್ಳಾರಿ ಜಿಲ್ಲೆಯವರಾಗಿದ್ದರಿಂದ ಅಲ್ಲಿನ ಕನ್ನಡದ ಸ್ಥಿತಿಯನ್ನು ಕಣ್ಣಾರೆ ಕಂಡಿದ್ದರು. ಅಂದು ಬಳ್ಳಾರಿಯ ಬೀದಿಗಳ ಹೆಸರುಗಳು ಇಂಗ್ಲಿಷ್ ಮತ್ತು ತೆಲುಗುಗಳಲ್ಲಿದ್ದವು. ಈ ಕುರಿತು ೧೯೪೩ರಲ್ಲಿ ನಡೆದ ಬಳ್ಳಾರಿ ಜಿಲ್ಲೆಯ ಪ್ರಥಮ ಸಾಹಿತ್ಯ ಪರಿಷತ್ತು, ವಾರ್ಡ್ಲ ಹಾಲಿನಲ್ಲಿ ನಡೆಯಿತು. ಇದರ ಅಧ್ಯಕ್ಷತೆಯನ್ನು ಕೊಟ್ಟೂರಿನ ಡಾ. ನಂಜಪ್ಪನವರು ವಹಿಸಿಕೊಂಡಿದ್ದರು. ಮುಖ್ಯ ಅತಿಥಿಗಳಾಗಿ ನಟರಾದ ನಾಗೇಂದ್ರರವರು ಬಂದಿದ್ದರು. ಕೋ. ಚೆನ್ನಬಸಪ್ಪ, ಜೋಳದರಾಶಿ ದೊಡ್ಡನಗೌಡರು ಮುಂತಾದವರು ಈ ಸಭೆಯಲ್ಲಿ ಭಾಗವಹಿಸಿ ಮಹತ್ವದ ಗೊತ್ತುವಳಿಯನ್ನು ಮಂಡಿಸಿದರು. ಆ ಗೊತ್ತುವಳಿ 'ನಗರ ಪಾಲಿಕೆಯವರು ಮೂರು ತಿಂಗಳೊಳಗೆ ಕನ್ನಡವನ್ನು ಬರೆಯಿಸದಿದ್ದಲ್ಲಿ ಇರುವ ಫಲಕಗಳನ್ನು ನಾಶ ಮಾಡಲಾಗುತ್ತದೆ.' ಎಂಬುದಾಗಿ ಗೊತ್ತುವಳಿಯನ್ನು ಅನುಮೋದಿಸಿತು. ಅದರ ಪರಿಣಾಮವಾಗಿ ನಗರ ಪಾಲಿಕೆ ಮೂರು ತಿಂಗಳೊಳಗೆ ಇಂಗ್ಲಿಷ್ ಮತ್ತು ತೆಲುಗು ಹೆಸರುಗಳನ್ನು ಹೊಂದಿದ್ದ ನಾಮ ಫಲಕಗಳನ್ನು ತೆಗೆಸಿ ಕನ್ನಡ ಬಳಕೆಯನ್ನು ಮಾಡಿತು. ಈ ಬದಲಾವಣೆಗೆ ಕೋ. ಚೆಯವರೂ ಕೂಡ ಕಾರಣರಾಗಿದ್ದಾರೆ.

## ಕರ್ನಾಟಕ ಕಾರ್ಮಿಕ ಹಿತಾರಕ್ಷಣಾ ಸಮಿತಿಯ ಅಧ್ಯಕ್ಷರಾಗಿ

ಕೋ. ಚೆಯವರು ೧೯೭೭ರ ಕೊನೆಯಲ್ಲಿ (೧೯೭೮ರ ಆರಂಭದಲ್ಲಿ) ಬಿ.ಇ.ಎನ್ ಬೃಹತ್ ಕೈಗಾರಿಕಾ ಕಾರ್ಮಿಕರ ಒತ್ತಾಯಕ್ಕೆ ಮಣಿದು, ಕರ್ನಾಟಕಾ ಕಾರ್ಮಿಕ ಹಿತರಕ್ಷಣ ಸಮಿತಿಯ ಅಧ್ಯಕ್ಷರಾದರು. ಈ ಒಂದು ಕಾರ್ಖಾನೆಯಲ್ಲಿ ಹದಿಮೂರ ರಿಂದ ಹದಿನಾಲ್ಕು ಸಾವಿರ ಕಾರ್ಮಿಕರಿದ್ದು, ಅದರಲ್ಲಿ ಕನ್ನಡಿಗರು ಮಾತ್ರ ನಾಲ್ಕು ಸಾವಿರವಿದ್ದರು. ಅಲ್ಲದೆ ಉನ್ನತ ಹುದ್ದೆಗಳು, ಅಂದರೆ ಮ್ಯಾನೇಜಿಂಗ್ ಡೈರೆಕ್ಟರ್, ನೇಮಕಾತಿ ಸಮಿತಿಯ ಅಧ್ಯಕ್ಷರು, ಸಂಪರ್ಕಾಧಿಕಾರಿಗಳು ಮುಂತಾದವರು. ಶೇಕಡ ೯೦ಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಅನ್ಯ ಭಾಷಿಕರೇ ಸೇರಿಕೊಂಡಿದ್ದರು. ಇದರಲ್ಲಿ ಕನ್ನಡಿಗರಿಗೆ ಪ್ರಾತಿನಿಧ್ಯ ದೊರಕಿಸಿಕೊಡುವುದು ಈ ಕರ್ನಾಟಕ ಕಾರ್ಮಿಕ ಹಿತರಕ್ಷಣೆ ಸಂಘ ಸ್ಥಾಪನೆಯ ಉದ್ದೇಶವಾಗಿತ್ತು.

ಬಿ.ಇ.ಎಲ್ ಕರ್ನಾಟಕ ಕಾರ್ಮಿಕ ಹಿತರಕ್ಷಣಾ ಸಮಿತಿ ನೊಂದಣಿಯಾದ ನಂತರ ಬೆಂಗಳೂರಿನ ಐ.ಟಿ.ಐ, ಬಿ.ಇ.ಎಂ.ಎಲ್, ಬಿ.ಎಚ್.ಇ.ಎಲ್. ಮುಂತಾದ ಬೃಹತ್ ಕಾರ್ಖಾನೆಗಳಲ್ಲಿ 'ಕರ್ನಾಟಕಾ ಕಾರ್ಮಿಕ ಹಿತರಕ್ಷಣಾ ಸಮಿತಿಗಳು ಹುಟ್ಟಿಕೊಂಡವು. ಇವುಗಳಿಗೆಲ್ಲಾ ಕೋ. ಚೆಯವರು ಏಕಕಾಲದಲ್ಲಿ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿರುವುದು ಒಂದು ವಿಶೇಷ. ಆದರೆ ಕಾರ್ಖಾನೆಗಳಲ್ಲಿ ಇರುವ ಕನ್ನಡಿಗರು ಯಾರು? ಅಥವಾ ಸಮಾಜದಲ್ಲಿ ಜೀವಿಸುತ್ತಿರುವರಲ್ಲಿ ಕನ್ನಡಿಗರನ್ನು ಗುರುತಿಸುವ ಮಾನದಂಡವೇನು? ಎನ್ನುವ ಪ್ರಶ್ನೆಗಳು ಕಾಡತೊಡಗಿದವು. ಕೊನೆಗೆ ಕೋ. ಚೆಯವರು 'ಇಲ್ಲಿಯೇ ಹುಟ್ಟಿ ಬೆಳೆದು, ವಿದ್ಯೆ ಕಲಿತು ಸ್ಥಳೀಯರಾಗಿರುವ ಎಲ್ಲರು ಕನ್ನಡಿಗರು' ಎಂಬ ತೀರ್ಮಾನಕ್ಕೆ ಬಂದರು. ಏಕೆಂದರೆ ಕೋಲಾರ, ಬಳ್ಳಾರಿಯಲ್ಲಿರುವ ತೆಲುಗು ಮಾತನಾಡುವವರೆಲ್ಲರು ಕನ್ನಡಿಗರಲ್ಲವೆ? ಶೇಷಾದ್ರಿ ಐಯ್ಯರ್, ದಿವಾನ್ ರಂಗಾಚಾರ್ಯರ ಕಾಲದಿಂದಲೂ ಬೆಂಗಳೂರು, ಮೈಸೂರು, ಮಂಡ್ಯ, ಕೋಲಾರದ ಚಿನ್ನದ ಗಣಿ ಪ್ರದೇಶಗಳಲ್ಲಿ ತಲ ತಲಾಂತರದಿಂದ ಇರುವ ತಮಿಳರು ಕನ್ನಡಿಗರಲ್ಲವೆ? ಉರ್ದು ಮಾತನಾಡುವ ಮುಸ್ಲಿಂ ಬಾಂಧವರು ಕನ್ನಡಿಗರಲ್ಲವೆ? ಎಂಬ ಪ್ರಶ್ನೆಗಳು ಏಳುತ್ತಿದ್ದವು. ಏಕೆಂದರೆ ಇವರೆಲ್ಲ ಕರ್ನಾಟಕದಲ್ಲಿ ಹುಟ್ಟಿ ಬೆಳೆದವರಾಗಿದ್ದರು. ಅದಕ್ಕಾಗಿ ಕೋ. ಚೆಯವರು ಮೇಲಿನ ನಿರ್ಣಯಕ್ಕೆ ಬಂದರು.

ಮೇಲೆ ತಿಳಿಸಿದ ನಿರ್ಣಯದಂತೆ ಗುರಿತಿಸಿದ ಜನರನ್ನು ಸೇರಿಸಿಕೊಂಡು ಯಾವ ಕಾರ್ಖಾನೆಗಳಲ್ಲಿ ಎಷ್ಟು ಜನ ಕನ್ನಡಿಗರಿದ್ದಾರೆ ಎಂದು ತಿಳಿಯಲು ಖಚಿತವಾದ ಅಂಕಿಅಂಶಗಳನ್ನು ಪಡೆಯಲು ಕಾರ್ಖಾನೆಯ ಆಡಳಿತ ವರ್ಗದವರನ್ನು ಕೇಳಿದಾಗ ಅವರು ಮಾಹಿತಿ ನೀಡಲು ನಿರಾಕರಿಸಿದರು. ಆದ್ದರಿಂದ ಒಂದು ಸಾವಿರಕ್ಕಿಂತ ಹೆಚ್ಚು ಜನ ಸಹಿ ಮಾಡಿದ ಒಂದು ಮನವಿಯನ್ನು ಲೋಕ ಸಭಾಧ್ಯಕ್ಷರಿಗೆ ಸಲ್ಲಿಸಲಾಯಿತು. ಆಗ ಲೋಕಸಭೆಯಲ್ಲಿ ಈ ವಿಷಯ ಕುರಿತು ಚರ್ಚಿಸಲಾಯಿತು. ಆದರೆ ಬಿ.ಇ.ಎಲ್, ಹೆಚ್.ಎಂ.ಟಿ, ಐ.ಟಿ.ಐ ಮುಂತಾದ ಕೇಂದ್ರ ಸರ್ಕಾರಿ ಉದ್ಯಮಗಳಲ್ಲಿರುವ ಕನ್ನಡಿಗರೆಷ್ಟು? ತೆಲುಗರೆಷ್ಟು? ತಮಿಳರೆಷ್ಟು? ಮಲೆಯಾಳಿಗಳೆಷ್ಟು? ಎಂದು ಕೇಳಿದ ಪ್ರಶ್ನೆಗೆ ಕಾರ್ಮಿಕ ಮಂತ್ರಿಗಳು ಭಾಷಾವಾರು ಕಾರ್ಮಿಕರನ್ನು ವಿಂಗಡಿಸಿಲ್ಲ ಎಂದು ತಿಳಿಸಿದರು. ಆದರೆ ವಾಸ್ತವವಾಗಿ ಕನ್ನಡಿಗರ ಭೂಮಿಯನ್ನು ಖರೀದಿಸಿ, ಅವರ

ನಿತ್ಯದ ಆದಾಯವನ್ನು ಕಸಿದುಕೊಂಡ ಕಾರ್ಖಾನೆಯ ಮಾಲೀಕರು ಅವರ ಜೀವನಕ್ಕೆ ಆಸರೆಯಾಗದಿದ್ದರೆ ಹೇಗೆ? ಅಲ್ಲದೇ ಕೇಂದ್ರ ಸರ್ಕಾರದ ಕಾರ್ಖಾನೆಯ ನೀತಿಯ ಪ್ರಕಾರ ಸ್ಥಳೀಯ ಕಾರ್ಖಾನೆಗಳು ಸ್ಥಳೀಯರಿಗೆ ಶೇಕಡ ೮೦ರಷ್ಟು ಉದ್ಯೋಗವನ್ನು ನೀಡಬೇಕಿತ್ತು. ಆದರೆ ಈ ಕಾರ್ಖಾನೆಯ ಮಾಲೀಕರು ಅಂತಹ ನೀತಿ ನಿಯಮಗಳನ್ನು ಗಾಳಿಗೆ ತೂರಿಬಿಟ್ಟಿದ್ದರು. ಆಗ ಕೋ. ಚೆಯವರು ರಾಮಕೃಷ್ಣ ಹೆಗಡೆಯವರ ಹತ್ತಿರ ಈ ಕುರಿತು ಚರ್ಚಿಸಿ ಕನ್ನಡಿಗರಿಗೆ ಆಗುತ್ತಿದ್ದ ಅನ್ಯಾಯವನ್ನು ಸರಿಪಡಿಸುವಂತೆ ಮನವಿ ಮಾಡಿಕೊಂಡರು. ಅಲ್ಲದೇ ಉದ್ಯೋಗ ವಿನಿಮಯ ಕೇಂದ್ರಗಳಲ್ಲಿ ಉದ್ಯೋಗ ನೊಂದಣಿ ಮಾಡಿಕೊಳ್ಳಲು ಕನ್ನಡಿಗರಿಗೆ ಸೂಚಿಸಿದರು. ಏಕೆಂದರೆ ಐದು ವರ್ಷಗಳಿಗಿಂತ ಕಡಿಮೆ ಇಲ್ಲದಂತೆ ಕನ್ನಡ ಪ್ರದೇಶದಲ್ಲಿ ಅಭ್ಯಾಸ ಮಾಡಿದವರನ್ನು ಮಾತ್ರ ಉದ್ಯೋಗ ಕೇಂದ್ರಗಳು ನೊಂದಣಿ ಮಾಡಿಕೊಳ್ಳುತ್ತಿದ್ದವು. ಇಲ್ಲಿಯೂ ಕೆಲವು ಕೋಟಾ ದಾಖಲೆಗಳನ್ನು ತಂದು ನೊಂದಣಿ ಮಾಡಿಸಿಕೊಳ್ಳುತ್ತಿರುವುದಾಗಿ ತಿಳಿದ ಕೋ. ಚೆ. ಪೊಲೀಸರಿಗೆ ವಿಷಯ ತಿಳಿಸಿ, ಕೋಟಾ ದಾಖಲೆ ಸೃಷ್ಟಿ ಮಾಡಿಕೊಡುವ ವ್ಯಕ್ತಿಗಳನ್ನು ನ್ಯಾಯಲದ ಕಟ್ಟಕಟಗೆ ಕಳುಹಿಸಿದರು.

ಇನ್ನೂ ಲೋಕಸೇವಾ ಆಯೋಗ ಅಥವಾ ಸರ್ಕಾರದ ಉದ್ಯೋಗಗಳಿಗೆ ಕನ್ನಡಿಗರಲ್ಲದವರು ಸೇರಿಕೊಳ್ಳದ ಹಾಗೆ ನೂರೈವತ್ತು ಅಂಕದ ಕನ್ನಡ ಕಡ್ಡಾಯ ಪರೀಕ್ಷೆ ನಡೆಸುವಂತೆ ಅಂದು ಕೋ. ಚೆಯವರು ತಿಳಿಸಿದ್ದರು. ಆದರೆ ಅದು ಬಹುವರ್ಷಗಳ ಕಾಲ ಜಾರಿಗೆ ಬರಲಿಲ್ಲ. ಆದರೆ ಕಳೆದ ಕೆಲವು ವರ್ಷಗಳ ಹಿಂದೆ ಉದ್ಯೋಗಕ್ಕೆ ಸೇರಿಕೊಳ್ಳುವವರು ಕಡ್ಡಾಯ ಕನ್ನಡ ಪರೀಕ್ಷೆಯನ್ನು ಬರೆದು ಉತ್ತೀರ್ಣರಾಗಬೇಕೆಂಬ ಅವರ ನೀತಿ ಜಾರಿಗೆ ಬಂದಿದೆ.

ಇಂತಹ ಪರೀಕ್ಷೆಗಳಿಂದ ಅನ್ಯ ಭಾಷಿಕರು ಕರ್ನಾಟಕದಲ್ಲಿ ಉದ್ಯೋಗ ಪಡೆದುಕೊಳ್ಳಲು ಕಷ್ಟವಾಗುತ್ತದೆ ಎಂಬುದು ಕೋ. ಚೆಯವರ ಚಿಂತನೆಯಾಗಿತ್ತು.

### ಗೋಕಾಕ್ ಚಳವಳಿಯಲ್ಲಿ

ಭಾಷೆಯ ಸಮಸ್ಯೆಗಳಿಂದ ಉಂಟಾದ ಚಳವಳಿಯಲ್ಲಿ ಈ ಗೋಕಾಕ್ ಚಳವಳಿಯೂ ಒಂದು. ಸಂಸ್ಕೃತವನ್ನು ಪ್ರಥಮ ಭಾಷಾ ಸ್ಥಾನದಿಂದ ತೆಗೆದು ಹಾಕಬೇಕು. ಅದರ ಸ್ಥಾನದಲ್ಲಿ ಕನ್ನಡ ಭಾಷಾಭ್ಯಾಸಕ್ಕೆ ಪ್ರಥಮ ಸ್ಥಾನ ಕೊಡಬೇಕು ಎಂಬುದು ಈ ಹೋರಾಟದ ತಿರುಳು. ಈ ಕುರಿತು ಡಾ. ವಿ.ಕೃ. ಗೋಕಾಕರ ಏಕ ಸದಸ್ಯ ಆಯೋಗ ರಚನೆಯಾಗಿತ್ತು. ಈ ಆಯೋಗದ ಮುಂದೆ ಕರ್ನಾಟಕಕ್ಕೆ ಪ್ರಥಮ ಪ್ರಾಶಸ್ತ್ಯ ಸಿಗಬೇಕು ಎಂದು ಎಲ್ಲಾ ಕಡೆಯಿಂದ ಒತ್ತಡ ಬಂದವು. ಆಗ ಗೋಕಾಕರು ಅಂತಿಮವಾಗಿ ತನ್ನ ವರದಿಯಲ್ಲಿ ಪ್ರೌಢಶಾಲೆಗಳಲ್ಲಿ ನೂರ ಐವತ್ತು ಅಂಕಗಳ ಪರೀಕ್ಷೆಯುಳ್ಳ ಏಕೈಕ ಪ್ರಥಮ ಭಾಷೆಯಾಗಿಯೂ, ನೂರು ಅಂಕಗಳ ಮತ್ತೊಂದು ದ್ವಿತೀಯ ಭಾಷೆಯಾಗಿ, ಐವತ್ತು ಅಂಕದಲ್ಲಿ ಯಾವುದಾದರೂ ತೃತೀಯ ಭಾಷೆಯಾಗಿ ಆರಿಸಿಕೊಳ್ಳುವ ಅವಕಾಶ ಇರಬೇಕು ಎಂದು ತಿಳಿಸಿದರು. ಈ ವರದಿಯಲ್ಲಿ ಪ್ರಾಥಮಿಕ ಶಾಲಾ ಹಂತದಲ್ಲಿ ಮೂರನೆಯ ತರಗತಿಯವರೆಗೆ ಮಾತೃಭಾಷೆಯಲ್ಲಿ ಶಿಕ್ಷಣ ದೊರೆಯಬೇಕೆಂದು, ನಾಲ್ಕನೆಯ ತರಗತಿಯಿಂದ ರಾಜ್ಯ ಭಾಷೆಯಾಗಿ ಕನ್ನಡವನ್ನು

ಬೋಧಿಸಬೇಕೆಂದೂ, ವಿದ್ಯಾರ್ಥಿಗಳು ಪ್ರೌಢಶಾಲೆ ತಲುಪುವುದರ ಹೊತ್ತಿಗೆ ಎಲ್ಲರೂ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಕಲಿಯಲು ಸಾಕಷ್ಟು ಪರಿಣಿತಿ ಪಡೆಯುವ ಅನುಕೂಲತೆ, ಅವಕಾಶ ಇರಬೇಕೆಂದು ಶಿಫಾರಸ್ಸು ಮಾಡಿತು.[೧೨] ಆದರೆ ಈ ವರದಿಗೆ ಅಲ್ಪಸಂಖ್ಯಾತರು ಮತ್ತು ಸಂಸ್ಕೃತ ಅಭಿಮಾನಿಗಳು ವ್ಯಾಪಕ ವಿರೋಧ ವ್ಯಕ್ತ ಪಡಿಸಿದರು. ನಂತರ ಸರ್ಕಾರ ೧೯೮೨ರಲ್ಲಿ ಒಂದು ಆಜ್ಞೆಯನ್ನು ಹೊರಡಿಸಿ ವಿದ್ಯಾರ್ಥಿಗಳು ತಮ್ಮ ಮಾತೃಭಾಷೆಯನ್ನು ಮೊದಲು ಭಾಷೆಯಾಗಿ ಆರಿಸಿಕೊಳ್ಳಬಹುದು. ಪ್ರಥಮ ಭಾಷೆಯಾಗಿ ಕನ್ನಡವನ್ನು ಆರಿಸಿಕೊಳ್ಳದವರು ದ್ವಿತೀಯ ಭಾಷೆಯಾಗಿ ಕಡ್ಡಾಯವಾಗಿ ಆರಿಸಿಕೊಳ್ಳಬೇಕು. ಮೂರನೇ ಭಾಷೆಯಾಗಿ ಯಾವುದಾದರೂ ವಿಷಯವನ್ನು ಆಯ್ಕೆಮಾಡಿಕೊಳ್ಳಲು ಅವಕಾಶ ನೀಡಿತು. ಆದರೆ ಇದಕ್ಕೆ ಕನ್ನಡ ಪರ ಸಂಘಟನೆಗಳು ವಿರೋಧಿಸಿ ಕನ್ನಡವೇ ಪ್ರಥಮ ಭಾಷೆಯಾಗಬೇಕು ಎಂದು ಪಟ್ಟು ಹಿಡಿದವು. ಇದು ಚಳವಳಿಯ ರೂಪ ತಾಳಿತು. ಈ ಕುರಿತು ಶಂ.ಬಾ. ಜೋಷಿ ಅವರ ಅಧ್ಯಕ್ಷತೆಯಲ್ಲಿ ಒಂದು ಕ್ರಿಯಾ ಸಮಿತಿಯ ಸಭೆಯನ್ನು ಏರ್ಪಡಿಸಲಾಯಿತು. ಇದರಲ್ಲಿ ಕೋ. ಚೆಯವರು ಮಾತನಾಡುತ್ತಾ, ಪ್ರಾಥಮಿಕ ಹಂತದಲ್ಲಿ ಮಾತೃಭಾಷೆಯ ಶಿಕ್ಷಣ ಮಾಧ್ಯಮವಾಗಿರಬೇಕೆಂದು ಶಿಕ್ಷಣ ತಜ್ಞರ ಧೃಡವಾದ ನಂಬಿಗೆ. ಪ್ರೌಢಶಾಲಾ ಹಂತಕ್ಕೆ ಬಂದಾಗ ರಾಜ್ಯದ ಎಲ್ಲಾ ವಿದ್ಯಾರ್ಥಿಗಳು ಕನ್ನಡವನ್ನು ಕಡ್ಡಾಯವಾಗಿ ದ್ವಿತೀಯ ಭಾಷೆಯಾಗಿ ಕಲಿಯಲೇ ಬೇಕು. ಭಾಷಾ ಅಲ್ಪಸಂಖ್ಯಾತರು ಪ್ರಾಥಮಿಕ ಹಂತದಲ್ಲಿ ತಮ್ಮ ಮಾತೃಭಾಷೆಯಲ್ಲಿಯೇ ಕಲಿಯುವ ಹಕ್ಕು, ಅವಕಾಶ ಇರುವುದರಿಂದ ಅವರ ಲಿಪಿ ಮತ್ತು ಭಾಷಾಭಿವೃದ್ಧಿಗೆ ಸಂವಿಧಾನಾತ್ಮಕ ಅಡ್ಡಿ ಬಾರದೆಂದು ಅವರು ಮಾಧ್ಯಮಿಕ ಅಥವಾ ಪ್ರೌಢಶಾಲಾ ಹಂತಕ್ಕೆ ಬಂದಾಗ ರಾಜ್ಯ ಸರ್ಕಾರಿ ನೌಕರಿ ಬೇಕಾದವರು ರಾಜ್ಯ ಭಾಷೆಯನ್ನು ಕಲಿಯಬೇಕಾದ ಪ್ರಸಂಗವನ್ನು ಉಂಟುಮಾಡುವುದು ಅಗತ್ಯವೆಂದು[೧೩] ಪ್ರತಿಪಾದಿಸಿದರು. ಆದರೆ ಕನ್ನಡ ಪರ ಸಂಘಟನೆಗಳು ತಮ್ಮ ನಿರ್ಧಾರ ಸಡಿಲಿಸಲಿಲ್ಲ. ಆ ಸಂದರ್ಭದಲ್ಲಿ ಕೋ. ಚೆಯವರು ಮಾತ್ರ ತಮ್ಮ ನಿರ್ಧಾರ ಬದಲಿಸದೆ ಚಳವಳಿಯಲ್ಲಿ ಭಾಗವಹಿಸಿ ಉಪವಾಸ ಸತ್ಯಾಗ್ರಹ ಮಾಡಿದರು. ಆದರೆ ಸರ್ಕಾರದ ಮೇಲೆ ಈ ಚಳವಳಿಯ ಹೋರಾಟ ಹೆಚ್ಚಾಗಿ ಕೊನೆಗೆ ಕನ್ನಡಕ್ಕೆ ಏಕೈಕ ಪ್ರಥಮ ಸ್ಥಾನವನ್ನು ನೀಡಿ ಆಜ್ಞೆ ಹೊರಡಿಸಿತು. ಇದು ಸರ್ವೋಚ್ಚ ನ್ಯಾಯಾಲಯದಲ್ಲಿ ವಿಚಾರಣೆಗೆ ಬಂದಾಗ ಕೋ. ಚೆಯವರ ನಿಲುವುಗಳನ್ನು ನ್ಯಾಯಾಲಯ ಎತ್ತಿಹಿಡಿಯಿತು. ಈ ಮೂಲಕ ಮಾತೃಭಾಷೆಯನ್ನು ಪ್ರಥಮ ಭಾಷೆಯಾಗಿ ಕಲಿಯಲು ಅವಕಾಶವನ್ನು ಒದಗಿಸಿತು.

**ಕಾವಲು ಸಮಿತಿಯಲ್ಲಿ ಸದಸ್ಯರಾಗಿ**

೧೯೮೫ರಲ್ಲಿ ನಡೆದ ಮಧ್ಯಂತರ ಚುನಾವಣೆಯಲ್ಲಿ ಜನತಾ ಪಕ್ಷ ೧೩೯ ಸ್ಥಾನ ಪಡೆದು ಸ್ವಂತ ಸರ್ಕಾರ ರಚಿಸಲು ಸಮರ್ಥವಾಗಿತ್ತು. ಆಗ ಹೆಗಡೆಯವರು ಎರಡನೇ ಬಾರಿ ಮುಖ್ಯಮಂತ್ರಿಗಳಾಗಿ ಆಯ್ಕೆಯಾದರು. ಅಧಿಕಾರಕ್ಕೆ ಬಂದ ಜನತಾ ಪಕ್ಷ ಕರ್ನಾಟಕದಲ್ಲಿ ಕನ್ನಡ ಆಡಳಿತ ಭಾಷೆಯಾಗಲೇ ಬೇಕು ಹಾಗೂ ಕನ್ನಡಿಗರಿಗೆ ನೌಕರಿಯಲ್ಲಿ ಆಧ್ಯತೆ ಇರಬೇಕೆಂದು ಘೋಷಣೆ ಮಾಡಿ ೧೯೮೫ರಲ್ಲಿ 'ಕನ್ನಡ ಮತ್ತು ಗಡಿಕಾವಲು' ಎಂಬ

ಸಮಿತಿಯನ್ನು ನೇಮಕ ಮಾಡಿತು. ಅದಕ್ಕೆ ಪಾಟೀಲ ಪುಟ್ಟಪ್ಪನವರನ್ನು ಅಧ್ಯಕ್ಷರನ್ನಾಗಿ ನೇಮಿಸಿದರು.

ಈ ಕಾವಲು ಸಮಿತಿಯ ಮುಖ್ಯ ಉದ್ದೇಶ ಕನ್ನಡದ ರಕ್ಷಣೆ ಮತ್ತು ಅಭಿವೃದ್ಧಿ ಮಾಡುವುದೆ ಆಗಿತ್ತು. ಕಾವಲು ಪಡೆಯ ಅಧ್ಯಕ್ಷರು ಸಚಿವ ಸ್ಥಾನದ ಸೌಲಭ್ಯಗಳನ್ನು ಹೊಂದಿದ್ದರು. ಹಾಗೆ ತಮ್ಮ ಅಧಿಕಾರವನ್ನು ಯಾರ ಹಂಗು ಇಲ್ಲದೆ ಸರ್ವಾಧಿಕಾರಿಯಂತೆ ವರ್ತಿಸುತ್ತಿದ್ದರು ಆದ್ದರಿಂದ ಕೋ. ಚೆಯವರು ಇವರ ಅಧಿಕಾರದ ವೈಖರಿಯನ್ನು ಖಂಡಿಸದರು.

ಈ ಕಾವಲು ಪಡೆಯ ಸಭೆಗಳಲ್ಲಿ ಅನೇಕ ಸಮಸ್ಯೆಗಳನ್ನು ಚರ್ಚಿಸಿ ಅವುಗಳಿಗೆ ಸೂಕ್ತ ನಿರ್ಧಾರಗಳನ್ನು ಕೈಗೊಳ್ಳಲಾಗುತ್ತಿತ್ತು. ಇಂತಹ ಸಭೆಗಳಿಗೆ ಕೋ. ಚೆವರು ಭಾಗವಹಿಸಿ ತಮ್ಮ ಅಭಿಪ್ರಾಯಗಳನ್ನು ತಿಳಿಸುತ್ತಿದ್ದರು. ಒಂದು ಸಾರಿ ಸಭೆಯಲ್ಲಿ ಪರ ರಾಜ್ಯದವರು ಕರ್ನಾಟಕದಲ್ಲಿ ನೌಕರಿ ಗಿಟ್ಟಿಸಿಕೊಳ್ಳುವ ಅವಕಾಶವನ್ನು ಹೇಗೆ ತಡೆಗಟ್ಟಬೇಕು? ಎಂಬುದಕ್ಕೆ ಕೋ. ಚೆಯವರು ಪ್ರಥಮ ಮತ್ತು ದ್ವಿತಿಯ ದರ್ಜೆಯ ನೌಕರಿಗಾಗಿ ನಡೆಯುವ ಲೋಕ ಸೇವಾ ಆಯೋಗದ ಪರೀಕ್ಷೆಗಾಗಿ ಎಸ್.ಎಸ್.ಎಲ್.ಸಿ ಮಟ್ಟದ ಕನ್ನಡ ಪರೀಕ್ಷೆ ನಡೆಸಿ ಅದರಲ್ಲಿ ತೇರ್ಗಡೆಯಾದವರಿಗೆ ಆಯ್ಕೆ ಮಾಡಿಕೊಳ್ಳುವ ಅವಕಾಶವಿರುವಂತೆ ನಿಯಮ ರೂಪಿಸಬೇಕು ಎಂದು ಸಲಹೆ ಸೂಚಿಸಿದರು. ಹಾಗೂ ಅಧಿನಿಯಮವನ್ನು ತಿದ್ದುಪಡಿ ಮಾಡಬೇಕು ಎಂದು ಸರ್ಕಾರಕ್ಕೆ ಕಾವಲು ಪಡೆಯ ಮೂಲಕ ಸಲಹೆಯನ್ನು ೧೯೮೪–೮೬ರಲ್ಲಿ ಸೂಚಿಸಿದ್ದರಾದರೂ ಕೆಲವು ಪಟ್ಟಭದ್ರ ಇಚ್ಛಾಸಕ್ತಿಯ ಕೊರತೆಯಿಂದ ಇದನ್ನು ಅನುಷ್ಠಾನಕ್ಕೆ ತರಲಿಲ್ಲ. ಆದರೆ ೧೯೯೭ರ ನಂತರ ಇದನ್ನು ಜಾರಿಗೆ ತಂದು ಕಾರ್ಯರೂಪಗೊಳಿಸಿದ್ದಾರೆ.

ಇಂತಹ ಹತ್ತು ಹಲವು ಸಲಹೆ ಸೂಚನೆಗಳನ್ನು ಕಾನೂನು ಚೌಕಟ್ಟಿನಲ್ಲಿ ಜಾರಿಗೆ ತಂದು ತಿದ್ದುಪಡಿಗಳನ್ನು ಮಾಡುವಂತೆ ಸೂಚಿಸುತ್ತಿದ್ದರು. ಆದರೆ ಪಾಟೀಲ್ ಪುಟ್ಟಪ್ಪನವರು ಕನ್ನಡವನ್ನು ರಾಜ್ಯದಲ್ಲಿ ತ್ವರಿತಗತಿಯಲ್ಲಿ ಜಾರಿಗೆ ತರಬೇಕು ಎನ್ನುವ ನಿರ್ಧಾರಗಳು ಕೋ. ಚೆಯವರ ವಿಮರ್ಶೆಗೆ ಗುರಿಯಾಗಬೇಕಾಗಿ ಬಂತು.

ಒಂದು ಸಭೆಯಲ್ಲಿ ಪಾಟೀಲ್ ಪುಟ್ಟಪ್ಪನವರು ಶೇಕಡ ೯೮ರಷ್ಟು ಕನ್ನಡ ಜಾರಿಗೆ ತಂದಿರುವುದಾಗಿ ಹೇಳಿಕೊಂಡಾಗ ಆ ಹೇಳಿಕೆಗೆ ಕೋ. ಚೆಯವರು ಶೇಕಡ ೯೮ರಷ್ಟು ಕನ್ನಡ ಯಾವುದರಲ್ಲಿ? ಎಂದು ಪ್ರಶ್ನಿಸುವ ರೀತಿಯಲ್ಲಿ ಪತ್ರಿಕಾ ಲೇಖನ ಬರೆದರು. (ಅನುಬಂಧ ) ಈ ವಿಷಯದಿಂದ ಕಾವಲು ಸಮಿತಿಯ ಅಧ್ಯಕ್ಷರಿಗೆ ಮತ್ತು ಕೋ. ಚೆಯವರ ಮಧ್ಯೆ ಬಿನ್ನಾಭಿಪ್ರಾಯ ಉಂಟಾಗಿ ಕಾವಲು ಸಮಿತಿಯಿಂದ ಅವಮಾನಿತರಾಗಿ ಕೋ.ಚೆಯವರು ಹೊರನಡೆದರು. ಆದರೆ ಯಾವುದೇ ಕಾರಣಕ್ಕೂ ತಮ್ಮ ನಿರ್ಧಾರವನ್ನು ಬದಲಿಸಲಿಲ್ಲ. ಇದು ಅವರಲ್ಲಿದ್ದ ಧೃಡತೆ ಮತ್ತು ದಕ್ಷತೆಗೆ ಸಾಕ್ಷಿಯಾಗಿದೆ.

**ಭ್ರಷ್ಟಾಚಾರ ನಿರ್ಮೂಲನಾ ಸಮಿತಿಯ ಚಾಲಕರಾಗಿ**

ಕೋ. ಚೆಯವರು ಭ್ರಷ್ಟಾಚಾರದ ವಿರುದ್ಧ ಆರಂಭದಿಂದಲೂ ಪ್ರತಿಭಟನೆ ವ್ಯಕ್ತಪಡಿಸಿರುವುದು ಕಂಡು ಬರುತ್ತದೆ. ಅಂದರೆ ಅವರ ಸಂಪಾಕತ್ವದಲ್ಲಿ ಪ್ರಕಟವಾಗುತ್ತಿದ್ದ 'ರೈತ ಪತ್ರಿಕೆ'ಯಲ್ಲಿ

ಭ್ರಷ್ಟಾಚಾರವನ್ನು ಖಂಡಿಸಿರುವುದನ್ನು ಗಮನಿಸಿರಬಹುದು. ಭ್ರಷ್ಟಾಚಾರದ ವಿವಿಧ ಮುಖಗಳನ್ನು ಗಮನಿಸುತ್ತಿದ್ದ ಕೋ. ಚೆ ಹಾಗೂ ಕಡಿದಾಳ್ ಮಂಜಪ್ಪನವರು ಸೇರಿಕೊಂಡು 'ಭ್ರಷ್ಟಾಚಾರ ನಿರ್ಮೂಲನ ಸಮಿತಿ'ಯನ್ನು ರಚಿಸಿದರು. ಈ ಸಮಿತಿಯ ಮೂಲಕ ಭ್ರಷ್ಟಾಚಾರದ ವಿರೋಧಿ ವಿಚಾರಕ್ಕೆ ಸಂಬಂಧಿಸಿದಂತೆ ವಿಚಾರ ಸಂಕೀರಣ, ಗೋಷ್ಠಿ, ಸಭೆಗಳನ್ನು ನಡೆಸುತ್ತಾ ಜನ ಜಾಗೃತಿ ಮೂಡಿಸುತ್ತಿದ್ದಾರೆ. ಆದರೆ ಬೆಳೆಯುತ್ತಿರುವ ಭಾರತದ ಜನಸಂಖ್ಯೆಯಂತೆ ಭ್ರಷ್ಟಾಚಾರದ ಪ್ರಕರಣಗಳು ದಿನ ನಿತ್ಯ ಹೊರ ಬರುತ್ತಿವೆಯಾದರೂ ಭ್ರಷ್ಟಾಚಾರ ನಿರ್ಮೂಲನಾ ಸಮಿತಿಯಿಂದ ಜನ ಜಾಗೃತಿಯಾಗಿರುವುದು ಮಾತ್ರ ಸತ್ಯವಾಗಿದೆ. ಭ್ರಷ್ಟಾಚಾರ ನಿರ್ಮೂಲನೆ ಮಾಡಲು ಸಾಧ್ಯವಿಲ್ಲ. ಆದರೆ ಕೋ. ಚೆಯವರ ಈ ಸೇವೆ ಇಂದಿನ ಯುವ ಜನಾಂಗಕ್ಕೆ ಮಾದರಿಯಾಗಿದೆ.

**ಅಡಿ ಟಿಪ್ಪಣಿಗಳು**

೧. ರವಿಕುಮಾರ್ ಎನ್. ಎಂ. (ಪ್ರ. ಸಂ.) ಮುನ್ನಡೆಯ ಕೂಡ್ಲಿಗಿ: ಕೂಡ್ಲಿಗಿ ತಾಲೂಕು ಸಮಗ್ರ ದರ್ಶನ, ಹಿಮಂತ ಪ್ರಕಾಶನ ಯಂ. ಬಿ. ಅಯ್ಯನಹಳ್ಳಿ, ೧೯೯೮, ಪುಟ-೪೭

೨. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೧), ಸುರಚಿ ಪ್ರಕಾಶನ, ಮೈಸೂರು, ೧೯೭೩, ಪುಟ-೧೧

೩. ........ಅದೇ..... ಪುಟ-೧೧

೪. ........ಅದೇ..... ಪುಟ-೧೧

೫. ........ಅದೇ..... ಪುಟ-೨೨

೬. ........ಅದೇ..... ಪುಟ-೧೦೭

೭. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ(ಭಾಗ-೨)ಅರವಿಂದ ಪ್ರಕಾಶನ, ಬೆಂಗಳೂರು,೧೯೯೭, ಪುಟ-೯೧

೮. ........ಅದೇ..... ಪುಟ-೧೦೫

೯. ........ಅದೇ..... ಪುಟ-೧೦೬

೧೦. ಅಮರೇಶ ನುಗಡೋಣಿ (ಸಂ) ಕನ್ನಡ ಅಧ್ಯಯನ ಸಂಪುಟ-೧೩, ಸಂಚಿಕೆ-೨, ಪ್ರಸಾರಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭, ಪುಟ-೧೨೮

೧೧. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೨), ಅರವಿಂದ ಪ್ರಕಾಶನ, ಬೆಂಗಳೂರು, ೧೯೯೭, ಪುಟ-೧೧೦

೧೨. ........ಅದೇ..... ಪುಟ-೮೫

೧೩. ........ಅದೇ..... ಪುಟ-೮೬

# ಅಧ್ಯಾಯ ೩

## ಸ್ವಾತಂತ್ರ್ಯ ಚಳವಳಿಯಲ್ಲಿ ಕೋ. ಚೆನ್ನಬಸಪ್ಪನವರು

## ಅಧ್ಯಾಯ – ೩

# ಸ್ವಾತಂತ್ರ್ಯ ಚಳವಳಿಯಲ್ಲಿ ಕೋ. ಚೆನ್ನಬಸಪ್ಪನವರು

---

**ಭಾ**ರತದಲ್ಲಿ ನಡೆದ ಸ್ವಾತಂತ್ರ್ಯ ಸಂಗ್ರಾಮವು 'ಅಹಿಂಸಾ ಮಾರ್ಗ'ವನ್ನು ಅನುಸರಿಸುವ ಮೂಲಕ ಸ್ವರಾಜ್ಯವನ್ನು ಗಳಿಸಿರುವುದೊಂದು ಅನುಪಮ ಸಾಧನೆ. ಕನ್ನಡದ ಜನರಲ್ಲಿ ಇಂಥ ಹೋರಾಟಕ್ಕೆ ಭಾಗವಹಿಸಿದ ಸಂಖ್ಯೆ ಸಹಸ್ರಾರು. ಅಂತವರಲ್ಲಿ ಕೋ. ಚೆ ಕೂಡ ಒಬ್ಬರು.

೧೫ನೇ ಶತಮಾನದ ಅಂತ್ಯ ಮತ್ತು ೧೬ನೇ ಶತಮಾನದ ನಂತರದಲ್ಲಿ ಭರತ ಖಂಡದ ಪ್ರದೇಶಗಳೆಲ್ಲ ಒಂದೊಂದಾಗಿ ಯುರೋಪಿಯನ್ನರ ಆಡಳಿತಕ್ಕೆ ಸೇರಿಕೊಂಡವು. ಆದರೆ ಯುರೋಪ್ ಖಂಡದಿಂದ ಬಂದ ಡಚ್ಚರು, ಫ್ರೆಂಚರು, ಪೋರ್ಚುಗಿಸರು ಮತ್ತು ಇಂಗ್ಲಿಷರು. ಭಾರತವನ್ನು ತಮ್ಮ ಅಧೀನದಲ್ಲಿ ಇಟ್ಟುಕೊಂಡರು. ಆದರೆ ಬಹು ದೀರ್ಘಕಾಲ ಆಳಿದ ಬ್ರಿಟಿಷರು ಭಾರತವನ್ನು ತಮ್ಮ ವಸಹಾತು ಕೇಂದ್ರವಾಗಿರಿಸಿಕೊಂಡು ಇಲ್ಲಿಯ ಸಂಪತ್ತನ್ನು ಕೊಳ್ಳೆ ಒಡೆಯಲು ಆರಂಭಿಸಿದರು. ಅಲ್ಲದೆ ಭಾರತದ ರಾಜಕೀಯದ ಚುಕ್ಕಾಣಿ ಹಿಡಿದ ಅವರು ಇಲ್ಲಿಯ ನೆಲ, ಜಲ, ಗಾಳಿ, ಪರಿಸರ ಎಲ್ಲ ತಮ್ಮದೇ ಎಂಬುವಂತೆ ಬಳಸಿಕೊಳ್ಳಲು ಆರಂಭಿಸಿದರು. ಹಾಗೂ ಸ್ಥಳೀಯರಿಗೆ ನೀಡಬೇಕಾದ ಉದ್ಯೋಗದಲ್ಲಿ ತಾರತಮ್ಯತೆ ತೋರಿಸಿ, ಇಂಗ್ಲೆಂಡಿನಿಂದ ಬಂದವನಿಗೆ ಹೆಚ್ಚಿನ ಸಂಬಳ ನೀಡುವುದು, ಅದೇ ದರ್ಜೆಯಲ್ಲಿ ಭಾರತೀಯನು ಕರ್ತವ್ಯ ನಿರ್ವಹಿಸಿದರೂ ಅವನಿಗೆ ಕನಿಷ್ಠ ಸಂಬಳವನ್ನು ಸಹ ನೀಡುತ್ತಿರಲಿಲ್ಲ. ಅಲ್ಲದೇ ದೇಶಿಯ ಪ್ರಜೆಗಳಿಗೆ ದೊರೆಯಬೇಕಾಗಿರುವ ಉದ್ಯೋಗಗಳು ವಿದೇಶಿಯರವರ ಪಾಲಾಗಿ ಹೋಗಿದ್ದರಿಂದ ಇಲ್ಲಿಯ ಜನ ನಿರುದ್ಯೋಗ ಅನುಭವಿಸಬೇಕಾಗಿ ಬಂದಿತು.

ಬ್ರಿಟಿಷರು ಭಾರತದಲ್ಲಿ ನೆಲಸಿ ತಮ್ಮ ಆಡಳಿತ ಸ್ಥಾಪಿಸಿದರಲ್ಲದೆ, ಅವರ ಅಚಾರ-ವಿಚಾರ, ಭಾಷೆ, ಸಂಸ್ಕೃತಿಯನ್ನು ಬಿತ್ತತೊಡಗಿದರು. ಇದರಿಂದ ದೇಶಿಯ ಸಂಸ್ಕೃತಿಗೆ ಗಂಡಾಂತರ

ಒದಗಿತು. ಇನ್ನೂ ಸರ್ಕಾರದ ನೀತಿ-ನಿಯಮಗಳನ್ನು ತಮಗೆ ಅನುಕೂಲವಾಗುವ ರೀತಿಯಲ್ಲಿ ರೂಪಿಸಿಕೊಂಡು ಭಾರತೀಯರನ್ನು ತಮ್ಮ ಗುಲಾಮಗಿರಿಗೆ ಒಳಪಡಿಸಿಕೊಳ್ಳಲು 'ದತ್ತು ಮಕ್ಕಳಿಗೆ ಹಕ್ಕಿಲ್ಲ', 'ಸಹಾಯಕ ಸೈನ್ಯಪದ್ಧತಿ'ಗಳತಂಹ ಕಾಯಿದೆಗಳನ್ನು ಜಾರಿಗೆ ತಂದು ವ್ಯವಸ್ಥಿತವಾಗಿ ದೇಶಿಯ ಸಂಸ್ಥಾನಗಳನ್ನು ತಮ್ಮ ಹಿಡಿತಕ್ಕೆ ತಗೆದುಕೊಂಡರು. ಇಂತಹ ಸಂದರ್ಭದಲ್ಲಿ ಪ್ರಜ್ಞಾವಂತ ದೇಶಿಯ ಜನರು ಬ್ರಿಟಿಷರ ವಿರುದ್ಧ ಹೋರಾಟಕ್ಕೆ ಇಳಿದರು. ಇಂತಹ ಹೋರಾಟವು ೨೦ನೇ ಶತಮಾನದ ಆರಂಭದಿಂದ ಮಧ್ಯ ಕಾಲದವರೆಗೂ ತೀವ್ರ ಸ್ವರೂಪ ಪಡೆದು ಬ್ರಿಟಿಷ್ ಸಾಮ್ರಾಜ್ಯದ ಬುಡವನ್ನು ಅಲ್ಲಾಡಿಸಿತು.

ಈ ತರಹದ ಹೋರಾಟಗಳು ೧೯ನೇ ಶತಮಾನದಿಂದ ನಡೆದರು, ಅದು ಪೂರ್ಣಫಲ ನೀಡಿದ್ದು ೨೦ನೇ ಶತಮಾನದ ೪ನೇ ದಶಕದ ಕೊನೆಯಲ್ಲಿ. ಅದಕ್ಕೆ ಕಾರಣರಾದವರು ಅಂದಿನ ಚಳವಳಿಯ ನಾಯಕತ್ವ ವಹಿಸಿಕೊಂಡಿದ್ದ ಗಾಂಧೀಜಿ, ಸುಭಾಷಚಂದ್ರಭೋಸ್, ನೆಹರು, ಸರ್ದಾರ್ ವಲ್ಲಬಾಯಿಪಾಟೇಲ್, ಸಾವರ್‌ಕರ್, ಭಗತ್‌ಸಿಂಗ್, ರಾಜಗುರು, ಸುಖದೇವ್, ಉದಮ್‌ಸಿಂಗ್, ಲಾಲ್ ಪಾಲ ಬಾಲರು, ಅನಿಬೆಸೆಂಟರು ಮುಂತಾದವರು ಇವರೆಲ್ಲಿ ರಾಷ್ಟ್ರ ಮಟ್ಟದಲ್ಲಿ ಸ್ವಾತಂತ್ರ್ಯ ಚಳವಳಿಯವನ್ನು ರೂಪಿಸಿದರು. ಇವರ ಚಳವಳಿಯಿಂದ ಸ್ಪೂರ್ತಿಗೊಂಡ ಕನ್ನಡನಾಡಿನ ಜನರು ಚಳವಳಿಯಲ್ಲಿ ಭಾಗವಹಿಸಿ ಭಾರತ ಮಾತೆಗೆ ತಮ್ಮ ಸೇವೆ ಸಲ್ಲಿಸಿದರು. ಅವರಲ್ಲಿ ಎಸ್. ನಿಜಲಿಂಗಪ್ಪ, ಹರ್ಡೆಕರ್ ಮಂಜಪ್ಪ, ಡೆಪ್ಯೂಟಿ ಚೆನ್ನಪ್ಪ, ಬಳ್ಳಾರಿಯ ಸಿದ್ದಮ್ಮ ಮುಂತಾದ ಧೀಮಂತರು ಶ್ರಮಿಸಿದರು. ಇವರುಗಳಲ್ಲಿ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನ ಆಲೂರು ಗ್ರಾಮದವರಾದ ಕೋ. ಚೆನ್ನಬಸಪ್ಪ ಕೂಡ ಒಬ್ಬರು. ಇವರು ೧೯೪೨ರ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸುವ ಮೂಲಕ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿದರು.

### ೩.೧ ಕೋ. ಚೆಯವರ ಮೇಲೆ ಪ್ರಭಾವ ಬೀರಿದ ಅಂಶಗಳು

ಕೋ. ಚೆಯವರು ಒಂದು ಚಿಕ್ಕ ಮಧ್ಯಮ ವರ್ಗದ ಕುಟುಂಬದಲ್ಲಿ ಹುಟ್ಟಿದ ವ್ಯಕ್ತಿ ಅವರಿಗೆ ವಿದ್ಯಾರ್ಥಿ ದೆಸೆಯಲ್ಲಿದ್ದಾಗಲೇ ಸ್ವಾತಂತ್ರ್ಯ ಚಳವಳಿಯ ಪ್ರೇರಣೆಗಳಾಗತೊಡಗಿದವು. ಗಾಂಧೀಜಿಯವರು ಕಾನೂನು ಭಂಗ ಚಳವಳಿಗೆ ಕರೆ ನೀಡಿದಾಗ ಕನ್ನಡ ಪ್ರದೇಶಗಳಲ್ಲಿ ಚಳವಳಿ ಮಾಡಲಾಯಿತು. ಇಲ್ಲಿ 'ಉಪ್ಪಿನ ಸತ್ಯಾಗ್ರಹ', 'ಕರ ನಿರಾಕರಣೆ' ಮುಖ್ಯವಾಗಿ 'ಪಾನವಿರೋಧಿ ಚಳವಳಿ' ವ್ಯಾಪಕವಾಗಿ ನಡೆದವು. ಪಾನ ವಿರೋಧ ಚಳವಳಿಯ ಸಮಯದಲ್ಲಿ ಈಚಲು ಮರಗಳನ್ನು ಕಡಿದುಹಾಕುವ ಕಾರ್ಯಗಳು ಬರದಿಂದ ಸಾಗಿತ್ತು, ಅಂತಹ ಸಂದರ್ಭದಲ್ಲಿ ಎಸ್. ನಿಜಲಿಂಗಪ್ಪನವರು ಪೊಲೀಸ್ ಸೆರೆಯಾಗಿ ಜೈಲು ಶಿಕ್ಷೆ ಅನುಭವಿಸಬೇಕಾಯಿತು. ಇವರು ಸೆರೆಯಾದಾಗ ಆಲೂರಿನ ಜನರು ಎಸ್. ನಿಜಲಿಂಗಪ್ಪ ಈಚಲು ಮರ ಕಡಿದು ಜೈಲು ಸೇರಿದರಂತೆ ಎಂದು ಮಾತನಾಡುತ್ತಿದ್ದರು. ಅದು ನಡೆದಾಗ ಕೋಚೆಗೆ ಇನ್ನು ೮ವರ್ಷ. ಅದೇ ಮೊದಲ ಬಾರಿಗೆ ಸತ್ಯಾಗ್ರಹ ಎಂಬ ಹೆಸರನ್ನು ಕೇಳಿದ್ದು ಹಾಗೂ ಕೋ. ಚೆಯವರಿಗೆ ಸ್ವಾತಂತ್ರ್ಯ ಚಳುವಳಿಯ ಆರಂಭಿಕ ದೀಕ್ಷೆ ಇನ್ನು ರಾಷ್ಟ್ರೀಯ ಚಳವಳಿಯ

ಸಂದರ್ಭದಲ್ಲಿ ಸ್ಥಾಪನೆಯಾದ 'ದೀನಾಸೇವಾ ಸಂಘ', 'ದೀನಾಸೇವಾ ಆಶ್ರಮ', 'ಭಾರತ ವ್ಯಾಯಮ ಶಾಲೆಗಳು' ಇವು ವಿದ್ಯಾರ್ಥಿಗಳಲ್ಲಿ ಸ್ವಾತಂತ್ರ್ಯ ಚಳವಳಿಯ ಬಗ್ಗೆ ಜಾಗೃತಿ ಮೂಡಿಸುತ್ತಿದ್ದವು. ಈ ಸಂಘಗಳು ಗಾಂಧೀಜಿ ಜಯಂತಿ, ತಿಲಕ ಜಯಂತಿ, ಗಣೇಶ ಚತುರ್ಥಿ, ಶಿವಾಜಿ ಜಯಂತಿ, ಬಸವ ಜಯಂತಿ ಮುಂತಾದುವುಗಳನ್ನು ಆಚರಿಸುವ ಮೂಲಕ ಸ್ವದೇಶಿ ಅಭಿಮಾನವನ್ನು ಮೂಡಿಸುತ್ತಿದ್ದವು.

೧೯೩೪ ಮಾರ್ಚ ೨ ರಂದು ಗಾಂಧೀಜಿ ಕೊಟ್ಟೂರಿಗೆ ಬಂದು ದೀನಾ ಸೇನಾಶ್ರಮದ ಶಂಕುಸ್ಥಾಪನೆ ಮಾಡುವುದರೊಂದಿಗೆ ಆ ಭಾಗದ ಜನರಿಗೆ ರಾಷ್ಟ್ರಿಯ ಜಾಗೃತಿಯನ್ನು ಉಂಟುಮಾಡಿದರು. ೧೯೩೬ರಲ್ಲಿ ಹಂಪಿಯಲ್ಲಿ ಜರುಗಿದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ 'ಷಟ್ ಶತಮಾನೋತ್ಸವ' ಸಮಾರಂಭಕ್ಕೆ ಕೋ. ಚೆಯವರು ಭಾಗವಹಿಸಿದ್ದರು. ಇದು ಅವರ ಮೇಲೆ ವ್ಯಾಪಕ ಪ್ರಭಾವವನ್ನುಂಟುಮಾಡಿತು.

ಕೋ. ಚೆಯವರು ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಸಾಹಿತ್ಯದ ಅಭ್ಯಾಸದ ಕಡೆಗೆ ಆಸಕ್ತಿ ಬೆಳಸಿಕೊಂಡರು. ಅವರು 'ಫರ್ಗಾಟನ್ ಎಂಪೇರ್', 'ನೆವರ್ ಟು ಬಿ ಫರ್ಗಾಟನ್ ಎಂಪೇರ್', 'ಕ್ಷೀರ ಸಾಗರ', 'ನೆಪೋಲಿಯನ್ ಬೋನಾಪಾರ್ಟ', 'ಉತ್ಕಲ ವಿಜಯ', 'ವಿವೇಕಾನಂದರ ಚರಿತ್ರೆ', 'ರಾಮಕೃಷ್ಣರ ಜೀವನ ಚರಿತ್ರೆ', ಪತ್ರಿಕೆಗಳಾದ ನವಸಂದೇಶ, ಹಿಂದೂ, ಇಂಡಿಯನ್ ಎಕ್ಸಪ್ರೆಸ್, ಬಾಂಬೆಕ್ರಾನಿಕಾಲ್ ಮಾಡ್ರರ್ನ ರಿವ್ಯೂಗಳು ಹಾಗೆಯೇ ನಾಡಹಬ್ಬದ ಭಾಷಣಾಕಾರರಾಗಿ ಬಂದ ದೊಡ್ಡ ಮೇಟಿ, ಹಳ್ಳಿಕೇರಿ ವೀರನಗೌಡ, ಆರ್.ಆರ್. ದಿವಾಕರ, ಡಾ. ಹರ್ಡಿಕರ್ ಮಂಜಪ್ಪ ಮುಂತಾದವರ ವಿಚಾರಧಾರೆಗಳು ಕೋ. ಚೆಯವರ ಮೇಲೆ ಪ್ರಭಾವ ಬೀರಿದವು.

ಕೋ. ಚೆಯವರ ಮೇಲೆ ಭೌಗೋಳಿಕ ಅಂಶಗಳು ಪ್ರಭಾವವನ್ನು ಬೀರಿದವು. ೧೯೪೨ಕ್ಕೆ ಮೊದಲೆ ಕೊಟ್ಟೂರು ಸ್ವಾತಂತ್ರ್ಯ ಹೋರಾಟಗಾರರ ವೀರಭೂಮಿಯಾಗಿತ್ತು. ಗೋರ್ಲಿಶರಣಪ್ಪ, ಕೆ. ಗೌಡಪ್ಪ, ಸಿದ್ದಪ್ಪ, ಹಳ್ಳಿ ಗುರುಬಸವರಾಜ, ರುದ್ರಮ್ಮ ಮುಂತಾದ ಹಿರಿಯ ಸತ್ಯಾಗ್ರಹಿಗಳ ಹೋರಾಟವನ್ನು ಕಣ್ಣಿಂದ ನೋಡಿ ಅಂದಿನ ವಿದ್ಯಾರ್ಥಿ ಸಮುದಾಯದಲ್ಲಿ ಸಹಜವಾಗಿಯೇ ಸ್ವಾತಂತ್ರ್ಯ ಹೋರಾಟದ ಬಗ್ಗೆ ಅಭಿಮಾನ ಮೂಡಿತು. ಎ.ಬಿ.ಆರ್. ಕೊಟ್ರಗೌಡ, ಅಲಬೂರು ನಂಜಪ್ಪ ಮತ್ತು ಕೋ. ಚೆನ್ನಬಸಪ್ಪ[೧] ಇಂತಹ ಪರಿಸರದಲ್ಲಿ ಬೆಳೆದ ಕಾರಣ ಅವರಲ್ಲಿ ಸ್ವಾತಂತ್ರ್ಯ ಹೋರಾಟ ಮಾನೋಭಾವದ ಬೆಳವಣಿಗೆಯಾಗಿತ್ತು.

ಅನಂತಪುರದ ಕಾಲೇಜಿನಲ್ಲಿ ವ್ಯಾಸಂಗ ಮಾಡುತ್ತಿರುವಾಗಲೇ ಸ್ನೇಹಿತರಾದ ನೀಲಂ ಸಂಜೀವರೆಡ್ಡಿ, ರಾಜಶೇಖರರೆಡ್ಡಿ, ನಾಗರೆಡ್ಡಿ, ಜಿ. ವೆಂಕಟರೆಡ್ಡಿ, ಕೆ. ರಾಘವಾಚಾರ್, ರಾರಾಜಿ ಪ್ರಕಾಶಂ, ಗೋಪಾಲರೆಡ್ಡಿ, ಕುಬೇರಪ್ಪ, ಆದಿನಾರಾಯಣರೆಡ್ಡಿ, ಅಯ್ಯಪ್ಪರೆಡ್ಡಿ, ಬುಡನ್ ಸಾಹೇಬ್ ಮುಂತಾದವರ ಸಂಪರ್ಕವು ಚಳವಳಿಗೆ ಭಾಗವಹಿಸಲು ಪ್ರೇರಣೆ ಆಗಿತ್ತು.

೧೯೩೯ರಿಂದ ೧೯೪೫ರ ವರೆಗಿನ ಕಾಲಪಟ್ಟ ಭಾರತದ ಚರಿತ್ರೆಯಲ್ಲಿ ಸುವರ್ಣಾಕ್ಷರಗಳಿಂದ ದಾಖಲಿಸಬೇಕಾದ ಅಂಶ. ಏಕೆಂದರೆ ೧೯೩೯ರಲ್ಲಿ ಆರಂಭವಾದ ಎರಡನೆ ಜಾಗತಿಕ

ಮಹಾಯುದ್ಧದಲ್ಲಿ ಭಾರತವು ಬ್ರಿಟಿಷರೊಂದಿಗೆ ಸೇರಿ ಜಪಾನ್‌ನನ್ನು ಎದುರಿಸಬೇಕೆಂದು ಕ್ರೀಪ್ಸನು ಪ್ರಸ್ತಾವನೆ ಮಾಡಿದನು. ಅವನು ಯುದ್ಧದ ನಂತರ ಭಾರತಕ್ಕೆ ಸಂಪೂರ್ಣ ಸ್ವರಾಜ್ಯ ನೀಡುವುದಾಗಿ ಘೋಷಿಸಿದರು. ನೆಹರು, ಗಾಂಧಿ ಮುಂತಾದ ರಾಷ್ಟ್ರಿಯ ನಾಯಕರು ಕ್ರೀಪ್ಸ್ ಸಂದಾನದ ಬೇಡಿಕೆಯನ್ನು ತಳ್ಳಿಹಾಕಿದರು. ಅಲ್ಲದೇ ಅದೇ ವೇಳೆ ಬ್ರಿಟಿಷ್ ಸರ್ಕಾರದ ಮೇಲೆ ಒತ್ತಡ ತಂದು ಸಂಪೂರ್ಣ ಸ್ವಾತಂತ್ರ್ಯ ಪಡೆಯುವ ಆಶೋತ್ತರವನ್ನು ಕಾಂಗ್ರೆಸ್ ಹೊಂದಿತ್ತು. ತನ್ನ ಸ್ವಾತಂತ್ರ್ಯದ ಬೇಡಿಕೆಯನ್ನು ೨೪ ದಿನಗಳ ಒಳಗೆ ಪೂರೈಸಬೇಕೆಂಬ ಮನವಿಯನ್ನು ಮುಂದಿಟ್ಟಿತು. ಆದರೆ ಬಿಟ್ರಿಷ್ ಸರಕಾರ ಬೇಡಿಕೆ ಪೂರೈಸದ ಕಾರಣ ಗಾಂಧೀಜಿಯವರು ೧೯೪೨ ಆಗಸ್ಟ್ ೮ರಂದು 'ಬಾಂಬೆಯ ಕಾಂಗ್ರೆಸ್' ಅಧಿವೇಶನದಲ್ಲಿ 'ಇದು ನನ್ನ ಜೀವನದ ಕೊನೆಯ ಹೋರಾಟ' ಇನ್ನು ಮುಂದೆ ಬ್ರಿಟಿಷರ ಆಡಳಿತವನ್ನು ಸಹಿಸಲಾಗದು, ಬ್ರಿಟಿಷರು ಈ ಕೂಡಲೇ ಭಾರತದದಿಂದ ವ್ಯವಸ್ಥಿತವಾಗಿ ಕಾಲುತೆಗೆಯಬೇಕು ಎಂದು ಹೇಳಿ, "ಜನರಿಗೆ ಮಾಡು ಇಲ್ಲವೇ ಮಡಿ, ಚಲೇಜಾವ್ ಬ್ರಿಟಿಷಸ್" ಎಂದು ಚಳವಳಿಗೆ ಕರೆ ನೀಡಿದರು. ಆ ಸಮಯದಲ್ಲಿ ಅಂನತಪುರದ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಕೋ. ಚೆಯವರು ಗಾಂಧೀಜಿಯ ಕರೆಗೆ ಹೋಗೋಟ್ಟು ಚಳವಳಿಗೆ ಧುಮುಕಿದರು.

ಕೋಚೆಯವರು ಸಂಪೂರ್ಣ ಗಾಂಧೀಜಿಯ ಅನುಯಾಯಿಯಾಗಿದ್ದು, ಅವರ 'ಅಹಿಂಸಾ ನೀತಿ'ಯನ್ನು ಚಳವಳಿಯಲ್ಲಿ ಅಳವಡಿಸಿಕೊಂಡರು. ಆದರೆ ಯಾವುದೇ ಸರ್ಕಾರದ ಆಸ್ತಿಯೇ ಆಗಲಿ, ವ್ಯಕ್ತಿಗತ ಆಸ್ತಿಯಾಗಲಿ ಧ್ವಂಸ ಮಾಡುವ ಕೃತ್ಯಗಳಿಗೆ ಕೈ ಹಾಕಲಿಲ್ಲ. ಇವರದು ಸಂಪೂರ್ಣ 'ಅಹಿಂಸಾ' ನೀತಿಯ ಹೋರಾಟ. ಅಂದರೆ ಶಾಲೆ ಕಾಲೇಜ್‌ಗಳನ್ನು ಬಂದ್ ಮಾಡಿಸುವುದು, ಉಗ್ರಭಾಷಣ ಮಾಡುವುದು, ಬ್ರಿಟಿಷರ ಆಡಳಿತದ ಲೋಪದೋಷಗಳನ್ನು ಎತ್ತಿಹಿಡಿಯುವುದು ಇವರ ಹೋರಾಟದ ಸ್ವರೂಪವಾಗಿತ್ತು.

**೩.೨ ಕ್ವಿಟ್ ಇಂಡಿಯಾ ಚಳವಳಿಯಲ್ಲಿ**

ಕೋ. ಚೆಯವರು ವಿದ್ಯಾರ್ಥಿಯ ದೆಸೆಯಲ್ಲಿ ರಾಷ್ಟ್ರೀಯ ನಾಯಕರ ಪ್ರಭಾವಕ್ಕೆ ಒಳಗಾಗಿದ್ದರು. ಅಲ್ಲದೆ ಗಾಂಧೀಜಿಯವರ 'ಅಹಿಂಸಾ' ನೀತಿಯ ಹೋರಾಟವನ್ನು ಮೆಚ್ಚಿ ಕೊಂಡಿದ್ದವರು. ಅವರ ಖಾದಿ ಬಳಕೆಯನ್ನು ಚಾಚು ತಪ್ಪದೆ ಪಾಲಿಸಿಕೊಂಡು ಬಂದಿದ್ದರು.

ಗಾಂಧೀಜಿಯವರು ೧೯೪೨ ಆಗಸ್ಟ್ ೮ರಂದು ಕರೆ ನೀಡಿದ 'ಮಾಡು ಇಲ್ಲವೇ ಮಡಿ' ಎಂಬ ಘೋಷಣೆಯಿಂದ ಕೋ. ಚೆಯವರಿಗೆ ಚಳವಳಿಗೆ ದುಮುಕುವ ಅವಕಾಶ ದೊರೆಯಿತು. ಆದರೆ ಕೋ. ಚೆಯವರು ಚಳವಳಿ ನಡೆಸಿದ ಸ್ವರೂಪ ಮಾತ್ರ ಅಹಿಂಸಾತ್ಮಕವಾಗಿತ್ತು.

ಅನಂತಪುರದ ಕಾಲೇಜಿನ ವಿದ್ಯಾರ್ಥಿಗಳಾಗಿದ್ದ ಡಾ. ಎ. ನಂಜಪ್ಪ, ಅರಸನಾಳು ಕೊಟ್ರ ಗೌಡರು ಮತ್ತು ಕೋ. ಚೆನ್ನಬಸಪ್ಪನವರು ಕಾಲೇಜಿನಲ್ಲಿ 'ತ್ರೀ ಮಸ್ಕೆಟಿಯರ್ಸ್' ಎಂದು ಗುರುತಿಸಿ ಕೊಂಡಿದ್ದರು. ಇವರುಗಳು. "ಯಾವುದೇ ಆಂದೋಲನದಲ್ಲಿ ಭಾಗವಹಿಸಲು ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ನಾಯಕರು ಕರೆಕೊಟ್ಟಾಗ"[೨] ಇವರೆಲ್ಲಾ ಸೇರಿಕೊಂಡು ಕಾಲೇಜ್ ಬಂದ್ ನಡೆಸಲು ಮುಂದಾಗುತ್ತಿದ್ದರು. ೧೯೪೨ರಲ್ಲಿ ಗಾಂಧೀಜಿಯವರು ಕರೆನೀಡಿದ 'ಚಲೇಜಾವ್' ಚಳವಳಿಯ

ಸಮಯದಲ್ಲಿ ಪೂರ್ಣ ಹರತಾಳಕ್ಕೆ ಕರೆನೀಡುತ್ತಿದ್ದರು, ಅಲ್ಲದೇ ಕಾಲೇಜ್ ಬಂದ್ ಮಾಡಿಸುತ್ತಿದರು.

ಕೋ. ಚೆಯವರೊಂದಿಗೆ ಡಾ. ಎ. ನಂಜಪ್ಪ, ಜ್ಯೋತಿಶಿವಲಿಂಗಪ್ಪ, ಕುಬೇರಪ್ಪ, ಮಹಾನಂದಯ್ಯ, ಆದಿನಾರಾಣ ರೆಡ್ಡಿ, ಅಯ್ಯಪ್ಪರೆಡ್ಡಿ, ಬುಡಾನ್‌ಸಾಹೇಬ್, ಎ.ಬಿ.ಆರ್. ಕೊಟ್ರಗೌಡ ಮುಂತಾದವರೆಲ್ಲಾ ಸೇರಿಕೊಂಡು 'ಸಂಯುಕ್ತ ವಿದ್ಯಾರ್ಥಿ ಸಂಘ'ವನ್ನು ಸಂಘಟಿಸಿ ಅದರ ಚಟುವಟಿಕೆಯನ್ನು ಇಡೀ ರಾಯಲಸೀಮದವರೆಗೂ ವಿಸ್ತರಿಸಿದರು.

ಕಾಲೇಜಿನಲ್ಲಿ 'ಸ್ಪೀಕರ್ಸ್ ಕ್ಲಬ್' ಎಂಬ ಸಂಘಟನೆ ಮಾಡಿಕೊಂಡು ದೇಶದ ಜ್ವಲಂತ ಸಮಸ್ಯೆಗಳ ಬಗ್ಗೆ ಚರ್ಚೆ ಏರ್ಪಡಿಸುತ್ತಿದ್ದರು. ಅಲ್ಲಿ ನಡೆಯುವ ಎಲ್ಲಾ ಚಟುವಟಿಕೆಗಳಿಗೆ ಈ 'ತ್ರೀ ಮಸ್ಕಟಯರ್ಸ್' ಗುಂಪೇ ಪ್ರಮುಖ ಸೂತ್ರದಾರರು. ಆದರೆ ಒಮ್ಮೆ ಪ್ರಿನ್ಸಿಪಾಲ್ ಮೆನನ್ನರ ಮಗನನ್ನೇ ಮನವೊಲಿಸಿ ಮನೆಗೆ ವಾಪಸ್ ಕಳಿಸಿದಾಗ ಮೆನನ್ ರೊಚ್ಚಿಗೆದ್ದರು. ಅಲ್ಲದೇ ಪೋಲಿಸರಿಗೆ ಈ ಕುರಿತು ದೂರು ನೀಡಿದರು. ಆಗ ರಿಜರ್ವ್ ಪೊಲೀಸ್ ಪಡೆ ಕಾಲೇಜಿನ ಆವರಣದಲ್ಲಿ ನುಗ್ಗಿ, ನಿಷ್ಕರುಣೆಯಿಂದ ಮನಬಂದಂತೆ ಏಟುಹಾಕಿ ವಿದ್ಯಾರ್ಥಿಗಳನ್ನು ಥಳಿಸತೊಡಗಿತು. ಆ ಸಮಯದಲ್ಲಿ ಕೋ. ಚೆಯವರಿಗೆ ಏಟುಬಿದ್ದವು. ಆದರೆ ಕಾಲೇಜ್ ಬಂದ್‌ಗೆ ಕರೆ ನೀಡಿದ್ದು ಮಾತ್ರ ಯಶಸ್ವಿಯಾಗಿತ್ತು. ಕಾಲೇಜ್ ಒಂದು ವಾರದ ಕಾಲ ಮುಚ್ಚಲಾಗಿತ್ತು. ನಂತರ ಕಾಲೇಜನ್ನು ಆಗಸ್ಟ್ ೨೦ರಂದು ಮತ್ತೇ ಪ್ರಾರಂಭಿಸಲಾಯಿತು.

ಸೆಪ್ಟಂಬರ್ ಮೊದಲ ವಾರದಲ್ಲಿ ಟರ್ಮಿನಲ್ ತ್ರೈ ಮಾಸಿಕ ಪರೀಕ್ಷೆಗಳು ಪ್ರಾರಂಭವಾದವು. ಆಗ ಈ ಮೂವರು ಒಂದು ಹಂಚಿಕೆ ಹೂಡಿ ಅದರಂತೆ ಕಾರ್ಯನಡೆಸಲು ಪರೀಕ್ಷೆಗಳಿಗೆ ಹಾಜರಾದರು. ಪರೀಕ್ಷೆಯ ಕೊನೆಯಲ್ಲಿ ಕೊಡುವ ಇಂಗ್ಲೀಷ್ ಮತ್ತು ಕನ್ನಡ ಉತ್ತರ ಪತ್ರಿಕೆಗಳಲ್ಲಿ ನೀಡಲಾಗಿದ್ದ ಪ್ರಶ್ನೆಗಳಿಗೆ ಉತ್ತರವನ್ನು ಬರೆಯಲಿಲ್ಲಿ. ಅಲ್ಲದೆ 'ಭಾರತದಲ್ಲಿ ಬ್ರಿಟಿಷರ ದಬ್ಬಾಳಿಕೆ', 'ಬ್ರಿಟಿಷ ಆಳಿಕೆಯ ದುಂರತ', 'ಬ್ರಿಟಿಷ ಸಾಮ್ರಾಜದ ವಿನಾಶ', 'ಕ್ವಿಟ್ ಇಂಡಿಯಾ' ಎಂಬ ತಲೆಬರಹಗಳ ಕೆಳಗೆ ಸೊಗಸಾಗಿ ಬ್ರಿಟಿಷ ಸಾಮ್ರಾಜ್ಯ ಶಾಹಿ ನೀತಿಯನ್ನು ವಿರೋಧಿಸಿ ಪ್ರಬಂಧಗಳನ್ನು ಬರೆದರು. ಈ ಪ್ರಬಂಧದಲ್ಲಿ ಬ್ರಿಟಷರ ಮೇಲಿನ ದ್ವೇಷ, ಆಕ್ರೋಶ, ಜಿಗುಪ್ಸೆಯನ್ನು ಬಹು ಕಟು ಭಾಷೆಯಲ್ಲಿ ವ್ಯಕ್ತಪಡಿಸಿದರು. ಅಲ್ಲದೆ "ಇತಿಹಾಸ ಮತ್ತು ಅರ್ಥಶಾಸ್ತ್ರದ ಪರೀಕ್ಷೆಗೆ" ಕೋ. ಚೆ ಕುಳಿತುಕೊಳ್ಳಲೇ ಇಲ್ಲ. ಹಾಗೂ ಪರೀಕ್ಷೆಗೆ ಯಾರು ಹಾಜರಗಬಾರದು ಎಂದು ಪ್ರಚೋದಿಸುತ್ತಿದ್ದರು. ಹಾಗೇ ಕೆಲವು ಪರೀಕ್ಷೆಯಲ್ಲಿ ಹಾಜರಾಗಿ 'ಬ್ರಿಟಿಷರೆ ಭಾರತ ಬಿಟ್ಟು ತೊಲಗಿರಿ' ಎಂದು, ಇಲ್ಲವೇ ಜನತೆ ಬಂಡಾಯ ಹೇಳಬಹುದಾದ ರೀತಿಯ ಕವನಗಳನ್ನು ಪರೀಕ್ಷೆಗೆ ನೀಡಿದ ಪೇಪರಿನಲ್ಲಿ ತುಂಬಿಸಿ ಕೊಡುತ್ತಿದರು.

## ಅನಂತಪುರ ಕಾಲೇಜಿನ ಲ್ಯಾಬ್ ಸ್ಫೋಟದ ಸದ್ದು

ಕೋ.ಚೆ ಓದುತ್ತಿದ ಅನಂಪುರದ ಕಾಲೇಜಿನ ಹೆಸರು 'ಸಿ.ಡಿ ಕಾಲೇಜ್' ಅಥವಾ 'ದತ್ತಮಂಡಲ ಕಾಲೇಜ್' ಎಂದು ಕರೆಯುತ್ತಿದ್ದರು. ಈ ಕಾಲೇಜಿನ ವಿದ್ಯಾರ್ಥಿಯಾಗಿದ್ದುಕೊಂಡು ಹೋರಾಟದ ಸ್ವರೂಪವನ್ನು ತೀವ್ರಗತಿಯಲ್ಲಿ ನಡೆಸುತ್ತಿದ್ದರು. ಆದರೆ ಇವರೆಲ್ಲ ಅಹಿಂಸಾತ್ಮಕ

ಹೋರಾಟದ ದಾರಿತುಳಿದಿದ್ದರು. ಅದಕ್ಕಾಗಿ ಇವರು ಭಾಷಣಗಳನ್ನು ಮಾಡುವುದು. ಬ್ರಿಟಿಷ ಸಾಮ್ರಾಜ್ಯದ ಆಡಳಿತದ ದೋರಣೆಗಳನ್ನು ಕಂಡಿಸುವುದು, ಶಾಲಾ ಕಾಲೇಜಿಗೆ ಬಂದ್‌ಗೆ ಕರೆನೀಡಿ ಮುಚ್ಚಿಸುವುದು ಇವರ ಹೋರಾಟದ ಸ್ವರೂಪವಾಗಿತ್ತು. ಈ ರೀತಿಯ ಹೋರಾಟವು ಇಡೀ ರಾಯಲ್ ಸೀಮಾ ಪ್ರದೇಶದವರೆಗೆ ವಿಸ್ತರಿಸಲು ಸಂಯುಕ್ತ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಿಕೊಂಡು ವಿದ್ಯಾರ್ಥಿಗಳನ್ನು ಸಂಘಟಿಸತೊಡಗಿದರು. ಅಲ್ಲದೇ ರಾಷ್ಟ್ರೀಯ ಚಳವಳಿಗೆ ಕರೆಗಳು ಬಂದಾಗ ಅವುಗಳನ್ನು ಚಾಚು ತಪ್ಪದೇ ಪಾಲಿಸಿಕೊಂಡು ಬರುತ್ತಿದರು. ಆದರೆ ಸೆಪ್ಟೆಂಬರ್ ಮೊದಲ ವಾರದಲ್ಲಿ ಟರ್ಮಿನಲ್ ತ್ರೈ ಮಾಸಿಕ ಪರೀಕ್ಷೆಗಳು ಪ್ರಾರಂಭವಾಗುವ ವೇಳೆಗಾಗಲೇ ಕೋ. ಚೆಯವರು ತಮ್ಮ ಗೆಳೆಯರೊಂದಿಗೆ 'ಚಲೇಜಾವ್ ಚಳವಳಿ'ಯಲ್ಲಿ ಭಾಗವಹಿಸಿ, ವಿದ್ಯಾರ್ಥಿಗಳಿಗೆ ರಾಷ್ಟ್ರೀಯ ಹೋರಾಟದ ಅರಿವು ಮೂಡಿಸತೊಡಗಿದರು. ಹಾಗಾಗಿ ಪರೀಕ್ಷೆಯಲ್ಲಿಯೂ ಕೂಡ 'ಭಾರತ ಬಿಟ್ಟು ತೊಲಗಿ' ಎಂದು ಬರೆದಿದ್ದರು. ಇಂತಹ ರಾಷ್ಟ್ರೀಯ ಹೋರಾಟದ ಹುಚ್ಚು ಕೋ. ಚೆಯವರಿಗೆ ಇತ್ತು. ಆದರೆ ಇವರ ಹೋರಾಟವೆಲ್ಲ ಗಾಂಧೀಜಿಯವರ ಅಹಿಂಸಾ ತತ್ವವನ್ನು ಆಧರಿಸಿತ್ತಾದರೂ ಸೆಪ್ಟೆಂಬರ್ ೧೨, ೧೯೪೨ರಂದು ಕಾಲೇಜಿಗೆ 'ಮೈಕೇಲ್ ಮಾಸ್' (ಚಳಿಗಾಲಕ್ಕೂ ಮುಂಚೆ ನೀಡುವ) ರಜೆ ನೀಡುವುದಕ್ಕಿಂತ ಮುಂಚಿತವಾಗಿ ಕೋ. ಚೆಯವರು ಬಹುತೇಕ ಗೆಳೆಯರು ತಮ್ಮ ತಮ್ಮ ಊರುಗಳಿಗೆ ಹೋದರು. ಆದರೆ ವಸತಿನಿಲಯದ ಊಟದ ಉಸ್ತುವಾರಿಯನ್ನು ಕೋ. ಚೆ ನೋಡಿಕೊಳ್ಳಬೇಕಾಗಿದ್ದರಿಂದ ಅದರ ಸಂಪೂರ್ಣ ಲೆಕ್ಕವನ್ನು ಹಾಸ್ಟಲ್ ವಾರ್ಡನ್‌ಗೆ ಒಪ್ಪಿಸಿ ಹೋಗಬೇಕಾಗಿದ್ದರಿಂದ ಕೋ. ಚೆ ಅಲ್ಲಿಯೇ ಉಳಿದುಕೊಂಡರು. ಆದರೆ ದುರ್ದೈವ "ಸೆ. ೯ರಂದು ರಾತ್ರಿ ಒಂದು ಭಯಂಕರ ಸ್ಫೋಟದ ಶಬ್ಧವಾಗಿ ಕೆಮಿಸ್ಟ್ರೀ ಲ್ಯಾಬೋರೆಟರಿಯು ಬೆಂಕಿಹತ್ತಿ ಧಗಧಗ"[೪] ಉರಿಯುತ್ತಿತ್ತು. ಆ ಲ್ಯಾಬೋರೆಟರಿಯ ಸ್ಫೋಟವನ್ನು ಯಾರೋ ಮಾಡಿದ್ದರು. ಆದರೆ 'ಬೆಂಕಿ ಹಚ್ಚಿ ವಿಧ್ವಂಸ ಕೃತ್ಯ ಮಾಡಿದ್ದ ಆರೋಪ ಈ ಕೆಳಗಿನವರ ಮೇಲೆ ಹೊರಿಸಲಾಗಿತ್ತು. ಅವರುಗಳೆಂದರೆ (೧) ಎ.ಬಿ.ಆರ್. ಕೋಟ್ರಗೌಡ (೨) ಎ. ಆದಿನಾರಾಯಣರೆಡ್ಡಿ (೩) ಕೋ. ಚೆನ್ನಬಸಪ್ಪ (೪) ಎಸ್.ವಿ. ನಾಗರೆಡ್ಡಿ (೫) ಕೆ. ತಿರುಮಲರೆಡ್ಡಿ (೬) ನಂಜಪ್ಪ (೭) ಎನ್.ಸಿ. ಗಂಗಿರೆಡ್ಡಿ (೮) ಮಲ್ಲಯ್ಯ ಇವರನ್ನೆಲ್ಲಾ ಅರೆಸ್ಟ್ ಮಾಡಿ, ಇಂಡಿಯಾನ್ ಪೀನಲ್‌ಕೋಡ್ ಸೆಕ್ಷನ್ ೧೨೦ ಬಿ ೪೩೦[೫] ಮುಂತಾದ ಆರೋಪ ಹೊರಿಸಿ ಜೈಲಿನಲ್ಲಿಡಲಾಗಿತ್ತು. ಈ ಆರೋಪ ಭಾರತ ಸಂರಕ್ಷಣಾ ನಿಬಂಧನೆ(Defince of Indian Rules )ಗಳ ಪ್ರಕಾರ. ಆರೋಪ ಸಾಬೀತಾದರೆ ಆರೋಪಿಗಳಿಗೆ ಮರಣದಂಡನೆ ಅಥವಾ ಜೀವಾವಧಿ ಶಿಕ್ಷೆ ನೀಡುವ ಸಾಧ್ಯತೆಗಳಿದವು.

### ೩.೨.೧ ಕೋ. ಚೆಯವರ ಬಂಧನ

ಕೋ. ಚೆಯವರು ಕಾಲೇಜ್ ರಜಾಕ್ಕೆ ಇನ್ನು ಐದು ದಿನ ಇದ್ದುದರಿಂದ ಅವರು ಹಾಸ್ಟಲಿನ ಉಸ್ತುವಾರಿಯ ಲೆಕ್ಕವನ್ನೆಲ್ಲಾ ವಾರ್ಡನ್‌ಗೆ ಒಪ್ಪಿಸಿ ಹೊರಾಡಬೇಕಾಗಿತ್ತು. ಆದರೆ ಅಂದೇ ನೆಡೆದ ಲ್ಯಾಬೋರೆಟರಿ ಸ್ಫೋಟದ ಸಂಚು ರೂಪಿಸಿದ ಅಪಾಧನೆ ಮೇರೆಗೆ ಇವರನ್ನು ಬಂದಿಸಲು ಪೋಲಿಸ್ ಬಂದು ಇವರನ್ನು ಕರೆದರು. ಕೋ. ಚೆ ಅವರಿಗೆ ಅರೆಸ್ಟ್ ವಾರೆಂಟ್

ಎಲ್ಲಿ? ಎಂದು ಕೇಳಿದರು. ಆಗ ಪೋಲಿಸರು ಅದನ್ನು ಸಬ್ ಇನ್ಸ್‌ಪೆಕ್ಟರ್ ಕೊಡುತ್ತಾರೆ ಬನ್ನಿ ಎಂದರು. ಆಗ ಎಲ್ಲಿಗೆ ಸ್ಥಾನ ಬಾದ್ಯತೆಗೊ ಅಥವಾ ವೇಲೂರಿಗೊ? ಎಂದು ಪ್ರಶ್ನಿಸಿದರು.

ಕೋಚೆಯವರ ಗೆಳೆಯ ಕುಬೇರಪ್ಪವರಿಗೆ ವಿಷಯ ತಿಳಿಸಿ ಮನೆಯಲ್ಲಿ ಧೈರ್ಯ ಹೇಳಿಬಿಡಿ ಎಂದು ನಿವೇದಿಸಿಕೊಂಡು" 'ಬರ್ತೇನೆ' ಯೋಚ್ನೆ ಮಾಡ್ ಬೇಡಿ, ಸ್ವಾತಂತ್ರ ಭಾರತದಲ್ಲೇ ಮತ್ತೆ ಬೇಟ್ಟಿಯಾಗೋಣ –ಬದುಕಿದ್ರೆ"! ಎಂದು ಜಟಕಾ ಹತ್ತಿ ಸ್ಟೇಷನಿಗೆ ಹೋದರು. ಅಲ್ಲಿ ನೀಲಂ ರಾಜಶೇಖರ ರೆಡ್ಡಿ ಮುಂತಾದ ಗೆಳೆಯರೊಡನೆ ಸೇರಿ ಕೊಂಡರು ರಾತ್ರಿ ಪೂರ್ತಿ ಸೊಳ್ಳೆಗಳ ಜೊತೆ ಕಡಿಸಿಕೊಂಡು ತೊಂದರೆ ಅನುಭವಿಸಿದರು. ಆದರೆ ಅವರಲ್ಲಿ ಉಂಟಾಗಿದ್ದ ರಾಷ್ಟ್ರ ಪ್ರೇಮದಿಂದ ಅಂದಿನ ರಾತ್ರಿ ಪೂರ್ತಿ ತೆಲುಗಿನಲ್ಲಿ ರಾಷ್ಟ್ರ ಭಕ್ತಿಪರ ಪದಗಳನ್ನು ಹಾಡುತ್ತಾ ಗೆಳೆಯರೊಂದಿಗೆ ಎದ್ದು ಬಿಟ್ಟಿದ್ದರು. ಮರು ದಿನ ಸಬ್ ಮ್ಯಾಜಿಸ್ಟ್ರೇಟರ್ ಮುಂದೆ ಹಾಜರ್ ಪಡಿಸಿ ನಂತರ ಅನಂತಪುರದ ಸಬ್ ಜೈಲಿಗೆ ಕಳಿಸಿಬಿಟ್ಟರು. ನವೆಂಬರು ತಿಂಗಳ ಮಧ್ಯಭಾಗದಲ್ಲಿ ಹದಿಮೂರು ಜನರ ಮೇಲೆ ಚಾರ್ಜಷೀಟ್ ಹಾಕಲಾಗಿತ್ತು. (ಅನುಭಂಧ–೩) ಅದೇ ನವೆಂಬರ್ ತಿಂಗಳ ಮಧ್ಯ ಭಾಗದಲ್ಲಿ ವಿಚಾರಣೆ ನಡೆಸುವ ಸಲುವಾಗಿ "ಆ ದಿನ ಅವರೆಲ್ಲರನ್ನು ಅನಂತಪುರದ ಸಬ್ ಜೈಲಿನಿಂದ ಕೈಗಳಿಗೆ ಬೇಡಿ ತೊಡಿಸಿ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿಕೊಂಡು ನ್ಯಾಯಾಲಯಕ್ಕೆ ಕರೆತರಲಾಯಿತು. ಅಂದು ಬೀದಿಯಲ್ಲಿ ಮೆರವಣಿಗೆ ಹೊರಟಾಗ ಸಾವಿರಾರು ಜನ ದಾರಿಯ ಅಕ್ಕಪಕ್ಕದಲ್ಲಿ ನಿಂತು ಇವರತ್ತ ಕೈಬೀಸಿ ಮೆಚ್ಚಿಗೆ ವ್ಯಕ್ತಪಡಿಸಿದರು ಅದೊಂದು ಹೃದಯ ಸ್ಪರ್ಶ ದೃಶ್ಯವಾಗಿ ಹೋಗಿತ್ತು ಎಂದು ತಿಳಿದುಬರುತ್ತದೆ.

**೩.೨.೨ ಆಪದ್ಬಾಂಧವರಾಗಿ ಬಂದ ಬಳ್ಳಾರಿಯ ರಾಘವ**

ಡಿಸೆಂಬರ್ ೧೨, ೧೯೪೨ರಂದು ಆ ದಿನ ಅನಂತಪುರದ ಸ್ಪೆಷಲ್ ಜಿಲ್ಲಾ ನ್ಯಾಯಲಯದ ಮುಂದೆ ಅವರ ವಿಚಾರಣೆ ಜರುಗುವುದಿತ್ತು. ಆರೋಪಿಗಳ ಪರವಾಗಿ ಉಚಿತವಾಗಿ ವಾದಿಸಲು ಬಳ್ಳಾರಿಯಿಂದ ರಾಘವ, ನಗರೂರ ನಾರಾಯಣರಾವ್ ಮತ್ತು ರೋದ್ದಂ ಹನುಮಂತರಾಯರು ಅನಂತಪುರಕ್ಕೆ ಬಂದು ಆರೋಪಿಗಳನ್ನು ಮಾತನಾಡಿಸಿದರು. ಹಾಗೆ ಆರೋಪ ಸ್ಥಾನದಲ್ಲಿದ್ದ ಇವರನ್ನು ಬೀದಿಯಲ್ಲಿ ಕೈಗೆ ಬೇಡಿ ತೊಡಿಸಿಕೊಂಡು ಕರೆದು ಕೊಂಡು ಬಂದಿರುವ ವಿಷಯ ಕೇಳಿ ರಾಘವ ಅವರು ಕೆಂಡ ಮಂಡಲವಾಗಿ ಹೋದರು. ಅಲ್ಲದೇ ಆರೋಪ ಹೊತ್ತು ಕೊಂಡವರನ್ನು ಕುರಿತು "ನೀವೇನು ದಿಗಿಲು ಪಡಬೇಡಿ Don't be disheartencd"[೬] ಎಂದು ಸಮಾಧಾನ ಪಡಿಸಿದರು. ಮೊದಲನೆಯ ದಿನದ ವಿಚಾರಣೆಗೆ ಎಂದು ಕರೆತಂದಾಗ ಕೈಗೆ ಬೇಡಿ ಹಾಕಿ ಕೊಲೆಪತಾಕಿಗಳಂತೆ ಭದ್ರ ಕಾವಲಿನಲ್ಲಿ ಕೋರ್ಟಗೆ ಕರೆತಂದು ಅಪಾದಿತರ ಕಟಕಟೆಯಲ್ಲಿ ಸಾಲಾಗಿ ನಿಲ್ಲಿಸಿದರು. ಇದನ್ನು ಕಂಡ ರಾಘವರು ಕೂಡಲೇ ಎದ್ದು ಪ್ರತಿಭಟಿಸುತ್ತಾ "ಯುವರ್ ಆನರ್ ಇವರು ಎಲ್ಲಾ ಆರೋಪಿಗಳಂತೆ ಸಮಾಜ ಘಾತಕರಲ್ಲ ಉಜ್ವಲ ದೇಶಪ್ರೇಮಿಗಳು ಮಹಾತ್ಯಾಗಿಗಳು ಇವರ ಮೇಲಿನ ಅಪಾದನೆ ರುಜುವಾತು ಆಗುವವರೆಗೂ ಇವರಿಗೆ ದೇಶಭಕ್ತರಿಗೆ ಸಲ್ಲುವ ಸನ್ಮಾನ ಸಲ್ಲಬೇಕು"[೭] ಎಂದು ವಾದಿಸಿ, ಕೈಗೆ ಬೇಡಿ

ಹಾಕಿದನ್ನು ಖಂಡಿಸಿದರು. ಕೂಡಲೇ ಕೈಗಳಿಂದ ಬೇಡಿಗಳನ್ನು ತೆಗೆದು ಹಾಕಲಾಗಿತ್ತು. ನಂತರ ರಾಘವ ಅವರು ನ್ಯಾಯಾಧೀಶ 'ಘೋರಿಮಹಮ್ಮದ್' ರವರನ್ನು ವಿನಂತಿಸಿಕೊಂಡು ತಮ್ಮ ಕಕ್ಷಿದಾರರಿಗೆ ಎರಡು ಬೆಂಚ್ ಹಾಕಿಸಿದರು. ಇದು ರಾಘವರಲ್ಲಿದ್ದ ದೇಶ ಪ್ರೇಮದ ಸಂಕೇತ ಎಂದು ಹೇಳಬಹುದು.

ವಿಚಾರಣೆಯು ಆರಂಭವಾಗಿ ಪೋಲಿಸರು ಸೃಷ್ಟಿಸಿ ಕಳಿಸಿದ ಸಾಕ್ಷಿಗಳು ಸರ್ಕಾರಿ ವಕೀಲರು ಕೇಳುವ ಪ್ರಶ್ನೆಗಳಿಗೆ ಸರಿಯಾಗಿಯೇ ಉತ್ತರಿಸುತ್ತಿದ್ದರು. ಆದರೆ ರಾಘವರು ಕೇಳುವ ಪ್ರಶ್ನೆಗಳಿಗೆ ಸರಿಯಾಗಿ ಉತ್ತರ ಕೊಡಲಾರದೆ ತಬ್ಬಿಬ್ಬಾಗಿ ಹೋಗುತ್ತಿದರು. ರಾಘವರವರು ಗಂಭೀರ ಸ್ವರದಿಂದ, ತೀಕ್ಷ್ಣ ದೃಷ್ಟಿಯಿಂದ ನಾಟಕೀಯ ರೀತಿಯಲ್ಲಿ ಸಾಕ್ಷಿಗಳನ್ನು ಪ್ರಶ್ನಿಸುತ್ತಿದ್ದರು. ಅದಕ್ಕೆ ಸಾಕ್ಷಿಗಳು ಬೆಪ್ಪಾಗಿ ಒಂದಕ್ಕೊಂದು ಸಂಬಂಧವಿಲ್ಲದಂತೆ ಕೊಡುವ ಉತ್ತರದಿಂದ ಅಲ್ಲಿ ನೆರೆದಿದ್ದವರನ್ನು ನಗುವಂತೆ ಮಾಡುತ್ತಿದ್ದರು.

ವಿದ್ಯಾರ್ಥಿಗಳ ವಿರುದ್ಧವಾಗಿ ಸಿ.ಡಿ ಕಾಲೇಜಿನ ಅಂದಿನ ಪ್ರಿನ್ಸಿಪಾಲರಾದ ಪ್ರೊ. ಮೆನನ್‌ರು ಸಾಕ್ಷಿ ಹೇಳಲು ಬಂದಿದ್ದರು. ಆಗ ರಾಘವರವರು ನೀವು ವಿದ್ಯಾರ್ಥಿಗಳೇ ಈ ಕೃತ್ಯದ ನಾಯಕರು ಅಂತ ಹೇಗೆ ಹೇಳುತ್ತೀರಿ ಎಂದಾಗ ಪ್ರಿನ್ಸಿಪಾಲರು ವಿವರಣೆ ನೀಡುತ್ತಾ ೧ ನೇ ಆರೋಪಿ ಕೊಟ್ರಗೌಡ. '೨ ಮತ್ತು ೩ನೇ ಆರೋಪಿಗಳು ವಿದ್ಯಾರ್ಥಿಗಳ ಆಂದೋಳನದಲ್ಲಿ ಪ್ರಮುಖ ಪಾತ್ರವಹಿಸಿದ್ದರು. ಇಂತಿಂತ ಕಡೆ ಇಂತಿಂತ ದಿನ ಮೆರವಣಿಗೆ ತೆಗೆದಿದ್ದರು, ಭಾಷಣ ಮಾಡಿದರು. ವಿದ್ಯಾರ್ಥಿಗಳನ್ನು ಮುಷ್ಕರ ಹೂಡುವಂತೆ ಪ್ರಚೋದಿಸಿದರು. ಅನಿರ್ದಿಷ್ಠ ಕಾಲ ಮುಷ್ಕರ ಹೂಡಬೇಕೆಂದು ದಿನಂಪ್ರತಿ ೧೦ನೇ ಆರೋಪಿ ರಾಘವಾಚಾರ್ಯರ ಮನೆಯಲ್ಲಿ ಸಭೆ ನಡೆಸುತ್ತಿದರು. ಆ ಪಿತೂಯರಿಲ್ಲಿ ೨. ೩. ೪. ೫. ೬. ೭. ೮. ೯. ಮತ್ತು ೧೦ನೇ ಆರೋಪಿಗಳು ಭಾಗವಹಿಸುತ್ತಿದ್ದರು. ಇವೆರೆಲ್ಲಾ ಪ್ರತಿ ರಾತ್ರಿ ೧೦ನೇ ಆರೋಪಿಯ ಮನೆಯಲ್ಲಿ ಕದ್ದು ಸುಭಾಶರ ಬಾನುಲಿ ಭಾಷಣಗಳನ್ನು ಕೇಳುತ್ತಿದ್ದರೆಂಬುದಾಗಿ ನನಗೆ ಬಂದ ಸುದ್ದಿ'" ಎಂದು ಹೇಳಿದರಲ್ಲದೇ ಕಳೆದ ಸೆಪ್ಟಂಬರ್ ತಿಂಗಳ ಪರೀಕ್ಷೆಗೆ ಕುಳಿತುಕೊಳ್ಳಬಾರದೆಂದು ಇವರೆಲ್ಲಾ ಇತರ ವಿದ್ಯಾರ್ಥಿಗಳನ್ನು ಪ್ರಚೋದಿಸಿದರು. ಅಲ್ಲದೆ ಪರೀಕ್ಷೆಗೆ ಹಾಜರಾದರೂ ಮನಸ್ಸಿಗೆ ಬಂದ ಪ್ರಬಂಧವನ್ನು ಬರೆದಿದ್ದಾರೆ ಎಂದರು. ಅದಕ್ಕೆ ಪಬ್ಲಿಕ್ ಪ್ರಾಸಿಕ್ಯೂಟರ್, ಆ ಪ್ರಬಂಧ ತಂದಿದ್ದೀರಾ? ಎಂದಾಗ ಪ್ರಿನ್ಸಿಪಾಲರು ತಂದಿದ್ದೇನೆ ಎಂದರು. ಹಾಗಾದರೆ ಅದನ್ನು ಓದಿರಿ ಎಂದರು. ಪ್ರಿನ್ಸಿಪಾಲ್ ಮೆನನ್ ಅತ್ಯಂತ ಬಿರುಸಾಗಿ ದೋಷರಹಿತ ಇಂಗ್ಲೀಷನಲ್ಲಿ ಓದತೊಡಗಿದ್ದರು. ನಿಜವಾಗಿಯು ಅವರುಗಳೆಲ್ಲ ಬರೆದ ಪ್ರಬಂಧಗಳು ಉತ್ತಮವಾಗಿದ್ದವು. ಅದನ್ನು ರಾಘವರು ಯಾವ ಪ್ರಿನ್ಸಿಪಾಲರು ವಿಶ್ವವಿದ್ಯಾನಿಲಯವು ಹೆಮ್ಮೆ ಪಡಬಹುದಾ ದಂಥ ಉತ್ತಮ ಪ್ರಬಂಧ. ನಾನಾಗಿದ್ದರೆ ಇದ್ದಕ್ಕೆ ಬಹುಮಾನ ಕೊಡಬೇಕೆಂದು ವಿಶ್ವವಿದ್ಯಾಲಯಕ್ಕೆ ಶಿಫಾರಸ್ಸು ಮಾಡುತ್ತಿದ್ದೆ ಎಂದರು.

ಪ್ರಿನ್ಸಿಪಾಲರು ಕೋ. ಚೆಯವರ ವಿರುದ್ಧ ಸಾಕ್ಷಿ ಹೇಳುವಾಗ ಇವರು ಇತಿಹಾಸ ಮತ್ತು ಅರ್ಥಶಾಸ್ತ್ರದ ಪರೀಕ್ಷೆಗೆ ಕುಳಿತುಕೊಳ್ಳಲೇ ಇಲ್ಲ, ಅಲ್ಲದೆ ಕಾಲೇಜಿನ ಇತರ ವಿದ್ಯಾರ್ಥಿಗಳೂ

ಕುಳಿತು ಕೊಳ್ಳಬಾರದೆಂದು ಪ್ರಚೋದಿಸಿದ್ದರು. ರಾಜನೀತಿ ಶಾಸ್ತ್ರ ಪರೀಕ್ಷೆಗೆ ಕುಳಿತುಕೊಂಡು ಉತ್ತರ ಪತ್ರಿಕೆ ತುಂಬಾ 'ಬ್ರಿಟಿಷರೇ ಭಾರತ ಬಿಟ್ಟು ತೊಲಗಿರಿ' ಎಂದು ಬರೆದಿದ್ದಾರೆ.

ಕನ್ನಡ ಪರೀಕ್ಷೆಯ ಪತ್ರಿಕೆಯಲ್ಲಿ ಕನ್ನಡ ಕವನ ಬರೆದು ಜನತೆಯನ್ನು ಬಂಡಾಯವೇಳಲು ಕರೆ ನೀಡಿದ್ದಾರೆ" ಎಂದರು. ಆಗ ಸರ್ಕಾರಿ ಪರ ವಕೀಲರು ಈ ಸಾಕ್ಷಿಗಳನ್ನು ಪ್ರಭಲ ಸಾಕ್ಷಿಯಾಗಿ ತೆಗೆದುಕೊಳ್ಳಬೇಕೆಂದರು ಆದರೆ ರಾಘವರು ಜಾಣ್ಮೆಯಿಂದ "Your honour, any college could be immensely proud of such students who could write so beautifully both in English and in their mother tongue Kannada. I enjoyed the chaste language of these essays most thoroughly. I hope the court also had enjoyed hearing them" ಹೀಗೆ ಮುಂದುವರಿದ ಟಿ. ರಾಘವರವರು ಆಪಾದಿತರ ಕಟಕಟಿಯತ್ತ ತಿರುಗಿ, ನಾಟಕೀಯವಾಗಿ ನ್ಯಾಯಧೀಶರನ್ನು ಸಂಭೋಧೀಸುತ್ತಾ. "These innocent boys look incapable of even sucking milk at their mothers's breast"ಎಂದು ನುಡಿದಾಗ ಇಡೀ ನ್ಯಾಯಾಲಯವು ನಗೆಗಡಲಿನಲ್ಲಿ ಮುಳುಗಿತು. ನಗೆ ಅಡಗಿದ ಮೇಲೆ ನ್ಯಾಯಾಧೀಶರ ಕಡೆಗೆ ತಿರುಗಿ"[೯] ಕೇಳುತ್ತಾರೆ. "Can anyone imagine that these youngsters could do such devil acts? ಎಂದು ಕೇಳಿ ಮತ್ತೊಂದು ಸಾಕ್ಷಿಯನ್ನು ವಿಚಾರಣೆಗೆ ಒಳಪಡಿಸುತ್ತಾರೆ. ಆ ಸಾಕ್ಷಿ "ನಾವೆಲ್ಲರೂ ಪಿತೂರಿ ನಡೆಸಿ ಕಾಲೇಜ ಕೆಮಿಸ್ಟ್ರಿ ಲ್ಯಾಬೊರೆಟೋರಿ ಸುಡಬೇಕೆಂದು ನಿರ್ಧರಿಸಿದೆವು. ೪ನೇ ಆರೋಪಿಯ ಸಂಬಂಧಿಯ ಪೆಟ್ರೋಲ್ ಬಂಕಿನಿಂದ ಒಂದು ಟನ್ ಪೆಟ್ರೋಲ್ ತಂದೆವು. ತಾ ೯-೯-೧೯೪೨ರ ರಾತ್ರಿ ನಮ್ಮಲ್ಲಿ ಯಾರೋ ಕೆಲವರು ಪೆಟ್ರೋಲ್‌ನಲ್ಲಿ ಅದ್ದಿದ ಬಟ್ಟೆ ತುಂಡುಗಳಿಗೆ ಬೆಂಕಿ ಹತ್ತಿಸಿ. ೮ನೇ ಆರೋಪಿ ವೆಂಕಟಪ್ಪನ ಸಹಾಯದಿಂದ ಕೆಮ್ಮಿಸ್ಟ್ರೇ ಲ್ಯಾಬ್ ಗೆ ಬೆಂಕಿ ಹಚ್ಚಿದೆವು"[೧೦] ಎಂಬುದಾಗಿ ಒಬ್ಬ ವ್ಯಕ್ತಿಯನ್ನು ಸಾಕ್ಷಿ ನುಡಿಯುವಂತೆ ಪೋಲಿಸರು ಸಿದ್ಧಪಡಿಸಿ ಕಳಿಸಿದ್ದರು. ಆದರೆ ಆ ವ್ಯಕ್ತಿ ಸಾಕ್ಷಿ ಕಟ್ಟೆ ಹತ್ತುವಾಗಲೇ ಬಲಗೈಯನ್ನು ಎಡಗೈಯಿಂದ ಹಿಡಿದುಕೊಂಡು ಅಳುತ್ತಲೇ ಬಂದ. ನ್ಯಾಯಾಧೀಶರು ಏನಾಗಿದೇ ಎಂದು ವಿಚಾರಿಸಿದಾಗ ಕೈಗೆ ಚೋಳು ಕುಟುಕಿದೆ ಎಂದ. ಅದಕ್ಕೆ ನ್ಯಾಯಾಧೀಶರು ನಿಜ ಹೇಳು ವಿಷ ಇಳಿದು ಹೋಗುತ್ತದೆ ಎಂದರು. ಆಗ ಅವನು "ನಿಜವಾಗಿಯೂ ನನಗೇನು ಗೊತ್ತಿಲ್ಲ, ಇವರು ಯಾರು ಎಂಬುದೂ ತಿಳಿದಿಲ್ಲ, ಅವರನ್ನು ಎಂದು ನೋಡಿಲ್ಲ, ಪೋಲಿಸರು ಒತ್ತಾಯ ಮಾಡಿ ಕರೆದು ತಂದಿದ್ದಾರೆ"[೧೧] ಎಂದು ಅಳುತ್ತಲೇ ಉತ್ತರಿಸಿದ್ದನು. ಇದರಿಂದ ಆರೋಪ ಸಾಬೀತಾಗಲಿಲ್ಲ. ಟಿ. ರಾಘವರು ಸರ್ಕಾರಿ ವಕೀಲರ ವಾದವನ್ನು ಹಾಗೂ ಪೋಲಿಸರ ಸಾಕ್ಷಿಗಳನ್ನು ಮಣ್ಣು ಮುಕ್ಕಿಸುವುದರೊಂದಿಗೆ ಆಪಾದಿತರನ್ನು ಬಿಡುಗಡೆ ಮಾಡಿಸಿದರು. ಇವರೆಲ್ಲರ ಪಾಲಿಗೆ ಅಂದು ಟಿ. ರಾಘವರವರು ನಿಜವಾಗಿಯೂ ಆಪದ್ಬಾಂದವರಾಗಿ ಬಂದಿದ್ದರು.

**೩.೨.೩ ಅನಂತಪುರದ ಸಬ್ ಜೈಲಿನಲ್ಲಿ ಕೋ. ಚೆ**

ಕೋ. ಚೆ ಮತ್ತು ಅವರ ಗೆಳೆಯರನ್ನು ರಾಸಯನ ಶಾಸ್ತ್ರದ ಲ್ಯಾಬೋರೆಟರಿ ಸ್ಫೋಟಿಸಿದ

ಆಪಾದನೆಯ ಮೇರೆಗೆ ಬಂಧಿಸಿ ಅಂನತಪುರದ ಸಬ್ ಜೈಲಿನಲ್ಲಿ ಇರಿಸಲಾಗಿತ್ತು. ಅಲ್ಲಿ ಕೋ.ಚೆಯವರಿಗೆ ಇತರ ಸ್ವಾತಂತ್ರ್ಯ ಹೋರಾಟಗಾರರ ಪರಿಚಯವಾಗಿತ್ತು. ಅದರಲ್ಲಿ ಗುಂತಕಲ್ಲು ರೈಲು ಹಳ್ಳಿ ತಪ್ಪಿಸಿ ಧಾನ್ಯಗಳನ್ನು ಲೂಟಿ ಮಾಡಿದ ಆರೋಪರ ಮೇಲೆ ನಾರಾಯಣಪ್ಪ ಎಂಬ ವೃದ್ಧನ ಪರಿಚಯವಾಗಿತ್ತು. ಆ ನಾರಾಯಣಪ್ಪ ೧೯೨೧ ರಿಂದಲೇ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಅವರು ಗಾಂಧೀಜಿಯವರ ಚಳವಳಿಯ ಕರೆ ಬಂದಾಗಲೆಲ್ಲಾ ಮನೆ-ಮಠ-ಮಡದಿ, ಮಕ್ಕಳನ್ನು ಬಿಟ್ಟು ದೇಶದ ಸ್ವಾತಂತ್ರ್ಯಕಾಗಿ ಶ್ರಮಿಸುತ್ತಿದ್ದರು. ಇವರ ಕಥೆಯನ್ನು ಆಧಾರಿಸಿ ಮುಂದೆ ಕೋ.ಚೆಯವರು 'ಗಡಿಪಾರು'ಎಂಬ ಕಥಾ ಸಂಕಲನದಲ್ಲಿ ನಾರಾಯಣಪ್ಪನನ್ನು ಚಿತ್ರಿಸಿದ್ದಾರೆ. ಹೀಗೆ ಅಲ್ಲಿಯ ಖೈದಿಗಳನ್ನು ಕೋ. ಚೆಯವರು ತಮ್ಮ ಸಾಹಿತ್ಯದ ಸೃಷ್ಟಿಯಲ್ಲಿ ತಂದರು.

ಅನಂತಪುರದ ಸಬ್ ಜೈಲಿನಲ್ಲಿದ್ದಾಗಲೇ ಸ್ವಾಮಿ ವಿವೇಕಾನಂದರ ಪತ್ರಗಳನ್ನು ಕೋ.ಚೆ ಅನುವಾದಿಸಿದರು. ಅದಕ್ಕೆ ಬೇಕಾಗಿದ್ದ ಪೆನ್ಸಿಲ್ ಕಾಗದವನ್ನು ಐಬಾಕ್ ಪೋಲಿಸರಿಂದ ಪಡೆಯುತ್ತಿದರು. ಇದು ಯಾವುದೇ ನಿಘಂಟಿಲ್ಲದೇ ಅನುವಾದ ಮಾಡಲಾಗಿತ್ತಾದರೂ ಇದು ಕೋ. ಚೆಯವರ ಪ್ರಪ್ರಥಮ ಪುಸ್ತಕವಾಗಿತ್ತು. ಇದರಿಂದ ಕೋ. ಚೆಯವರ ಸಾಹಿತ್ಯ ಸೇವೆ ಆರಂಭವಾಗಿದ್ದದೂ ಅನಂತಪುರದ ಸಬ್ ಜೈಲಲ್ಲಿ.

ಕೋ.ಚೆಯವರು ಜೈಲಿನಲ್ಲಿ ಸಾಹಿತ್ಯದ ಸೃಷ್ಟಿಯ ಜೊತೆಗೆ ಸಾಹಿತ್ಯದ ಅಭ್ಯಾಸವನ್ನು ಆರಂಭಿಸಿದರು. ಅಲ್ಲಿ 'ಜಗತ್ ಕಥಾ ವಲ್ಲರಿ', 'ಗಾಂಧೀಜಿಯ ಆತ್ಮಕಥೆ', 'ಲಿನ್‌ಯುಟಾಂಗದ ಗ್ರಂಥಗಳು' ಹಾಗೂ ವಿಲ್‌ಡ್ಯೂರಾಂಟರ ಕೃತಿಗಳನ್ನು ಅಭ್ಯಾಸಿದರು. ಜೊತೆಗೆ ಕಮ್ಯುನಿಸ್ಟ್ ತಾತ್ತ್ವಿಕ ಗ್ರಂಥಗಳನ್ನು ಜೈಲಿನಲ್ಲಿ ನಿಷೇಧಿಸಿದ್ದರೂ ಪೋಲಿಸರ ಸಹಾಯ ಮತ್ತು ಶ್ರೀ ನಿಲಂ ಹಾಗೂ ಸದಾಶಿವನವರು ಕೆಲವು ಕಮ್ಯುನಿಸ್ಟ್ ಗ್ರಂಥಗಳನ್ನು ತರಿಸಿಕೊಡುತ್ತಿದ್ದರು. ಈ ರೀತಿಯಾಗಿ ಜೈಲಿನಲ್ಲಿನ ದಿನಗಳನ್ನು ವ್ಯರ್ಥ ಮಾಡದೆ ಸದ್ಬಳಕೆ ಮಾಡಿಕೊಂಡರು.

**೩.೩ ಬಿಡುಗಡೆಗೊಂಡ ಮೇಲೆ**

ಕೋ. ಚೆಯವರನ್ನು ಸೆಪ್ಟೆಂಬರ್ ೯. ೧೯೪೭ರಂದು ಬಂಧಿಸಿಲಾಗಿತ್ತು. ಆದರೆ ಎಲ್ಲಾ ವಿಚಾರಣೆ ಮುಗಿಯುವ ವೇಳೆಗಾಗಲೇ ಮೂರು ತಿಂಗಳಿಗಿಂತ ಹೆಚ್ಚು ದಿನವಾಗಿತ್ತು. ಕೊನೆಗೆ, ಡಿಸೆಂಬರ್ ೧೭, ೧೯೪೭ರಂದು ಬಿಡುಗಡೆ ಆಯಿತು. ಆಗ ಕೋ. ಚೆ ಒಂದೆರಡು ದಿನ ಅನಂತಪುರದಲ್ಲಿದ್ದು ನೊಂದ ಮನಸ್ಸಿನಿಂದ ಊರಿನತ್ತ ನಡೆದರು. ಮಗನ ಬರುವಿಕೆಯನ್ನು ನಿರಿಕ್ಷಿಸುತ್ತಿದ್ದ ತಂದೆ ತಾಯಿಗಳು ಸಂತೋಷಗೊಂಡರು. ಆದರೆ ಮನೆಯಲ್ಲಿನ ಪರಿಸ್ಥಿತಿ ಕೋ. ಚೆಯವರಿಗೆ ತುಂಬಾ ಆಘಾತವನ್ನುಂಟು ಮಾಡಿತು. ಕೋ. ಚೆಯವರ ಇಬ್ಬರು ತಂಗಿಯರಾದ ಸರೋಜ ಮತ್ತು ಉಮಾ ಎಂಬುವವರು ಕೋ ಚೆ. ಜೈಲಿನಲ್ಲಿ ಇದ್ದಾಗ ಟೈಫಾಯಿಡ್‌ನಿಂದ ಮರಣ ಹೊಂದಿದ್ದರು. ಆ ಸಂಗತಿ ಕೋ. ಚೆಯವರಿಗೆ ಆ ಮುಂಚೆ ತಿಳಿದಿರಲಿಲ್ಲ, ಅಲ್ಲದೇ ಮನೆಯ ಆರ್ಥಿಕ ಪರಿಸ್ಥಿತಿಯಂತು ತುಂಬಾ ಶೋಚನೀಯವಾಗಿತ್ತು. ಎರಡನೇ ಮಹಾಯುದ್ಧ ನಡೆಯುತ್ತಿದ್ದ ಆ ಸಮಯದಲ್ಲಿ ಕೋ. ಚೆಯವರ ತಂದೆಯ

ವ್ಯಾಪರವು ಕ್ಷೀಣಿಸಿತ್ತು. ಏಕೆಂದರೆ ಅವರ ವ್ಯಾಪರವೆಲ್ಲ ಮೈಸೂರು ಮತ್ತು ಮದ್ರಾಸ್ ಸಂಸ್ಥಾನದಲ್ಲಿತ್ತು. ಆದರೆ ಕಂಟ್ರೋಲ್ ಕಾಯಿದೆ ಜಾರಿಗೆ ಬಂದು, ಮೈಸೂರು ಸಂಸ್ಥಾನದ ವಸ್ತುಗಳನ್ನು-ಮದ್ರಾಸ್ ಪ್ರೆಸಿಡೆನ್ಸಿಗಾಗಲಿ ಅಥವಾ ಮದ್ರಾಸ್ ಪ್ರೆಸಿಡೆನ್ಸಿಯ ವಸ್ತುಗಳನ್ನು- ಮೈಸೂರು ಸಂಸ್ಥಾನಕ್ಕಾಗಲಿ ಮಾರುವಂತಿರಲಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಮಳೆ ಕೈಕೊಟ್ಟು ಸರಿಯಾಗಿ ಬೆಳೆಯೂ ಬರಲಿಲ್ಲ. ಹೀಗಾಗಿ ಕೋಚೆಯವರ ಮನೆ ತುಂಬಾ ಆರ್ಥಿಕ ಕಷ್ಟವನ್ನು ಎದುರಿಸಬೇಕಾಗಿತ್ತು. ಆದರೆ ಕೋ. ಚೆಯವರ ತಂದೆ ತಾಯಿಗಳು ಮಗ ೩ ತಿಂಗಳಲ್ಲಿ ಬಿ.ಎ. ಮುಗಿಸಿ ಮನೆಗೆ ಆಸರೆಯಾಗುತ್ತಾನೆ. ಯಾವುದಾದರು ನೌಕರಿ ಪಡೆದು ಮನೆಗೆ ಸಹಾಯಕನಾಗುತ್ತಾನೆ ಎನ್ನುವ ಭರವಸೆ ಹೊಂದಿದರು. ಆದರೆ ಕೋ.ಚೆಯವರಿಗೆ ಇದ್ಯಾವುದೂ ಅರಿವಿಗೆ ಬರಲಿಲ್ಲ. ಅವರಿಗೆ ಗಾಂಧೀಜಿಯವರ 'ಮಾಡು ಇಲ್ಲವೇ ಮಡಿ' ಎಂಬುವ ತತ್ವ ಮೇಲಿನ ಎಲ್ಲಾ ಸಮಸ್ಯೆಗಳನ್ನು ಮರೆಸಿ ಚಳವಳಿಗೆ ದುಮಿಕಿಸಿ ಬಿಟ್ಟಿತ್ತು. ಆದರೆ ಮನೆಯವರಾರು ಕೋ. ಚೆಯವರ ಮೇಲೆ ಬೇಸರ ಪಡಲಿಲ್ಲ. ಅದು ಎಲ್ಲೋ ಒಂದು ಕಡೆ ಮಗನ ಹೋರಾಟ ಸರಿಯಾಗಿದೆ ಎಂಬುವ ನಂಬಿಕೆ ಹೆತ್ತವರಿಗೆ ಇತ್ತು.

### ೩.೪ ಮತ್ತೇ ವಿದ್ಯಾಭ್ಯಾಸದ ಕಡೆಗೆ

ಕೋ. ಚೆ ಚಳವಳಿಯಲ್ಲಿ ಭಾಗವಹಿಸಿ ಮಾಡದ ತಪ್ಪಿಗೆ ಜೈಲು ಶಿಕ್ಷೆ ಅನುಭವಿಸಿ ನೋವಿಂದ ಊರಿಗೆ ಬಂದಿದ್ದರು. ಆದರೆ ಗುರಣ್ಣನವರು ಮಾತ್ರ ಕೋ. ಚೆಯವರ ಮೇಲೆ ಬೆಟ್ಟದಷ್ಟು ಭರವಸೆ ಇಟ್ಟು ಕೊಂಡಿದ್ದರು. ಅವರು ಕೋ. ಚೆಯವರನ್ನು ಐ.ಸಿ.ಎಸ್ ಪರೀಕ್ಷೆ ಪಾಸು ಮಾಡಿಸಬೇಕೆಂಬ ಆಸೆ ಹೊಂದಿದ್ದರು. ಆದರೆ ಅವರ ಆಸೆಗಳೆಲ್ಲಾ ಚಳವಳಿಯು ನುಂಗಿ ಬಿಟ್ಟಿತು. ಕೊನೆಗೆ ಗುರಣ್ಣನವರು ಕೋ. ಚೆಯವರಿಗೆ ನೀನು ಮಾರ್ಚ್ ತಿಂಗಳ ಪರೀಕ್ಷೆಗೆ ಕುಳಿತುಕೊಳ್ಳಬೇಕು, ಅದಕ್ಕೆ ನಿಮ್ಮ ಪ್ರಿಸ್ಸಿಪಾಲರು ಅವಕಾಶ ನೀಡುವರೋ ಇಲ್ಲವೋ ತಿಳಿದುಕೊಳ್ಳು ಎಂದರು. ಕೋ. ಚೆ ಮತ್ತೆ ಅನಂತಪುರಕ್ಕೆ ಬಂದು ಪ್ರಿಸ್ಸಿಪಾಲ್ ಮೆನನ್‌ರವರನ್ನು ಕಂಡು ಪರೀಕ್ಷೆಗೆ ಕುಳಿತುಕೊಳ್ಳಲು ಅನುಮತಿ ನೀಡಬೇಕೆಂದು ಒಂದು ಅರ್ಜಿ ಕೋರಿದರು. ಅದನ್ನು ಮೆನನ್ ವಿಶ್ವವಿದ್ಯಾಲಯಕ್ಕೆ ಶಿಫಾರಸ್ತು ಮಾಡುವುದಾಗಿ ತಿಳಿಸಿ ಕಾಲೇಜಿಗೆ ಬರಲು ಅನುಮತಿ ನೀಡಿದರು. ಆದರೆ ಈ ಹಿಂದೆ ಹಾಸ್ಟಲ್‌ನಲ್ಲಿ ಉಳಿದುಕೊಂಡು ಚಳವಳಿಯಲ್ಲಿ ಭಾಗವಹಿಸಿದ್ದರಿಂದ ಹಾಸ್ಟಲ್‌ನಲ್ಲಿ ಕೋ. ಚೆಯವರಿಗೆ ಸ್ಥಾನ ದೊರೆಯಲಿಲ್ಲ. ಆಗ ಗೆಳಯ ಸಂಜೀವಯ್ಯ ಮತ್ತು ಕೆ.ಬಿ. ನರಸಪ್ಪನವರ ರೂಮಿನಲ್ಲಿ ಉಳಿದುಕೊಂಡರು. ಕೊನೆಗೆ ವಿಶ್ವವಿದ್ಯಾಲಯದಿಂದ ಪರೀಕ್ಷೆಯಲ್ಲಿ ಕುಳಿತು ಕೊಳ್ಳಲು ಅನುಮತಿ ದೊರೆಯಿತು. ಕೋ. ಚೆ. ಪರೀಕ್ಷೆಯಲ್ಲಿ ಕುಳಿತು ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾದರು.

ಕೋ. ಚೆಯವರು ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದಕ್ಕೆ ಸಾತಂತ್ರ್ಯ ಬಂದನಂತರ ಮದ್ರಾಸ್ ಸರ್ಕಾರ ಭೂಮಿಯನ್ನು ಕೊಟ್ಟಿತು. (ಅನುಬಂಧ-೪) ಆದರೆ ಕೋ. ಚೆ ಭೂಮಿಯನ್ನು ತೆಗೆದುಕೊಳ್ಳಲಿಲ್ಲ. ಅದನ್ನು ನಿರಾಕರಿಸಿದರು ತರುವಾಯ ಭಾರತ ಸರ್ಕಾರ ಮತ್ತು ರಾಜ್ಯಸರ್ಕಾರಗಳು ಮಾಸಾಶನ ಕೊಟ್ಟರೂ ಅವುಗಳನ್ನು ಸಹ ಕೋ. ಚೆ ನಿರಾಕರಿಸಿದರು.

ಏಕೆಂದರೆ ಆಗ ಚಳವಳಿಯಲ್ಲಿ ಭಾಗವಹಿಸಿದ್ದು ಪ್ರತಿಫಲ ಪಡೆಯುವುದಕ್ಕಾಗಿ ಅದು ಅಲ್ಲಿ ಪ್ರತಿಫಲ ಪಡೆದ ಮೇಲೆ ಅದು 'ತ್ಯಾಗ' ಎಂದು ಎನಿಸಿಕೊಳ್ಳವುದಿಲ್ಲ ಎಂಬುದು ಕೋ. ಚೆಯವರ ವಿಚಾರವಾಗಿತ್ತು. ಆದರೆ ರಾಮಕೃಷ್ಣ ಹೆಗೆಡೆಯವರು ಇವರಿಗೆ ಮಸಾಶನ ಪಡೆಯುವಂತೆ ಬಲವಂತ ಪಡಿಸಿದ್ದರಿಂದ ೧೯೯೩ ರಿಂದ ಪಡೆಯುತ್ತಿದ್ದಾರೆ ಹಾಗೂ ಆ ಹಣವನ್ನು ತಮ್ಮ ವೈಯಕ್ತಿಕ ಕಾರ್ಯಕ್ಕೆ ಬಳಸದೆ ಸಮಾಜದ ಸೇವೆಗೆ ಮುಡುಪಾಗಿಟ್ಟಿದ್ದಾರೆ.

**ಅಡಿ ಟಿಪ್ಪಣಿ**

೧. ರವಿಕುಮಾರ್ ಎನ್.ಎಂ., (ಸಂ) ಮುನ್ನಡೆಯ ಕೂಡ್ಲಿಗಿ;, ಕೂಡ್ಲಿಗಿ ತಾಲೂಕಿನ ಸಮಗ್ರ ದರ್ಶನ, ಪ್ರಕಾಶಕರು ಹಿಮಂತ ಪ್ರಕಾಶನ ಯಂ.ಬಿ. ಅಯ್ಯನಹಳ್ಳಿ, ೧೯೯೮ ಪುಟ-೧೧೪.

೨. ವಿವಿಧ ಲೇಖಕರು; ಕೋಚೆ ಯಾರು ಏನು ಎಂತು?, ಪ್ರಕಾಶನ ಕೋ. ಚೆ ಸಂಭಾವನಾ ಸಮಿತಿ, ಬೆಂಗಳೂರು ೧೯೮೭ ಪುಟ -೨೨೨

೩. ಅದೇ ಪುಟ-೨೪೦

೪. ಅದೇ ಪುಟ-೨೨೩

೫. ಅದೇ ಪುಟ-೨೩೨

೬. ಅದೇ ಪುಟ-೨೩೩

೭. ಅದೇ ಪುಟ-೨೩೫

೮. ಅದೇ ಪುಟ-೨೩೯

೯. ಶೇಷಾದ್ರಿ ಬಿ (ಸಂ): ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ., ೧೯೯೮, ಪುಟ-೧೧೮

೧೦. ವಿವಿಧ ಲೇಖಕರು: ಕೋಚೆ ಯಾರು ಏನು ಎಂತು?, ಪ್ರಕಾಶನ ಕೋ. ಚೆ ಸಂಭಾವನಾ ಸಮಿತಿ, ಬೆಂಗಳೂರು ೧೯೮೭ ಪುಟ-೨೪೦

೧೧. ಅದೇ. ಪುಟ-೨೪೧

# ಅಧ್ಯಾಯ ೪

## ಏಕೀಕರಣ ಚಳವಳಿಯಲ್ಲಿ ಕೋ. ಚನ್ನಬಸಪ್ಪನವರು

## ಅಧ್ಯಾಯ – ೪
## ಏಕೀಕರಣ ಚಳವಳಿಯಲ್ಲಿ ಕೋ. ಚನ್ನಬಸಪ್ಪನವರು

---

ಇಂದಿರುವ ಕರ್ನಾಟಕದ ಭೌಗೋಳಿಕ ವ್ಯಾಪ್ತಿ ಪ್ರಾಚೀನ ಕಾಲದಿಂದಲೂ ಒಂದೇ ರೀತಿ ಇಲ್ಲದಿರುವುದು ಚಾರಿತ್ರಿಕ ಘಟನೆಗಳು ಧೃಡಪಡಿಸಿವೆ. ಆದರೆ ಇಪ್ಪತ್ತನೆ ಶತಮಾನದ ಆರನೆಯ ದಶಕದಲ್ಲಿ ಕನ್ನಡ ಮಾತನಾಡುವ ಪ್ರದೇಶಗಳು ಒಂದಾಗಿ ಇಂದು ಕರ್ನಾಟಕ ಎಂದು ಕರೆಯಲ್ಪಡುತ್ತಿದೆಯಾದರೂ ಈ ಕರ್ನಾಟಕದ ರಚನೆ ಮತ್ತು ಸ್ಥಾಪನೆಯ ಹಿಂದೆ ಅನೇಕ ಹೋರಾಟಗಳು ಕಂಡು ಬರುತ್ತವೆ. ಅಂತಹ ಹೋರಾಟದಲ್ಲಿ ಅನೇಕರು ಭಾಗವಸಿದ್ದಾರೆ. ಅಂತವರಲ್ಲಿ ಕೋ. ಚೆನ್ನಬಸಪ್ಪನವರು ಕೂಡ ಒಬ್ಬರು.

**೪.೧ ಭಾಷಾವಾರು ಪ್ರಾಂತ್ಯಗಳ ರಚನೆಯ ಹಿನ್ನಲೆ**

ಮೈಸೂರು ಸಂಸ್ಥಾನದ ಆಡಳಿತವು ಟಿಪ್ಪು ಸುಲ್ತಾನನ ದುರಂತ ಮರಣದೊಂದಿಗೆ ಅರಿದು ಹಂಚಿಹೋಗಿತ್ತು. ಅಲ್ಲಿಯವರೆಗೂ ಬಹುತೇಕ ಕನ್ನಡ ಮಾತನಾಡುವ ಪ್ರದೇಶಗಳೆಲ್ಲಾ ಒಂದೇ ಆಡಳಿತದ ಸೂತ್ರದಲ್ಲಿದ್ದವು. ಆದರೆ ಟಿಪ್ಪುವಿನ ಮರಣದ ನಂತರ ಮೈಸೂರು ಸಂಸ್ಥಾನವನ್ನು ನಾಲ್ಕು ಭಾಗವಾಗಿ ವಿಂಗಡಿಸಿ ಅವುಗಳನ್ನು ಬ್ರಿಟಿಷರು, ಮರಾಠರು, ಹೈದ್ರಬಾದ ನಿಜಾಮ ಹಾಗೂ ಮೈಸೂರಿನ ಹಿಂದಿನ ಅರಸರುಗಳು ಹಂಚಿಕೊಂಡರು.

೧)ಮೈಸೂರು ಸಂಸ್ಥಾನ

೨)ಹೈದರಬಾದ ಸಂಸ್ಥಾನ

೩)ಕೊಡಗು

೪)ಬಾಂಬೆ ಕರ್ನಾಟಕ

೫)ಮದರಾಸು ಕರ್ನಾಟಕ

ಹೀಗೆ ಬೇರೆ ಬೇರೆ ಭಾಗಗಳಲ್ಲಿ ಹಂಚಿಹೋದ ಭಾಗದ ಜನತೆಯ ಸ್ಥಿತಿ ಅತಂತ್ರವಾಗಿತ್ತು ಬಾಂಬೆ ಪ್ರಾಂತ್ಯದ ಕನ್ನಡಿಗರು ಅಲ್ಲಿ ಪ್ರಬಲರಾಗಿದ್ದ ಮರಾಠಿಗರು ಮತ್ತು ಮರಾಠಿ ಭಾಷೆಯ ಒತ್ತಡಗಳಿಗೆ ಈಡಾದರು. ಪರಕೀಯ ಇಂಗ್ಲಿಷ್ ಭಾಷೆ ಮತ್ತು ಇಂಗ್ಲಿಷರ ಆಡಳಿತದ ಪ್ರಭಾವದಿಂದ ಒಂದು ಕಡೆ ಸಂಕಷ್ಟಕ್ಕೆ ಈಡಾದರೆ, ಶಾಲಾ-ಕಾಲೇಜು ಮತ್ತು ಆಡಳಿತ ಕಛೇರಿಗಳಲ್ಲಿ ಅನ್ಯ ಭಾಷೆಯ ಹೇರಿಕೆಯಿಂದ ಇನ್ನೊಂದು ಕಡೆ ಬಳಲಿದರು. ಹೈದರಬಾದ್ ಕರ್ನಾಟಕವಂತೂ ನಿಜಮಾನ ಸರ್ವಾಧಿಕಾರದಿಂದ ನಲುಗಿ ಹೋಗುತ್ತಿದ್ದರು. ೧೯೪೦ರ ತನಕ ಈ ಪ್ರದೇಶಗಳಲ್ಲಿ ರಾಜಕೀಯ ಚಟುವಟಿಕೆಯ ಮಾತಿರಲಿ ಯಾವುದೇ ಬಗೆಯ ಸಾಮಜಿಕ-ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಆಸ್ಪದವಿರಲಿಲ್ಲ. ಮದರಾಸು ಪ್ರಾಂತ್ಯದಲ್ಲಿ ಕನ್ನಡಿಗರು, ತಮಿಳರು, ತೆಲುಗರು ಮತ್ತು ಮಲೆಯಾಳಿಗಳ ನಡುವೆ ಕಾಲುಹಾಕುತ್ತಿದ್ದರು.[೧]

ಆಧುನಿಕ ಭಾರತದ ಚರಿತ್ರೆಯಲ್ಲಿ ೧೮೫೭ರ ಮೊದಲ ಸ್ವಾತಂತ್ರ್ಯ ಸಂಗ್ರಾಮದಿಂದ ಬ್ರಿಟೀಷರ ಸಂಸತ್ತು ಭಾರತದ ಬಗ್ಗೆ ವ್ಯಾಪಕ ಚರ್ಚೆ ನಡೆಸಿತು. "ಈ ಚರ್ಚೆಯಲ್ಲಿ ಪ್ರಾಸಂಗಿಕವಾಗಿ ಭಾಷಾವಾರು ಪ್ರಾಂತ ರಚನೆಯ ಬಗ್ಗೆ ಪ್ರಸ್ತಾಪ ಮಾಡಿದ ವ್ಯಕ್ತಿ ಜಾನ್‌ವೊಟ್"[೨] ಆದರೆ, ೧೮೬೨ರಲ್ಲಿ ಉತ್ತರ ಕನ್ನಡ ಜಿಲ್ಲೆಯನ್ನು ಮುಂಬೈನಿಂದ ಬಾಂಬೆ ಪ್ರಾಂತಕ್ಕೆ, ಬಂಗಾಳ ಪ್ರಾಂತ್ಯದಲ್ಲಿದ್ದ, ಸಿಲ್ಹಟ್ ಜಿಲ್ಲೆಯನ್ನು ಅಸ್ಸಾಮಿಗೆ ವರ್ಗೀಕರಣ ಮಾಡಿ ಒಡೆದಾಳುವ ತಂತ್ರ ಜಾರಿಗೆ ತಂದರು.

ಹತ್ತೊಂಬತ್ತನೇ ಶತಮಾನದ ನಡುವಿನ ಹೊತ್ತಿಗೆ ಕನ್ನಡಿಗರಲ್ಲಿ ಪ್ರಜ್ಞಾವಂತರಾದವರು ತಮಗಾಗಿರುವ ಹಾನಿಯ ಪ್ರಮಾಣವನ್ನು ಅರಿಯತೊಡಗಿದರು. ಈ ಅರಿವು ತನ್ನ ಭಾಷೆ ಮತ್ತು ಸಾಹಿತ್ಯ-ಸಂಸ್ಕೃತಿಗಳ ಅನನ್ಯತೆಯನ್ನು ಗುರ್ತಿಸಿ, ಪೋಷಿಸುವಂಥ ವೈಯಕ್ತಿಕ ಪ್ರಯತ್ನಗಳನ್ನು ಮಾಡತೊಡಗಿದರು. "ಇಂತಹ ಪ್ರಯತ್ನಗಳಲ್ಲಿ ಮೊದಲ ನಿರ್ಣಾಯಕವಾದ ಹೆಜ್ಜೆಯೆಂದರೆ ಧಾರವಾಡದಲ್ಲಿ ರಾ.ಹ. ದೇಶಪಾಂಡೆ ಮತ್ತು ಸಂಗಡಿಗರಿಂದ ೧೮೯೦ರಲ್ಲಿ 'ಕರ್ನಾಟಕ ವಿದ್ಯಾವರ್ಧಕ ಸಂಘದ ಸ್ಥಾಪನೆ"[೩] ಯಾಗಿದೆ. ಭಾಷೆ-ಸಂಸ್ಕೃತಿಗಳ ಹೀನ ಸ್ಥಿತಿಯನ್ನು ದೂರ ಮಾಡುವುದಕ್ಕಾಗಿ ಹಲವಾರು ಕಡೆ ಸಭೆ, ಸಮಾರಂಭಗಳನ್ನು ನಡೆಸುತ್ತಾ, ಕನ್ನಡ ಸಂಸ್ಕೃತಿ-ಚರಿತ್ರೆ, ಕನ್ನಡ ಭಾಷೆಗಳ ಬಗ್ಗೆ ಅರಿವು ಮೂಡಿಸುವ ಪ್ರಯತ್ನದಲ್ಲಿ ತೊಡಗಿತ್ತು. ಈ ರೀತಿಯಾಗಿ "ಭಾಷಾ ಪ್ರೇಮಿಗಳಿಗೆ ಸ್ಫೂರ್ತಿ ತುಂಬುವುದರ ಜೊತೆಗೆ ಸ್ವ-ಭಾಷೆಯ ಆಧಾರದ ಮೇಲೆ ಐಕ್ಯವಾಗುವ ನಿಟ್ಟಿನಲ್ಲಿ ಯೋಚಿಸುವಂತೆ ಮಾಡಿತು.[೪] ಅಲ್ಲದೇ ಕನ್ನಡ ಭಾಷೆ, ಸಂಸ್ಕೃತಿಗಳ ಸಂರಕ್ಷಣೆಯೊಂದಿಗೆ ಕನ್ನಡಿಗರನ್ನು ಒಂದೇ ಆಡಳಿತದ ಅಡಿಯಲ್ಲಿ ತರುವುದು ಅಂದು ಅನಿವಾರ್ಯವಾಗಿತ್ತು. "ಈ ಹಿನ್ನಲೆಯಲ್ಲಿ ಆಲೂರು ವೆಂಕಟರಾಯರು, ಎಂ.ಎ. ದೇಶಪಾಂಡೆ, ರಾಜಪುರೋಹಿತ, ಕೈಕಿಣಿ, ನರಗುಂದ ರಾಮರಾಯ, ಎಸ್.ಜಿ. ನರಸಿಂಹಾಚಾರ್ಯ ಮೊದಲಾದವರ ಆರಂಭಿಕ ಪ್ರಯತ್ನಗಳು ಮುಖ್ಯವಾದದ್ದಾಗಿವೆ."[೫] ಇಂತಹ ಪ್ರಯತ್ನಗಳಿಗೆ ಬೆಂಬಲ ನೀಡುವಂತೆ ತಿಲಕರು ಸಹ ಭಾಷಾವಾರು ಪ್ರಾಂತಗಳ ರಚನೆಯನ್ನು ಕುರಿತು ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದರು. ಇನ್ನು ಬೆಳಗಾವಿಯಲ್ಲಿ ನಡೆದ ಎ.ಐ.ಸಿ.ಸಿ. ಅಧಿವೇಶನದ

ಅಧ್ಯಕ್ಷತೆಯನ್ನು ವಹಿಸಿಕೊಂಡಿದ್ದ ಮಹಾತ್ಮ ಗಾಂಧೀಜಿಯವರು ಭಾಷವಾರು ಪ್ರಾಂತಗಳ ರಚನೆಯಿಂದಲೇ ಸ್ವಾತಂತ್ರ್ಯ ಚಳವಳಿಗೆ ಬೆಂಬಲ ಸಿಗುತ್ತದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿ, ಕರ್ನಾಟಕ ರಚನೆಗೆ ತಮ್ಮ ಬೆಂಬಲವನ್ನು ಸೂಚಿಸಿದರು. ಆದರೆ ಏಕೀಕರಣಕ್ಕೆ ಅನೇಕ ತೊಡರುಗಳು ಉಂಟಾದವು. ಭಾಷಾವಾರು ಪ್ರಾಂತ್ಯದ ರಚನೆಗೆ ಅಂದಿನ ಬ್ರಿಟೀಷ್ ಸರ್ಕಾರವು ಅನೇಕ ಆಯೋಗಗಳನ್ನು ನೇಮಿಸಿತ್ತು. ಅದರಲ್ಲಿ ಮಾಂಟ್‌ಪೋರ್ಡ್ ವರದಿ, ನೆಹರೂ ವರದಿ, ಸೈಮನ್ ಕಮೀಷನ್ ಮುಂತಾದವುಗಳು ತಮ್ಮ ವರದಿಯಲ್ಲಿ ಭಾಷಾವಾರು ಪ್ರಾಂತ್ಯದ ರಚನೆಯನ್ನು ಒಪ್ಪಿಕೊಂಡವುಗಳಾದರೂ, ಕನ್ನಡಿಗರನ್ನು ಒಂದು ಮಾಡುವ ಪ್ರಯತ್ನಗಳು ಮಾತ್ರ ವಿಫಲವಾಗುತ್ತಿದ್ದವು.

### ೪.೨ ಪ್ರಾಂತೀಯ ಕಾಂಗ್ರೇಸ್ ಸ್ಥಾಪನೆ ಮತ್ತು ಬಳ್ಳಾರಿ ಜಿಲ್ಲೆ

"ಬಳ್ಳಾರಿ ಜಿಲ್ಲೆಯು ೧೮೦೦ರಲ್ಲಿ ಬ್ರಿಟಿಷರ ವಶವಾದಂದಿನಿಂದ ಈ ಪ್ರದೇಶವೆಲ್ಲಾ ಮದ್ರಾಸ್ ಪ್ರಾಂತದಲ್ಲೇ ಸಮನ್ವಯಗೊಂಡಿತ್ತು. ಮಹಾತ್ಮ ಗಾಂಧೀಯವರ ಮುಖಂಡತ್ವದಲ್ಲಿ ರಾಷ್ಟ್ರೀಯ ಹೋರಾಟದಲ್ಲಿ ತನ್ನನ್ನು ತೊಡಗಿಸಿಕೊಂಡಾಗ ಭಾಷಾವಾರು ಪ್ರಾಂತೀಕರಣ ಕಾರ್ಯಕ್ರಮಕ್ಕೆ ಪ್ರಾಶಸ್ತ್ಯ ನೀಡಲಾಯಿತು. ೧೯೨೦ರಲ್ಲಿ ಕಾಂಗ್ರೆಸ್ ಸಂಸ್ಥೆ ತನ್ನ ಸಂಘಟನಾ ಕಾರ್ಯಕ್ಕೆ ಈ ತಳಹದಿಯನ್ನು ಒಪ್ಪಿಕೊಂಡಿತು. ಆಗ ಬಳ್ಳಾರಿ ಜಿಲ್ಲೆ ಯಾವ ಪ್ರಾಂತದ ಸಮಿತಿಯ ಕಕ್ಷೆಯಲ್ಲಿರಬೇಕೆಂಬ ವಿಷಯದಲ್ಲಿ ವಿವಾದವೆದ್ದಿತು. ಕಾಂಗ್ರೆಸ್ ಪಕ್ಷದಲ್ಲಿ ಅನೇಕ ಆಂಧ್ರದ ಧುರೀಣರು ಇದ್ದರಿಂದ ಬಳ್ಳಾರಿಗೆ ಅನ್ಯಾಯವಾಗುವುದೆಂದು ಕರ್ನಾಟಕದ ಅನೇಕ ನಾಯಕರುಗಳು ವಿರೋಧಿಸಿದರು. ಈ ಸಮಸ್ಯೆಯನ್ನು ಬಗೆಹರಿಸಲು ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ಕಾರ್ಯಕಾರಣಿಯಿಂದ ಎಸ್.ಸಿ. ಕೇಳ್ಕರ್ ಅವರು ನೇಮಕವಾದರು. ಅವರು ಇಡೀ ಪ್ರದೇಶವನ್ನು ಪರಿಶೀಲಿಸಿ ತೀರ್ಪನ್ನಿತ್ತರು. ಬಳ್ಳಾರಿ ಜಿಲ್ಲೆಯ ಆಲೂರು, ಆದವಾನಿ, ರಾಯದುರ್ಗವನ್ನು ಆಂಧ್ರ ಸಮಿತಿಯ ಕಕ್ಷೆಗೂ, ಉಳಿದ ಪ್ರದೇಶವನ್ನು ಕರ್ನಾಟಕ ಸಮಿತಿಯ ಕಕ್ಷೆಗೂ ನೀಡಲು ಶಿಫಾರಸ್ಸು ಮಾಡಿದರು. ಈ ತೀರ್ಪನ್ನು ಕಾಂಗ್ರೆಸ್ಸು ಸಮಿತಿಗೆ ಸೇರಿಸಲಾಯಿತು.[೬] ಈ ರೀತಿ ಬಳ್ಳಾರಿ ಜಿಲ್ಲೆಯನ್ನು ಮೊದಲು ಕನ್ನಡ ಪ್ರದೇಶ ಎಂಬ ತೀರ್ಮಾನವನ್ನು ಮಾಡಲಾಯಿತು.

### ೪.೩ ಕರ್ನಾಟಕ ಏಕೀಕರಣ ಚಳವಳಿ ಮತ್ತು ಕೋ. ಚೆನ್ನಬಸಪ್ಪನವರು

ಸ್ವಾತಂತ್ರ್ಯ ಮತ್ತು ಏಕೀಕರಣ ಚಳವಳಿಗಳು ಜೊತೆಯಾಗಿ ನಡೆದಿವೆಯಾದರೂ ಸ್ವಾತಂತ್ರ್ಯ ದೊರೆತಾಗಲೇ ಭಾಷಾವಾರು ಪ್ರಾಂತಗಳ ರಚನೆಯಾಗಲಿಲ್ಲ ಎಂಬುದು ಸತ್ಯವಾದ ಮಾತು. ಆದರೆ ಏಕೀಕರಣ ಚಳವಳಿಯು ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಕಾಣಿಸಿಕೊಂಡಿತು. ಅಲ್ಲದೇ ಜನರಿಗೆ ಭಾಷೆ, ಸಂಸ್ಕೃತಿ ಮುಂತಾದ ವಿಚಾರಗಳ ಮಹತ್ವವನ್ನು ತಿಳಿಸುತ್ತಾ ಜನಜಾಗೃತಿ ಮಾಡಬೇಕಾಗಿದ್ದರಿಂದ ಸ್ವಲ್ಪ ಹೆಚ್ಚು ಕಾಲಾವಕಾಶ ಬೇಕಾಗಿತ್ತು ಎಂದು ಹೇಳಬಹುದು.

ಭಾಷಾವಾರು ಪ್ರಾಂತ್ಯಗಳ ರಚನೆಗಾಗಿ ಅನೇಕ ಕನ್ನಡ ಪರ ಸಂಘಗಳು ಹುಟ್ಟಿಕೊಂಡಿದ್ದವು. ಅದರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಧಾರವಾಡ (೧೮೯೦), ಕನ್ನಡ ಸಭಾ, ಕನ್ನಡ

ಸಾಹಿತ್ಯ ಪರಿಷತ್ತು ಮುಂತಾದ ಸಂಘಗಳು ಕಾರ್ಯ ನಿರ್ವಹಿಸುತ್ತಾ ಬಂದಿದ್ದವು. ಹಾಗೆಯೇ ೧೯೨೫ರಿಂದ ಬಳ್ಳಾರಿಯಲ್ಲಿ (ದಸರಾ) 'ನಾಡಹಬ್ಬ' ಪ್ರಾರಂಭವಾದದ್ದು ಏಕೀಕರಣ ಚಳವಳಿಗೆ ಪ್ರತ್ಯಕ್ಷ ಪ್ರಚೋದನೆ ನೀಡಿತೆಂದು ಹೇಳಬಹುದು. ಈ 'ನಾಡಹಬ್ಬ' ದಲ್ಲಿ ಅನೇಕ ವಿದ್ವಾಂಸರು ಏಕೀಕರಣ ವಿಚಾರವಾಗಿ ಜನರಲ್ಲಿ ಜಾಗೃತಿಯನ್ನುಂಟುಮಾಡಿದರು. ಹಾಗೂ ಅಂದು ಪ್ರಕಟವಾಗುತ್ತಿದ್ದ ಪತ್ರಿಕೆಗಳಾದ "ಸಂಯುಕ್ತ ಕರ್ನಾಟಕ, ನವಯುಗ, ವಿಶಾಲ ಕರ್ನಾಟಕ, ಪ್ರಪಂಚ ಮುಂತಾದವೂ ಹುಬ್ಬಳ್ಳಿ, ಗುಲ್ಬರ್ಗಾದಿಂದ ನಾಗರಿಕ ಪತ್ರಿಕೆ, ಕೊಪ್ಪಳದಿಂದ ತುಂಗಭದ್ರಾ ಹಾಗೂ ಲೋಕವಾಣಿ, ಯಾದಗಿರಿಯ ವಿಶ್ವಕಲ್ಯಾಣ, ಬೆಂಗಳೂರಿನ ಕನ್ನಡ ನುಡಿ, ವಿಜಾಪುರದ ಕರ್ನಾಟಕ ವೈಭವ, ನವಕರ್ನಾಟಕ, ವಾಗ್ಭೂಷಣ, ಬಳ್ಳಾರಿಯ ನವಸಂದೇಶ, ರಾಯಚೂರಿನ ಅಮರವಾಣಿ ಹಾಗೂ ಮೈಸೂರಿನ ಪ್ರಬುದ್ಧ ಕರ್ನಾಟಕ ಪತ್ರಿಕೆಗಳು ಕರ್ನಾಟಕ ಪರಂಪರೆ ಬಗ್ಗೆ ಹಲವಾರು ಲೇಖನ ಹಾಗೂ ಕವನಗಳನ್ನು ಪ್ರಕಟಿಸುವುದರ ಮೂಲಕ ಅಖಂಡ ಕರ್ನಾಟಕವನ್ನು ಒಂದೇ ಆಡಳಿತ ವ್ಯವಸ್ಥೆಯಡಿಯಲ್ಲಿ ತರುವ ಹಾಗೂ ಹರಿದು ಹಂಚಿಹೋಗಿರುವ ಕನ್ನಡಿಗರ ಮನಸ್ಸಿನಲ್ಲಿ ಕನ್ನಡ ಹಾಗೂ ಕರ್ನಾಟಕ ಪ್ರಜ್ಞೆ ಮೂಡಿಸುವ ಕೆಲಸ ಮಾಡಿದವು"[೭] ಇಂತಹ ಅಂಶಗಳಿಂದ ಪ್ರಭಾವಿತರಾದ ಕೋ. ಚೆನ್ನಬಸಪ್ಪನವರು ಕನ್ನಡ ನಾಡು ನುಡಿ ಸೇವೆಗಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು.

**ಕೋ. ಚೆಯವರು ಏಕೀಕರಣ ಚಳವಳಿಯ ಸ್ಫೂರ್ತಿ ಪಡೆದ ಮೊದಲ ಸಭೆ**

"೧೯೩೬ರಲ್ಲಿ ಕರ್ನಾಟಕ ಏಕೀಕರಣ ಚಳವಳಿಯು ಒಂದು ಮಹತ್ವದ ತಿರುವು ಪಡೆಯಿತು. ಅದಕ್ಕೆ ಮುಖ್ಯ ಪ್ರಚೋದನೆ ಆಂಧ್ರದಿಂದಲೇ ದೊರೆಯಿತು! ಆ ವರ್ಷ ಹಂಪಿಯ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಆರನೆ ಶತಮಾನೋತ್ಸವವನ್ನು ಆಚರಿಸಲು ಆಂಧ್ರ ಮಹಾಸಭೆ ಕಾರ್ಯೋನ್ಮುಖವಾಯಿತು." ಅದನ್ನು ತಡೆಗಟ್ಟಲೆಂದೇ ಕನ್ನಡಿಗರು ೧೯೩೬ರಲ್ಲಿ ಹಂಪಿಯಲ್ಲೇ 'ವಿಜಯನಗರ ಸಾಮ್ರಾಜ್ಯ' ಸ್ಥಾಪನಾ ಮಹೋತ್ಸವವನ್ನು ಹಮ್ಮಿಕೊಂಡರು. ಅದೊಂದು ಏಕೀಕರಣ ಚಳವಳಿಯ ಬೃಹತ್ ಪ್ರಯತ್ನವೆಂದೇ[೮] ಹೇಳಬಹುದು. ಈ ಸಭೆಗೆ ಕೋ. ಚೆಯವರು ಭಾಗವಹಿಸಿ ಸ್ಫೂರ್ತಿಗೊಂಡಿದ್ದರು. ಆಗ ಅವರಿಗೆ ೧೪ ವರ್ಷವಾಗಿತ್ತು. ಹೀಗೆ ಬಾಲ್ಯದ ವಯಸ್ಸಿನಲ್ಲಿ ಕನ್ನಡದ ಪ್ರೇಮವನ್ನು ಬೆಳೆಸಿಕೊಂಡಿರುವುದು ಕಂಡು ಬರುತ್ತದೆ. ಹೀಗೆ ಕೋ. ಚೆಯವರು ತಮ್ಮ ಹೈಯರ್ ಎಲಿಮೆಂಟರಿ ಶಿಕ್ಷಣಕ್ಕೆಂದು ಬಳ್ಳಾರಿಗೆ ಬಂದಾಗ ಈ ನಾಡಹಬ್ಬದ ಉತ್ಸವದಿಂದ ಸ್ಫೂರ್ತಿಗೊಂಡು ಚಳವಳಿಗಳಲ್ಲಿ ಪಾಲ್ಗೊಳ್ಳುತ್ತಿದ್ದರು. ಈ ರೀತಿಯಾಗಿ ೧೯೩೬ರಲ್ಲಿ ನಡೆದ 'ವಿಜಯನಗರ ಸಾಮ್ರಾಜ್ಯದ' ಸ್ಥಾಪನಾಮಹೋತ್ಸವದ ಸಭೆಯಲ್ಲಿ ಕೋ. ಚೆ ಭಾಗವಹಿಸುವುದರೊಂದಿಗೆ ಮೊಟ್ಟಮೊದಲು ನೇರವಾಗಿ ಚಳವಳಿಯಲ್ಲಿ ಭಾಗವಹಿಸಿದಂತೆ ಆಗಿತ್ತು. ಈ ನಾಡಹಬ್ಬಕ್ಕೆಂದು ಬರುವ ಅತಿಥಿಗಳು 'ವಾರ್ಡ್ಲಾ ಹೈಸ್ಕೂಲ್ ಹಾಸ್ಟೆಲ್' ಮತ್ತು 'ವೀರಶೈವ ಹಾಸ್ಟಲ್'ನಲ್ಲಿ ಇಳಿದುಕೊಳ್ಳುತ್ತಿದ್ದ ಅವರ ಸೇವೆಯಲ್ಲಿ ಕೋ.ಚೆ. ನಿರತರಾಗುತ್ತಿದ್ದರು.

ಕೋ. ಚೆಯವರಿಗೆ ಈ ನಾಡಹಬ್ಬದ ಪರಿಣಾಮ ಎಷ್ಟರಮಟ್ಟಿಗೆ ಆಗಿತ್ತು ಎಂದರೆ

ಅವರು ಅನಂತಪುರದಲ್ಲಿ ಬಿ.ಎ ತರಗತಿಯನ್ನು ಓದುತ್ತಿದ್ದಾಗ ಅಲ್ಲಿಯ ಚರಿತ್ರೆಯ ಪ್ರೊಫೆಸರ್ ಶ್ರೀ ದಾಮರ್ಲ್ ವೆಂಕಟರಾವ್ ವಿಜಯನಗರ ಸಾಮ್ರಾಜ್ಯದ ಸ್ಥಾಪನೆ ತೆಲುಗು ಮೂಲದವರು (ಆಂಧ್ರರು) ಮಾಡಿದರೆಂದು ಹೇಳಿದಾಗ, ಅದನ್ನು ಚರ್ಚೆಗೆ ತೆಗೆದುಕೊಂಡು ಅದನ್ನು ಕನ್ನಡಿಗರು ಸ್ಥಾಪಿಸಿದರು ಎಂದು ಹೇಳುತ್ತಿದ್ದರು. ಇವರ ಹೇಳಿಕೆಗೆ ಆಂಧ್ರ ವಿದ್ಯಾರ್ಥಿಗಳಾರೂ ಅಡ್ಡಿಪಡಿಸಲಿಲ್ಲ. ಅಷ್ಟು ಕರಾರುವತ್ತಾಗಿ ಹೇಳುತ್ತಿದ್ದರು. ಹಾಗೂ ಅನಂತಪುರ ಕಾಲೇಜಿನಲ್ಲಿ 'ಜಾಲಿ ಅಸೋಸಿಯೇಷನ್' ಸ್ಥಾಪನೆ ಮಾಡಿಕೊಂಡು ಅದರ ಮೂಲಕ ಅಲ್ಲಿ ಕನ್ನಡದಲ್ಲಿ ಕಾರ್ಯಕ್ರಮವನ್ನು ರೂಪಿಸುತ್ತಿದ್ದರು.

**ಕರ್ನಾಟಕ ಏಕೀಕರಣ ಮಹಾ ಸಮಿತಿಯ ಸದಸ್ಯರಾಗಿ ಕೋ. ಚೆ ನೇಮಕ**

ಕೋ. ಚೆಯವರು ೧೯೪೪ರಲ್ಲಿ ಬೆಳಗಾವಿ ಕಾನೂನು ಕಾಲೇಜಿನಲ್ಲಿ ಓದುತ್ತಿರುವಾಗ 'ಕರ್ನಾಟಕ ಏಕೀಕರಣ ಮಹಾಸಮಿತಿ'ಯ ಕಾರ್ಯಕಾರಿ ಮಂಡಳಿಯ ಸದಸ್ಯರನ್ನಾಗಿ ನೇಮಿಸಲಾಗಿತ್ತು. ಏಕೆಂದರೆ ಅವರು ಆ ಹೊತ್ತಿಗಾಗಲೇ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿದ್ದರು. ಅನೇಕ ಕವನಗಳನ್ನು ಆ ಹೊತ್ತಿಗಾಗಲೆ ಬೆಳಕಿಗೆ ತಂದಿದ್ದರು. ಈ ಮಹಾಸಮಿತಿಯಲ್ಲಿ ಕೋ. ಚೆಯವರು ಬಳ್ಳಾರಿ ಜಿಲ್ಲಾ ಪ್ರತಿನಿಧಿಯಾಗಿ ಬಳ್ಳಾರಿ ಸಮಸ್ಯೆ ಬಂದಾಗಲೆಲ್ಲಾ ಸಭೆಗಳಿಗೆ ಹೋಗಿ ಅಲ್ಲಿ ಚರ್ಚಿಸಬೇಕಾಗಿತ್ತು. ಅಲ್ಲದೇ ಬಳ್ಳಾರಿ, ಅನಂತಪುರ, ಆಲೂರು, ಆದ್ವಾನಿ ಇತರ ಪ್ರದೇಶಗಳಲ್ಲಿ ಕನ್ನಡ ಮತ್ತು ಕನ್ನಡಿಗರ ಬಗ್ಗೆ ಮಾಹಿತಿ ಸಂಗ್ರಹಿಸುವಲ್ಲಿ ಕೋ. ಚೆ ಶ್ರಮಿಸಬೇಕಾಗಿತ್ತು.

೧೯೪೫ರಲ್ಲಿ ಕೋ. ಚೆ ಇನ್ನು ಕಾನೂನು ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗಲೇ ಬಳ್ಳಾರಿ ಜಿಲ್ಲಾ ಪ್ರಥಮ ಸಾಹಿತ್ಯ ಸಮ್ಮೇಳನವನ್ನು ಏರ್ಪಡಿಸಿದ್ದರು. ಈ ಸಮ್ಮೇಳನಕ್ಕೆ ಹೊಸಪೇಟೆಯ ವಕೀಲರಾಗಿದ್ದ ಮೈಸೂರು ತಿರುಮಲಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು. ಇದಕ್ಕೂ ಮುಂಚೆ ಬಳ್ಳಾರಿ ಜಿಲ್ಲೆ ಪ್ರಥಮ ಸಾಹಿತ್ಯ ಪರಿಷತ್ತು ೧೯೪೩ರಲ್ಲಿ ವಾರ್ಡ್ಲಾ ಹಾಲಿನಲ್ಲಿ ಜರುಗಿತು. ಅದರ ಅಧ್ಯಕ್ಷತೆಯನ್ನು ಕೊಟ್ಟೂರಿನ ಡಾ. ನಂಜಪ್ಪನವರು ವಹಿಸಿಕೊಂಡಿದ್ದರು. ಮುಖ್ಯ ಅಥಿತಿಯಾಗಿ ನಾಗೇಂದ್ರರಾಯರು ಬಂದಿದ್ದರು. ಆ ಒಂದು ಸಭೆಗೆ ಕೋ. ಚೆನ್ನಬಸಪ್ಪ ಜೋಳದ ರಾಶಿ ದೊಡ್ಡನಗೌಡರು ಭಾಗವಹಿಸಿ, ಅಂದು ಬಳ್ಳಾರಿ ಜಿಲ್ಲೆಯ ನಗರ ಪಾಲಿಕೆಯ ನಾಮಫಲಕಗಳು ತೆಲುಗು ಮತ್ತು ಇಂಗ್ಲಿಷಿನಲ್ಲಿದ್ದವುಗಳನ್ನು ಮೂರು ತಿಂಗಳ ಒಳಗೆ ಕನ್ನಡದಲ್ಲಿ ಬರೆಸಿ ಹಾಕಬೇಕು ಎಂದು ಸಭೆಯಲ್ಲಿ ನಿರ್ಣಯ ತೆಗೆದುಕೊಂಡರು. ಹಾಗೆಯೇ ದ್ವಿತೀಯ ಜಿಲ್ಲಾ ಸಾಹಿತ್ಯ ಸಮ್ಮೇಳನವು ೧೯೪೭ರಲ್ಲಿ ಆದವಾನಿಯಲ್ಲಿ ನಡೆಯಿತು. ಅದರಲ್ಲಿಯೂ ಕೋ. ಚೆ ಅವರು ತಮ್ಮನ್ನು ತೊಡಗಿಸಿಕೊಂಡಿದ್ದರು.

**ದಾವಣಗೆರೆಯಲ್ಲಿ ಕರ್ನಾಟಕಸ್ಥರ ಮಹಾಸಭೆ ಮತ್ತು ಕೋ. ಚೆಯವರ ಗೊತ್ತುವಳಿ**

"ಕರ್ನಾಟಕ ಏಕೀಕರಣವಾಗುವ ದಿನಗಳು ಸಮೀಪಿಸುತ್ತವೆ ಎಂಬ ಆಶಾಭಾವನೆಯಿಂದ ಆ ಸಂದರ್ಭದಲ್ಲಿ ಎಲ್ಲ ಕನ್ನಡಿಗರನ್ನು ಚಳವಳಿಗೆ ತೊಡಗಿಸುವ ನಿಟ್ಟಿನಲ್ಲಿ ಎಲ್ಲ ಕನ್ನಡ ಭಾಷಿಕ ಪ್ರದೇಶಗಳ ಪ್ರತಿನಿಧಿಗಳನ್ನು ಸೇರಿಸಿ ದಾವಣಗೆರೆಯಲ್ಲಿ ಕರ್ನಾಟಕಸ್ಥರ ಮಹಾಸಭೆಯನ್ನು

ನಡೆಸಲು ಏರ್ಪಾಡುಗಳು ನಡೆದವು. ೩೧-೮-೧೯೪೭ರಂದು ನಡೆದ ಸಭೆಯನ್ನು ಮದರಾಸ್ ಆಧಿಪತ್ಯದ ಕಂದಾಯ ಮಂತ್ರಿಗಳಾದ ಕೆ.ಆರ್. ಕಾರಂತರು ಉದ್ಘಾಟಿಸಿದರು. ಮುಂಬಯಿ ಅಧಿಪತ್ಯದಲ್ಲಿ ಕೃಷಿ ಮಂತ್ರಿಗಳಾಗಿದ್ದ ಎಂ.ಪಿ. ಪಾಟೀಲರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಆ ಮಹಾಸಭೆಯಲ್ಲಿ ಕರ್ನಾಟಕ ಪ್ರಾಂತೀಯ ಕಾಂಗ್ರೆಸ್ ಸಮಿತಿ, ಕರ್ನಾಟಕ ಏಕೀಕರಣ ಸಂಘಗಳಲ್ಲದೇ ಅನೇಕ ಕನ್ನಡ ಸಂಘ-ಸಂಸ್ಥೆಗಳ ಸದಸ್ಯರು ಮತ್ತು ಮುಂಬಯಿ, ಮದರಾಸ್, ಹೈದರಾಬಾದ್ ಮತ್ತು ಮೈಸೂರು ಶಾಸನ ಸಭೆಗಳ ಸದಸ್ಯರು ಹಾಗೂ ಕರ್ನಾಟಕದ ಪ್ರಮುಖ ನಗರ ಸಭೆಗಳ ಮತ್ತು ಸ್ಥಳೀಯ ಬೋರ್ಡುಗಳ ಅಧ್ಯಕ್ಷರು ಮತ್ತಿತರರು ಪಾಲ್ಗೊಂಡಿದ್ದರು. ಕರ್ನಾಟಕಸ್ಥರ ಮಹಾಸಭೆಯ ಸ್ವಾಗತಾಧ್ಯಕ್ಷರಾಗಿದ್ದವರು ಉರವಕೊಂಡ ಚೆನ್ನಬಸಪ್ಪನವರು. ಎಂ.ಪಿ ಪಾಟೀಲರೂ 'ಭಾರತಕ್ಕೆ ಸ್ವಾತಂತ್ರ್ಯವು ಹೇಗೋ ಕರ್ನಾಟಕಕ್ಕೆ ಸ್ವಾಯತ್ತತೆಯು ಹಾಗೆ' ಎಂದು ಏಕೀಕರಣದ ಔಚಿತ್ಯವನ್ನು ಪ್ರಸ್ತಾಪಿಸಿ "ಕರ್ನಾಟಕದಲ್ಲಿದ್ದ ಒಂದು ಗುಂಜಿ ತೂಕದ ಮಣ್ಣು ನಮಗೆ ಬೇಡ, ಇತರರ ನ್ಯಾಯವಾದ ಹಕ್ಕು ಬಾಧ್ಯತೆಗಳನ್ನು ಆಕ್ರಮಿಸುವುದೂ ನಮಗೆ ಬೇಕಾಗಿಲ್ಲ. ಆದರೆ ಕರ್ನಾಟಕದ ಒಂದಂಗುಲ ನೆಲವೂ ನಮ್ಮ ಕೈತಪ್ಪಿ ಹೋಗುವುದನ್ನು ನಾವು ಸಹಿಸಲಾರೆವು" ಎಂದು ಸಮಸ್ತ ಕನ್ನಡಿಗರ ಅಭಿಪ್ರಾಯಗಳಿಗೆ ಧ್ವನಿ ನೀಡಿದರು. ಕೆಲವು ದೇಶೀಯ ಸಂಸ್ಥಾನಗಳು, ಕರ್ನಾಟಕ ಏಕೀಕರಣಕ್ಕೆ ಸಂಪೂರ್ಣ ಬೆಂಬಲ ನೀಡದಿರುವುದನ್ನು ಪ್ರಸ್ತಾಪಿಸಿದ ಬಳ್ಳಾರಿಯ ಕೋ. ಚೆನ್ನಬಸಪ್ಪ ಅವರು "ಸಾಧ್ಯವಾದರೆ ಮೈಸೂರನ್ನು ಒಳಗೊಂಡು ಅಗತ್ಯವಾದರೆ ಅದನ್ನು ಬಿಟ್ಟು ಕರ್ನಾಟಕ ರಾಜ್ಯ ನಿರ್ಮಾಣ ವಾಗಬೇಕು" ಎಂದು ಗೊತ್ತುವಳಿಯನ್ನು ಮಂಡಿಸಿದರು. ಅದರಿಂದ ಉದ್ವೇಗಗೊಂಡ ಕೆಂಗಲ್ ಹನುಮಂತಯ್ಯನವರು ಭಾಷಣಮಾಡಿ "ಮೈಸೂರನ್ನು ಒಳಗೊಂಡು ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕು ಎಂದು ಗೊತ್ತುವಳಿಗೆ ತಿದ್ದುಪಡಿ ತಂದರು".[೯] ಕೋ. ಚೆಯವರು ಮಂಡಿಸಿದ ಗೊತ್ತುವಳಿಯು ಮೈಸೂರು ಸಂಸ್ಥಾನದೊಂದಿಗೆ ಕನ್ನಡ ಪ್ರದೇಶಗಳನ್ನು ಸೇರಿಸಬೇಕೆಂಬ ನಿರ್ಣಯ ಇಲ್ಲದಿರುವುದಕ್ಕೆ ಕಾರಣ, ಮೈಸೂರು ಸಂಸತ್ತಿನಲ್ಲಿ ವಿಶಾಲ ಕರ್ನಾಟಕ ರಚನೆಗೆ ಮನಸ್ಸಿಲ್ಲದೆ ಇರುವುದು ಕಾರಣವಾಗಿರಬಹುದು. ಅದಕ್ಕಾಗಿ ಅವರು ಮೈಸೂರು ಸೇರಿಸಿಕೊಂಡು ಇಲ್ಲವೇ ಬಿಟ್ಟು ಕರ್ನಾಟಕ ರಚನೆಯಾಗಲೇ ಬೇಕು ಎಂದು ಗೊತ್ತುವಳಿ ಮಂಡಿಸಿದ್ದರು.

**ಗುಲ್ಬರ್ಗಾ ಏಕೀಕರಣ ಪರಿಷತ್ತು ಸಮಾವೇಶದಲ್ಲಿ ಕೋ. ಚೆ**

ಗುಲ್ಬರ್ಗಾದಲ್ಲಿ ಕರ್ನಾಟಕ ಏಕೀಕರಣ ಪರಿಷತ್ತು ಕೊನೆಯ ಬಾರಿಗೆ (೧೨ನೇಯ ಪರಿಷತ್ತು) ಸಮಾವೇಶಗೊಂಡಿತು. ಅದೇ ಸಂದರ್ಭದಲ್ಲಿ ಉತ್ತಂಗಿ ಚೆನ್ನಬಸಪ್ಪನವರ ಅಧ್ಯಕ್ಷತೆಯಲ್ಲಿ ೩೨ನೇಯ ಕನ್ನಡ ಸಾಹಿತ್ಯಸಮೇಳನ ಗುಲ್ಬರ್ಗಾದಲ್ಲಿ ನಡೆಯಿತು. ಟಿ.ಸುಬ್ರಹ್ಮಣ್ಯಂ ನವರು ಪರಿಷತ್ತಿನ ಉದ್ಘಾಟನೆ ಮಾಡಿ ಮಾತನಾಡುತ್ತಾ ಕರ್ನಾಟಕದವರು ಮೈಸೂರು ಸಂಸ್ಥಾನವು ಏಕೀಕರಣದಿಂದ ದೂರವಿದೆ ಎಂದು ಭಾವಿಸುವುದು ತಪ್ಪು ಎಂದು ತಿಳಿಸಿದರು. ಮೈಸೂರು ಮಂತ್ರಿಮಂಡಲವು ಏಕೀಕರಣ ಕುರಿತು ಏನೊಂದು ನಿರ್ಣಯವನ್ನು ಅವರು ಮಾಡಿಲ್ಲವೆಂದು, ಅದಕ್ಕೆ ಆ ಪ್ರಶ್ನೆಯ ಪರಿಶೀಲನೆಗೆ ಉಪಸಮಿತಿಯೊಂದರ ರಚನೆಯಾಗಿದೆಯೆಂದು, ಕರ್ನಾಟಕ ಏಕೀಕರಣದ ಜವಾಬ್ದಾರಿಯು ಮೈಸೂರಿನವರ ಮೇಲೆಯೆ ಹೆಚ್ಚಿರುವುದೆಂದು ತಿಳಿಸುತ್ತಾ

"ಕನ್ನಡಿಗರು ಮಹಾರಾಜರನ್ನು ಇಟ್ಟುಕೊಂಡೆ ಕೆಲಸ ಮಾಡಬೇಕು ಹೀಗಿದ್ದರೆ ಮಾತ್ರ ಕೆಲಸ ಸಾಧ್ಯವಾಗುತ್ತದೆ" ಎಂದರು. ಆದರೆ ಹೈದರಾಬಾದ ನಿಜಾಮನ ಆಳ್ವಿಕೆಯಿಂದ ಬೇಸತ್ತಿದ್ದ ಆ ಭಾಗದ ಜನ ಏಕೀಕರಣವಾಗದಿದ್ದರೆ ಮತ್ತೆಲ್ಲಿ ನಿಜಾಮನಂತಹವನ ಆಳ್ವಿಕೆಯಲ್ಲಿ ಬಾಳಬೇಕೋ? ಎಂದು ಭೀತರಾಗಿದ್ದರು. ಹಾಗಾಗಿ ಟಿ. ಸುಬ್ರಹ್ಮಣ್ಯಂ ಮಂಡಿಸಿದ ಗೊತ್ತುವಳಿಯನ್ನು "ಕೋ. ಚೆನ್ನಬಸಪ್ಪ, ಸರ್ದಾರ್ ಶರಣಗೌಡ ಇನಾಂದಾರ್ ಮುಂತಾದವರು ಪ್ರತಿಭಟಿಸಿದರು" ಅಲ್ಲದೇ ಕೋ. ಚೆ. ಮೈಸೂರು ಅರಸರ ಒಡೆತನವಿಲ್ಲದ ಏಕೀಕರಣ ಕರ್ನಾಟಕ ರಚನೆಯಾಗಬೇಕು. ಎಂದು ಗೊತ್ತುವಳಿಗೆ ತಿದ್ದುಪಡಿ ತಂದರು ಇದನ್ನು ಪಾಟೀಲ್ ಪುಟ್ಟಪ್ಪನವರು ಮತಕ್ಕೆ ಹಾಕಿ ಸ್ವೀಕರಿಸಿದರು.

### ಎಸ್.ಕೆ. ಧರ್ ಆಯೋಗದ ಮುಂದೆ

ಭಾಷಾವಾರು ಚಳವಳಿಗಳು ದಿನನಿತ್ಯ ಹೆಚ್ಚಾದ ಕಾರಣದಿಂದ "ಭಾರತದ ಘಟನಾ ಸಮಿತಿಯು ಭಾಷಾವರು ಪ್ರಾಂತ್ಯ ರಚನೆಗೆ ಸಂಬಂಧಿಸಿದಂತೆ ವರದಿ ನೀಡಲು ಅಲಹಾಬಾದ್ ಹೈಕೋರ್ಟಿನ ನಿವೃತಿ ನಾಯ್ಯಧೀಶ ಎಸ್.ಕೆ. ಧರ್ ಅವರ ಅಧ್ಯಕ್ಷತೆಯಲ್ಲಿ ೧೭-೬-೧೯೪೮ ರಂದು ಆಯೋಗವನ್ನು ನೇಮಕ ಮಾಡಿತ್ತು. ಆ ಆಯೋಗದಲ್ಲಿ ಕರ್ನಾಟಕದ ಪರವಾಗಿ ಟೇಕೂರು ಸುಬ್ರಮಣ್ಯಂ ಮತ್ತು ಆರ್.ಆರ್. ದಿವಾಕರ ಸಹಾಯಕ ಸದಸ್ಯರಾಗಿದ್ದರು. ಆಯೋಗವು ಆಂಧ್ರ, ಕರ್ನಾಟಕ, ಕೇರಳ ಮತ್ತು ಮಹಾರಾಷ್ಟ್ರ ಇವುಗಳಲ್ಲಿ ಯಾವ ಹೊಸ ಪ್ರಾಂತಗಳ ರಚನೆ ಆಗಬೇಕು ಮತ್ತು ಇವುಗಳ ಖಚಿತ ಗಡಿಯ ನಿರ್ಧಾರ ಆಗುವವರಗೆ ತಾತ್ಕಲಿಕ ಗಡಿ ಯಾವುದಿರಬೇಕು ಹಾಗೂ ಈ ಪ್ರಾಂತಗಳ ನಿರ್ಮಾಣದಿಂದ ಅವುಗಳ ಆಡಳಿತ, ಆರ್ಥಿಕ ಮತ್ತು ಇತರ ವಿಷಯಗಳ ಮೇಲೆ ಆಗುವ ಪರಿಣಾಮಗಳೇನು, ಎಂಬುವುದನ್ನು ಆಯೋಗವು ಸಿದ್ದಪಡಿಸಬೇಕಾಗಿತ್ತು. ೧೯-೦೭-೧೯೪೮ ರಂದು ದೆಹಲಿಯಲ್ಲಿ ಸಭೆ ಸೇರಿದ ಎಸ್.ಕೆ. ಧರ್ ಆಯೋಗವು ಕಾರ್ಯವನ್ನು ಆರಂಭಿಸಿತು. ಮೊದಲಿಗೆ ಭಾಷಾವಾರು ಪ್ರಾಂತ ರಚನೆಯ ಅಗತ್ಯತೆ, ವಿಧಾನ ಪರಿಣಾಮ ಇತ್ಯಾದಿಗಳ ಬಗ್ಗೆ ತಿಳಿಯಲು ೨೦ ಪ್ರಶ್ನೆಗಳನ್ನು ಸಿದ್ಧಪಡಿಸಿ ೧೬-೦೮-೧೯೪೮ ರ ಅಂದರೆ ೨೫ದಿನಗಳ ಒಳಗಾಗಿ ಉತ್ತರವನ್ನು ದೆಹಲಿಗೆ ತಲುಪಿಸುವಂತೆ ಸೂಚಿಸಿ ಪ್ರಶ್ನಾವಳಿಯನ್ನು ಪ್ರಕಟಿಸಿತು."[೧೦] ಧರ್ ಆಯೋಗದ ಪ್ರಶ್ನಾವಳಿಗಳಿಗೆ "ಬಳ್ಳಾರಿಯ ಪೂರ್ವ ಕರ್ನಾಟಕ ಏಕೀಕರಣ ಸಮಿತಿಯ ಕಾರ್ಯದರ್ಶಿಗಳಾದ ಕೋ. ಚೆನ್ನಬಸಪ್ಪನವರು ಧರ್ ಆಯೋಗದ ಪ್ರಶ್ನಾವಳಿಗಳಿಗೆ ಉತ್ತರಿಸುತ್ತಾ ಬಳ್ಳಾರಿ ಜಿಲ್ಲೆಯು ಇಡಿಯಾಗಿ ಒಂದೇ ಘಟಕವಾಗಿದೆ. ಅಲ್ಲಿನ ಜನರಲ್ಲಿ ಅಧಿಕ ಸಂಖ್ಯೆಯಲ್ಲಿರುವರು ಕನ್ನಡಿಗರು ಮತ್ತು ಅವರೆಲ್ಲರು ತಾವು ಕರ್ನಾಟಕದಲ್ಲಿ ವಿಲಿನಗೊಳ್ಳುವ ಅಭಿಪ್ರಾಯ ಹೊಂದಿದ್ದಾರೆ ಎಂದು ಸ್ಪಷ್ಟಪಡಿಸಿದರು. ೧೯೨೧ರಲ್ಲಿ ಎನ್.ವಿ. ಕೇಳ್ಕರ್ ಅವರು ಬಳ್ಳಾರಿ ಜಿಲ್ಲೆ ಆಲೂರು, ಆದವಾನಿ ಮತ್ತು ರಾಯದುರ್ಗಗಳನ್ನು ಆಂಧ್ರಪ್ರದೇಶ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಗೆ ತಾತ್ಕಲಿಕವಾಗಿ ಸೇರಿಸಿದರು. ಆದರೆ ಹತ್ತು ವರ್ಷಗಳ ನಂತರ ಅಂದರೆ ೧೯೩೧ರಲ್ಲಿ ಆ ಬಗ್ಗೆ ಮತ್ತೆ ಪ್ರಶ್ನಿಸುವ ಅವಕಾಶವಿತ್ತು. ಆಗ ರಾಜಕೀಯ ಸ್ಥಿತಿಗತಿಗಳು ಉತ್ತೇಜಕವಾಗಿಲ್ಲದಿದ್ದ ಕಾರಣ ಯಾರಿಗೂ ಸಮಸ್ಯೆಯ ನೆನಪೇ ಆದಂತಿರಲಿಲ್ಲ. ಈ ಮೇಲೆ ಪ್ರಸ್ತಾಪಿಸಿದ ಮೂರು ತಾಲ್ಲೂಕುಗಳ

ಆರ್ಥಿಕ ಮತ್ತು ವ್ಯಾಪಾರ ಸಂಬಂಧಗಳು ಕರ್ನಾಟಕದೊಂದಿಗೆ ಇವೆ. ಕೌಟುಂಬಿಕ ಸಂಬಂಧಗಳು ಅಂತೆಯೇ ತಾಲ್ಲೂಕುವಾರು, ಫಿರ್ಕಾವಾರು ಮಾಹಿತಿಗಳನ್ನೊದಗಿಸಿ, ಆ ಮೂರು ತಾಲ್ಲೂಕುಗಳು ಹೇಗೆ ಕರ್ನಾಟಕದ ವಿಭಿನ್ನ ಭಾಗಗಳು ಎಂಬುದನ್ನು ಚೆನ್ನಬಸಪ್ಪನವರು ಖಚಿತಪಡಿಸಿದರು. ಆ ಕಾರಣದಿಂದಲೇ ಕೇಳ್ಕರ್ ಅವರು ಒಂದು ತಾತ್ಕಾಲಿಕ ವ್ಯವಸ್ಥೆಗೆ ಅನುವು ಮಾಡಿದ್ದರು ಎಂದು ಮನವರಿಕೆ ಮಾಡಿದರು. ಮಡಕಶಿರಾ ತಾಲ್ಲೂಕು ಮೈಸೂರು ರಾಜ್ಯದ ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳ ಮಧ್ಯೆ ಸೇರಿ ಹೋಗಿ ಆಂಧ್ರದವರಿಗೆ ಅದರ ಸಂಪರ್ಕವಿಲ್ಲ ಎಂಬುದನ್ನು ಚೆನ್ನಬಸಪ್ಪನವರು ಆಯೋಗಕ್ಕೆ ತಿಳಿಸಿದರು. ಅನಂತಪುರ ಮಡಕಶಿರಾ, ಹಿಂದುಪುರ ಮತ್ತು ಪೆನುಗೊಂಡಗಳು ಕರ್ನಾಟಕಕ್ಕೆ ಸೇರಬೇಕೆಂದು ಚೆನ್ನಬಸಪ್ಪನವರು ಪ್ರಬಲವಾಗಿ ಉತ್ತರಿಸಿದರು."[೧೧] ಅಲ್ಲದೆ ಪೂರ್ವ ಕರ್ನಾಟಕ ಏಕೀಕರಣ ಸಮಿತಿಯ ಕಾರ್ಯದರ್ಶಿಗಳಾಗಿದ್ದು ಕೊಂಡು ರಾಯದುರ್ಗ, ಆದವಾನಿ ಮುಂತಾದ ಪ್ರದೇಶಗಳಲ್ಲಿನ ಕನ್ನಡಿಗರ ಅಂಕಿ-ಅಂಶಗಳನ್ನು ಸಂಗ್ರಹಿಸಿದ 'ಧರ್' ಆಯೋಗವು ತನ್ನ ವರದಿಯನ್ನು ನವೆಂಬರ್ ೨೦ ಮತ್ತು ೨೧ರಂದು ಸಭೆ ಸೇರಿ, ವಿಚಾರ ವಿನಿಮಯ ಮಾಡಿ ಡಿಸೆಂಬರ್ ೧೦ರಂದು ತನ್ನ ವರದಿಯನ್ನು ಪ್ರಾಂತ ಶಾಖೆಗೆ ವಿಶೇಷವಾಗಿ ಆಂಧ್ರ-ಕರ್ನಾಟಕ ಮತ್ತು ಕೇರಳಗಳಲ್ಲಿರುವ ಭಿನ್ನಾಭಿಪ್ರಾಯಗಳನ್ನು ಪ್ರಸ್ತಾಪಿಸಲಾಗಿತ್ತು. ಈ ಭಿನ್ನಾಭಿಪ್ರಾಯಗಳು ಭಾಷಾವಾರು ಪ್ರಾಂತ್ಯ ರಚನೆಗೆ ಅಡ್ಡಿಯಾಗಿವೆ ಎಂದು ತಿಳಿಸಿದ ಆಯೋಗವು, ಕರ್ನಾಟಕ ಪ್ರಾಂತ ರಚನೆಯೇ ಹೆಚ್ಚು ತೊಡಕಾಗಿದೆ ಎಂದು ಸೂಚನೆ ನೀಡಿತು. ಆಯೋಗದ ಅಭಿಪ್ರಾಯದಲ್ಲಿ ಸದ್ಯಕ್ಕೆ ರಾಷ್ಟ್ರವು ಗಂಡಾಂತರ ಪರಿಸ್ಥಿತಿಯಲ್ಲಿದೆ. ಈಗಿನ ಕಾಲದಲ್ಲಿ ಹಿಂದುಸ್ಥಾನವನ್ನು ಒಂದು ರಾಷ್ಟ್ರವನ್ನಾಗಿಸುವುದು ಮೊದಲನೇ ಮತ್ತು ಕೊನೆಯ ಅವಶ್ಯಕತೆಯಾಗಿದೆ. ರಾಷ್ಟ್ರೀಯ ಭಾವನೆಗೆ ಪೋಷಕವಿದ್ದುದ್ದನ್ನು ಮಾತ್ರ ಕೈಗೊಳ್ಳತಕ್ಕದ್ದು. ಅದರ ಮಾರ್ಗದಲ್ಲಿ ತೊಂದರೆಗಳನ್ನು ನೀಡುವ ಎಲ್ಲಾ ಅಂಶಗಳನ್ನು ನಿರಾಕರಿಸತಕ್ಕದ್ದು ಅಥವಾ ತಡೆಹಿಡಿಯತಕ್ಕದ್ದು ಎಂದು ತಿಳಿಸಿ ಸಧ್ಯದ ಪರಿಸ್ಥಿತಿಯಲ್ಲಿ ಭಾಷಾವಾರು ಪ್ರಾಂತ ರಚನೆ ಸಮರ್ಥನೀಯವಲ್ಲ ಎಂದು ತಿಳಿಸಿತು.[೧೨] ಒಟ್ಟಿನಲ್ಲಿ ಇಲ್ಲಿ ಏಕೀಕರಣ ಧುರೀಣರ ಪ್ರಯತ್ನ ಸಂಪೂರ್ಣ ವಿಫಲವಾಯಿತು.

**ರೈತ ಪತ್ರಿಕೆಯ ಆರಂಭ**

ಕೋ. ಚೆಯವರು ಆಗಸ್ಟ್ ೧೫, ೧೯೪೮ರಂದು ಬಳ್ಳಾರಿಯಲ್ಲಿ ರೈತ *ಪತ್ರಿಕೆಯನ್ನು ತೆರೆಯುವುದರೊಂದಿಗೆ

ಏಕೀಕರಣ ಚಳವಳಿಗೆ ಬೆಂಬಲಿಸಿದರು. ಇದು ರೈತರ ಹೆಸರಿನಲ್ಲಿ ತೆಗೆಯಲಾದ ಪತ್ರಿಕೆಯಾಗಿದ್ದು, ಅಂದು ರೈತರ

ಸಮಸ್ಯೆಗಳನ್ನು ಪತ್ರಿಕೆಯಲ್ಲಿ ಪ್ರಕಟಿಸಿ ಅಧಿಕಾರಿಗಳನ್ನು ರೈತರ ಸಮಸ್ಯೆಗಳನ್ನು ಬಗೆಹರಿಸುವಂತೆ ಒತ್ತಾಯಿಸುತ್ತಿದ್ದರು. ಇದರ ಜೊತೆಗೆ ಭ್ರಷ್ಟ ಅಧಿಕಾರಿಯ ವಿರುದ್ಧ ಪತ್ರಿಕೆಯಲ್ಲಿ ಪ್ರಕಟಿಸುತ್ತಿದ್ದರು. ಇನ್ನು ಏಕೀಕರಣಕ್ಕೆ ಸಂಬಂಧಿಸಿದಂತೆ ರಾಜಕಾರಣಿಗಳ ಭಾಷಣಗಳನ್ನು, ಲೇಖನಗಳನ್ನು ಪ್ರಕಟಿಸುವುದರೊಂದಿಗೆ ಚಳವಳಿಯ ಅರಿವನ್ನು ಉಂಟುಮಾಡುತ್ತಿದ್ದರು. ಅಲ್ಲದೇ ಏಕೀಕರಣ

ಚುರುಕುಗೊಳ್ಳಬೇಕಾಗಿದ್ದು ಅದಕ್ಕೆ ಕಾಂಗ್ರೆಸ್ಸಿನಿಂದ ಬೆಂಬಲ ಸರಿಯಾಗಿ ಸಿಗದ ಕಾರಣ ನಿಜಲಿಂಗಪ್ಪ ಮತ್ತು ಇತರ ಕಾಂಗ್ರೇಸ್ ನಾಯಕರನ್ನು ಟೀಕಿಸಿ 'ರೈತ ಪತ್ರಿಕೆ' ಯಲ್ಲಿ ಪ್ರಕಟಿಸಿದರು.

**ಜೆ.ವಿ.ಪಿ ಆಯೋಗ**

ಧರ್ ಆಯೋಗದ ವರದಿಯನ್ನು ನಾನಾ ಭಾಷಿಕರು ವಿರೋಧಿಸತೊಡಗಿದಾಗ ಆಯೋಗದ ವರದಿಯನ್ನು ಪರಿಶೀಲಿಸಲು ರಾಷ್ಟ್ರೀಯ ಕಾಂಗ್ರೆಸ್ಸಿನ ಮೂವರು ಸದಸ್ಯರ ಸಮಿತಿಯೊಂದನ್ನು ರಚಿಸಿತು. ಇದನ್ನು ತ್ರಿಮೂರ್ತಿ ಅಥವಾ ಜೆ.ವಿ.ಪಿ ಸಮಿತಿ ಎಂದು ಕರೆದರು. ಈ ಸಮಿತಿಯಲ್ಲಿ ಸರ್ದಾರ್ ವಲ್ಲಭಾಯಿ ಪಟೇಲ್, ಪಟ್ಟಾಭಿ ಸೀತಾರಾಮಯ್ಯ

*ರೈತ ಪತ್ರಿಕೆಯ ಮೊದಲ ಸಂಚಿಕೆಯ ಮುಖ ಪುಟವನ್ನು ಅನುಬಂಧದಲ್ಲಿ ನೀಡಲಾಗಿದೆ.

ಮತ್ತು ಜವಾಹರ್‌ಲಾಲ್ ನೆಹರು ಇದ್ದರು. ಈ ಸಮಿತಿಯು ತನ್ನ ವರದಿಯನ್ನು ೧-೪-೧೯೪೯ರಂದು ಪ್ರಕಟಿಸಿತು. ಈ ವರದಿ ಸಹ ಧರ್ ಆಯೋಗದ ವರದಿಯನ್ನು ಇದು ಎತ್ತಿಹಿಡಿಯಿತು. ಈ ಮಧ್ಯೆ ಕಾಂಗ್ರೆಸ್ ಪಕ್ಷದ ಪ್ರಾಂತೀಯ ನಾಯಕರುಗಳು ಕೇಂದ್ರ ನಾಯಕರುಗಳ ಮಾತಿಗೆ ಕೋಲೆಬಸವನಂತೆ ತಲೆಹಾಕಿ ಅವರು ನೀಡುವ ಅಧಿಕಾರ ಸ್ಥಾನಗಳನ್ನು ಒಪ್ಪಿಕೊಂಡು ಏಕೀಕರಣ ಬೇಡಿಕೆಯನ್ನು ದುರ್ಬಲಗೊಳಿಸುತ್ತಿದ್ದಾರೆ ಎಂಬ ವಿಷಾದದ ಅಭಿಪ್ರಾಯಗಳೇ ಅಧಿಕವಾಗಿದ್ದ ಸಮಯದಲ್ಲಿ ಏಕೀಕರಣಕ್ಕೆ ಅಡ್ಡಿಯನ್ನುಂಟುಮಾಡುತ್ತಿದ್ದ ಕಾಂಗ್ರೆಸ್ ಸಂಸ್ಥೆಗೆ ರಾಜೀನಾಮೆ ಕೊಟ್ಟು, ಅದರ ವಿರುದ್ಧ ಹೋರಾಡಲು ಕೋ. ಚೆ. ನಿಂತರು. ೧೯೫೨ರ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಕೂಡ್ಲಿಗಿ ಕ್ಷೇತ್ರದಿಂದ ಆಚಾರ್ಯ ಕೃಪಾಲಾನಿ ಅವರ ಕೆ.ಎಂ.ಪಿ.ಪಿ (ಕೃಷಿಕರ ಮಜದೂರ್ ಪ್ರಜಾಪಾರ್ಟಿ) ಪಕ್ಷದಿಂದ ಮದ್ರಾಸ್ ವಿಧಾನಸಭೆಗೆ ಸ್ಪರ್ಧಿಸಿ ಸೋತರು. ಆದರೆ ಅವರ ಉದ್ದೇಶ ಏಕೀಕರಣ ಹೋರಾಟಕ್ಕೆ ಬೆಂಬಲವನ್ನು ಮುಕ್ತವಾಗಿ ಸೂಚಿಸದ ಕಾಂಗ್ರೆಸ್ಸನ್ನು ಸೋಲಿಸುವುದಾಗಿತ್ತು.

**ಬಳ್ಳಾರಿಯಲ್ಲಿ ಕನ್ನಡ ಹೆಣ್ಣುಮಕ್ಕಳ ಶಾಲೆಯ ಆರಂಭ**

ಕೋ. ಚೆಯವರು ೧೯೪೬ರ ನಂತರ ಬಳ್ಳಾರಿಯಲ್ಲಿ ವಾಸಿಸತೊಡಗಿದರು. ಆದರೆ ಬಳ್ಳಾರಿ ಸರ್ಕಾರಿ ಬಾಲಕೀಯರ ಪ್ರೌಢಶಾಲೆಯಲ್ಲಿ ಕನ್ನಡ ಮಾಧ್ಯಮವೇ ಇರಲಿಲ್ಲ. ಕನ್ನಡ ತರಗತಿಗಳನ್ನು ತೆರೆಯಿರಿ ಎಂದು ಕೇಳಿಕೊಂಡಾಗ ತರಗತಿಗೆ ಇಪ್ಪತ್ತು ಹುಡುಗಿಯರಾದರೂ ಇದ್ದರೆ ಮಾತ್ರ ಕನ್ನಡ ತರಗತಿಯನ್ನು ತೆರೆಯಲಾಗುವುದು ಎಂದು ವಿದ್ಯಾಮಂತ್ರಿ ಟಿ.ಎಸ್. ಅವಿನಾಶಲಿಂಗಂ ಚೆಟ್ಟಿಯಾರರು ಹೇಳುತ್ತಿದ್ದರು. ಕೋ. ಚೆಯವರು ಕನಿಷ್ಠ ಇಪ್ಪತ್ತು ಹುಡುಗಿಯರನ್ನಾದರೂ ಕನ್ನಡ ತರಗತಿಗೆ ಸೇರಿಸಲೆಂದು ರಾತ್ರಿ ಹೆಣ್ಣು ಹೆತ್ತವರ ಮನೆಗಳಿಗೆ ಹೋಗಿ ಕರೆತಂದರು. ಕೊನೆಗೆ ೧೯೫೦ರ ಹೊತ್ತಿಗೆ ಕನ್ನಡ ತರಗತಿಗಳನ್ನು ತೆರೆಯುವುದರಲ್ಲಿ ಅಲ್ಪ ಸ್ವಲ್ಪ ಯಶಸ್ವಿಯಾದರೆಂದು ಹೇಳಬಹುದು.

**ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾ ಸಮಿತಿಯ ಸ್ಥಾಪನೆ-೧೯೫೩**

ಕೇಂದ್ರ ಸರ್ಕಾರವು ಭಾಷಾವಾರು ಪ್ರಾಂತ್ಯ ರಚನೆಯಲ್ಲಿ ವಿಳಂಬ ಮಾಡಿದ ಕಾರಣಕ್ಕೆ ಆಂಧ್ರ ಪ್ರದೇಶದಲ್ಲಿ ಪೊಟ್ಟಿ ಶ್ರೀರಾಮುಲು ಆಮರಣ ಉಪವಾಸಕ್ಕೆ ಕುಳಿತುಕೊಂಡು ೪೩ದಿನ ಉಪವಾಸ ಮಾಡಿ ಸತ್ತರು. ಇದರಿಂದ ಆಂಧ್ರದ ಜನ ಭಯಂಕರವಾದ ವ್ಯಾಪಕ ಹಿಂಸಾರೂಪದ ಚಳವಳಿ ನಡೆಸಿ ಅಪಾರ ಆಸ್ತಿಯನ್ನು ನಾಶಮಾಡಿದರು. ಕೇಂದ್ರ ಸರ್ಕಾರ ಇದರ ಗಂಭೀರ ಸ್ವರೂಪವನ್ನು ಗಮನಿಸಿ ಸರ್ಕಾರ ಆಂಧ್ರ ರಾಜ್ಯ ರಚನೆಗೆ ನ್ಯಾಯಮೂರ್ತಿ ವಾಂಛೂ ಆಯೋಗವನ್ನು ನೇಮಕ ಮಾಡಿತು.

ನ್ಯಾಯಮೂರ್ತಿ ವಾಂಛೂ ಅವರು ಆಂಧ್ರ ರಾಜ್ಯದ ರಚನೆಗೆ ಶಿಫಾರಸ್ಸು ಮಾಡುತ್ತಾ ಆಗ ಮದ್ರಾಸ್ ರಾಜ್ಯದಲ್ಲಿದ್ದ ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ವ್ಯಾಪ್ತಿಯಲ್ಲಿದ್ದ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕ ರಾಜ್ಯ ರಚನೆಯಾಗುವತನಕ ಆಂಧ್ರ ರಾಜ್ಯದಲ್ಲಿ ಸೇರಿಸಬೇಕೆಂದು ಶಿಫಾರಸ್ಸು ಮಾಡಿದರು. ಆದರೆ ಬಳ್ಳಾರಿಯ ಕನ್ನಡಿಗರು ತಾತ್ಕಾಲಿಕವಾಗಿಯಾದರೂ ಒಂದೇ ಒಂದು ದಿನ ಆಂಧ್ರ ರಾಜ್ಯದಲ್ಲಿರಲು ಸುತರಾಂ ಇಷ್ಟಪಡಲಿಲ್ಲ. ಮದ್ರಾಸ್ ರಾಜ್ಯದಲ್ಲಿಯೇ ಉಳಿಸಿ ಎಂದು ಏಕೀಕರಣ ಧುರೀಣರ ಜೊತೆಗೆ ಕೋ. ಚೆಯವರು ಮನವಿ ಸಲ್ಲಿಸಿದರು. ಆದರೆ ಅಂದಿನ ಮದ್ರಾಸ್ ಮುಖ್ಯಮಂತ್ರಿ 'ರಾಜಾಜಿ' ಅದಕ್ಕೊಪ್ಪಲಿಲ್ಲ. ಬಳ್ಳಾರಿ ಮದ್ರಾಸಿನಿಂದ ೩೦೦ ಮೈಲು-೨೫೦ಮೈಲು ಆಂಧ್ರ ಪ್ರದೇಶವನ್ನು ದಾಟಿ ಬಳ್ಳಾರಿಗೆ ಬಂದು ಆಡಳಿತ ನಡೆಸುವುದು ಸಾಧ್ಯವಿಲ್ಲ ಎಂದರು. ಹಾಗಾದರೆ ಆಂಧ್ರದೊಡನೆಯೇ ಕರ್ನಾಟಕ ರಾಜ್ಯವನ್ನು ರಚಿಸಿ ಎಂದು ಹಕ್ಕೊತ್ತಾಯ ಮಾಡಲಾಯಿತು. ಆದರೆ ಮೈಸೂರು ಮತ್ತು ಹೈದರಾಬಾದ್ ರಾಜ್ಯಗಳನ್ನು ಭೂಪಟದಿಂದ ಅಳಿಸುವ ತನಕ ಕರ್ನಾಟಕ ರಾಜ್ಯ ರಚನೆ ಸಾಧ್ಯವಿಲ್ಲವೆಂದು ಕೇಂದ್ರ ಸರ್ಕಾರ ಸ್ಪಷ್ಟವಾಗಿ ನಿರಾಕರಿಸಿತು.[೧೩] ಕರ್ನಾಟಕ ಕಾಂಗ್ರೆಸ್ ಕೇಂದ್ರ ಸರ್ಕಾರದ ವಿರುದ್ಧ ಪ್ರತಿಭಟನೆ, ಚಳುವಳಿ ಹೂಡಲು ಹಿಂಜರಿಯಿತು. ಆ ಚಳವಳಿಯನ್ನು ಹೂಡಲಿಕ್ಕಾಗಿಯೇ 'ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾ ಸಮಿತಿ' ಎಂಬ ಸಂಸ್ಥೆಯನ್ನು ಹುಟ್ಟುಹಾಕಿದರು. ಇದರಲ್ಲಿ ಸರ್ವ ರಾಜಕೀಯ ಪಕ್ಷಗಳೂ ಪಾಲ್ಗೊಂಡವು. ಅದರ ಚಳವಳಿಯ ನೇತೃತ್ವವನ್ನು 'ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾ ಸಮಿತಿಯ ಅಧ್ಯಕ್ಷರಾಗಿ ಜಂತಕಲ್ ಗಾದಿಲಿಂಗಪ್ಪನವರು, ಕಾರ್ಯದರ್ಶಿಯಾಗಿ ಕೋ. ಚೆನ್ನಬಸಪ್ಪನವರು ವಹಿಸಿಕೊಂಡಿದ್ದರು. ಈ ಒಂದು ಸಂಸ್ಥೆಗೆ ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯಯೋಧರು, ಅವರಿಗಿಂತ ಹೆಚ್ಚಾಗಿ ಸಾರ್ವಜನಿಕ ಮುಖಂಡರು ಅದರಲ್ಲೂ ಬಳ್ಳಾರಿಯ ವರ್ತಕರು, ವಕೀಲರು, ವೈದ್ಯರು, ಸಾಹಿತಿಗಳು, ವಿದ್ಯಾರ್ಥಿಗಳು, ಕಲಾವಿದರು ಭಾಗವಹಿಸಿದರು.

ಕೋ. ಚೆಯವರು ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾಸಮಿತಿಯ ಕಾರ್ಯದರ್ಶಿಗಳಾಗಿ ಶಾಲೆ, ಕಾಲೇಜುಗಳ ಅಧ್ಯಾಪಕರನ್ನು, ವಿದ್ಯಾರ್ಥಿಗಳನ್ನು, ವರ್ತಕರನ್ನು ಚಳವಳಿಗೆ ಸಿದ್ಧಗೊಳಿಸುವಲ್ಲಿ ಕಾರ್ಯರೂಪಿಸುತ್ತಿದ್ದರು. ಇವರು ಚಳವಳಿಯನ್ನು ಜಾಗೃತಿಗೊಳಿಸಲು ಆಲೂರು, ಆದವಾನಿ, ರಾಯದುರ್ಗ ಮುಂತಾದ ಪ್ರದೇಶಗಳಿಗೆ ತೆರಳಿ ಅಲ್ಲಿ ಎಸ್. ನಿಜಲಿಂಗಪ್ಪ ಮುಂತಾದ

ರಾಷ್ಟ್ರೀಯ ನಾಯಕರನ್ನು ಕರೆತಂದು ಭಾಷಣ ಮಾಡಿಸುತ್ತಿದ್ದರು. ಈ ಕ್ರಿಯಾಸಮಿತಿಯ ಕೆಲಸ ಸುನಾಮಿ ಬಿರುಗಾಳಿಯಂತೆ ಪೂರ್ವ ಕರ್ನಾಟಕದ ಪ್ರದೇಶಗಳಲ್ಲಿ ಹಬ್ಬಲು ಪ್ರಮುಖ ಕಾರಣಕರ್ತರಾಗಿ ಕಾರ್ಯ ನಿರ್ವಹಿಸಿದರು.

"ಈ ಕ್ರಿಯಾಸಮಿತಿಯ ಮೂಲಕ ಬಳ್ಳಾರಿ ಜಿಲ್ಲೆಯ ಗ್ರಾಮ ಪಂಚಾಯಿತಿಗಳು, ಸಹಕಾರಿ ಸಂಘಗಳು, ವಿದ್ಯಾವರ್ಧಕ ಸಂಘಗಳು, ವ್ಯಾಯಾಮ ಶಾಲೆಗಳು, ಅಧ್ಯಾಪಕರು, ವಿದ್ಯಾರ್ಥಿಗಳು, ನ್ಯಾಯವಾದಿ ಸಂಘಗಳು ಮುಂತಾದ ಸಾರ್ವಜನಿಕ ಸಂಘ-ಸಂಸ್ಥೆಗಳು ಬಳ್ಳಾರಿಯನ್ನು ಆಂಧ್ರ ಪ್ರಾಂತಕ್ಕೆ ಸೇರಿಸಬಾರದೆಂದು ಗೊತ್ತುವಳಿ ಮಂಜೂರು ಮಾಡಿ ಪ್ರಧಾನಿ ಮತ್ತು ಗೃಹ ಮಂತ್ರಿಗಳಿಗೆ ರವಾನಿಸಿದರು. ಅಲ್ಲದೇ ಲಕ್ಷ ಜನರ ಪೋಸ್ಟ್‌ಕಾರ್ಡ್ ಮನವಿ ಚಳವಳಿ ಪ್ರಾರಂಭಿಸಿ ಎರಡು ವಾಕ್ಯಗಳನ್ನು "ಬಳ್ಳಾರಿ ಜಿಲ್ಲೆಯನ್ನು ಆಂಧ್ರಕ್ಕೆ ಸೇರಿಸಬೇಡಿ, ಕರ್ನಾಟಕ ರಾಜ್ಯ ರಚನೆ ಮಾಡಿ" ಎಂದು ಕೇಂದ್ರಕ್ಕೆ ಮನವಿಯನ್ನು ಕಳಿಸುವಂತೆ ಕಾರ್ಯಕ್ರಮ ರೂಪಿಸಿದರು. ಇನ್ನೊಂದು ಮಹತ್ವದ ಅಂಶವೇನೆಂದರೆ ಅದುವರೆಗೆ ಯಾವ ರಾಜ್ಯದ ಪ್ರಜೆಗಳೂ ನಡೆಸದಿದ್ದ ಒಂದು ಚಳವಳಿಯನ್ನು ಪ್ರಾರಂಭಿಸಲಾಯಿತು. ಸಂವಿಧಾನದ ಪ್ರಕಾರ ಪ್ರಜೆಗಳೇ ತಮ್ಮ ಸಂಸದರ ಮೂಲಕ ಸಂಸತ್ತಿಗೆ ಮನವಿ (petition to the parliment) ಯನ್ನು ಅರ್ಪಿಸುವ ಚಳವಳಿ ಹೂಡಲಾಯಿತು. ಆಗ ಕೊಪ್ಪಳ ಲೋಕಸಭಾ ಕ್ಷೇತ್ರದಿಂದ ಆರಿಸಿಹೋಗಿದ್ದ ಶ್ರೀ ಅಳವಂಡಿ ಶಿವಮೂರ್ತಿ ಸ್ವಾಮಿಗಳ ಮೂಲಕ ಪ್ರಜೆಗಳು ಸಹಿ ಮಾಡಿದ ಅರ್ಜಿಯನ್ನು ಸಲ್ಲಿಸಲು ನಿರ್ಧರಿಸಲಾಯಿತು.

ಈ ರೀತಿಯಾಗಿ ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾಸಮಿತಿಯ ಕಾರ್ಯದರ್ಶಿಯಾಗಿ ಕೋ. ಚೆಯವರು ಕ್ರಿಯಾಸಮಿತಿಯ ಅಧ್ಯಕ್ಷರಾದ ಜಂತಕಲ್ ಗಾದಿಲಿಂಗಪ್ಪ ಮತ್ತು ಅಳವಂಡಿ ಶಿವಮೂರ್ತಿ ಸ್ವಾಮಿಗಳ ಜೊತೆಗೆ ಸಂಸತ್ತಿಗೆ ಹೋಗಿ ಬಳ್ಳಾರಿ ಪ್ರಜೆಗಳ ಮನವಿ ಸಮರ್ಪಣೆ ಮಾಡಿದರು. ತರುವಾಯ ಕ್ರಿಯಾಸಮಿತಿಯ ನಿಯೋಗದೊಂದಿಗೆ ಪ್ರಧಾನಿ, ಗೃಹಮಂತ್ರಿ, ಕೇಂದ್ರ ಸಚಿವ ಸಂಪುಟದ ಹಿರಿಯ ಸದಸ್ಯರಾಗಿದ್ದ ಮೌಲಾನಾ ಅಬ್ದುಲ್‌ಕಲಾಂ ಆಜಾದ್, ರಾಜಕುಮಾರಿ ಅಮೃತಕೌರ್, ಚಿಂತಾಮಣಿ ದೇಶ್‌ಮುಖ್, ವಿ.ವಿ. ಗಿರಿ, ಸರ್ದಾರ್ ಬಲದೇವಸಿಂಗ್, ಬಿ.ಎಸ್. ದಾತಾರ ಮುಂತಾದವರನ್ನು ಭೇಟಿ ಮಾಡಿ ಮನವಿ ಪತ್ರವನ್ನು ಸಲ್ಲಿಸಿದರು.

ಅಷ್ಟು ಹೊತ್ತಿಗೆ ಬಳ್ಳಾರಿ ಜಿಲ್ಲೆಯನ್ನು ತಾತ್ಕಾಲಿಕವಾಗಿ ಮೈಸೂರು ಸೀಮೆಯಲ್ಲಿ ಸೇರ್ಪಡೆ ಮಾಡಬೇಕೆಂದು ತೀರ್ಮಾನಿಸಿ ಕ್ರಿಯಾಸಮಿತಿಯಿಂದ ಕೋ. ಚೆ ಮತ್ತು ಉಳಿದ ೧೪ಜನ ಸದಸ್ಯರು ಮೈಸೂರು ಸರ್ಕಾರಕ್ಕೆ ಮನವಿ ಅರ್ಪಿಸಿದರು. ಜೊತೆಗೆ ಮೈಸೂರು ವಿಧಾನಸಭೆ, ವಿಧಾನ ಪರಿಷತ್ತಿನ ಕನಿಷ್ಠ ೫೦ ಸದಸ್ಯರು ಬಳ್ಳಾರಿಯನ್ನು ಮೈಸೂರು ರಾಜ್ಯದಲ್ಲಿ ಸೇರಿಸಿಕೊಳ್ಳಬೇಕೆಂಬ ಮನವಿಯನ್ನು ಅರ್ಪಿಸುವ ಏರ್ಪಾಡನ್ನು ಮಾಡಿದರು. ಆದರೆ ಏಕೀಕರಣಕ್ಕೆ ಚೆನ್ನಯ್ಯನವರು, ಕಡಿದಾಳ್ ಮಂಜಪ್ಪ, ರಾಮಚಂದ್ರರಾವ್, ಹೆಚ್.ಕೆ ವೀರಣ್ಣಗೌಡ, ಸಾಹುಕಾರ ಚನ್ನಯ್ಯ, ನಾಗಯ್ಯರೆಡ್ಡಿ, ತಾಳಿಕೆರೆ ಸುಬ್ರಹ್ಮಣ್ಯಂ ಮುಂತಾದವರು

ಮತ್ತು ಮೈಸೂರಿನ ಪ್ರಭಲ ಕೋಮಿನವರಾದ ಒಕ್ಕಲಿಗರು ಇದನ್ನು ವಿರೋಧಿಸಿದರು. "ಇಂಥ ಸನ್ನಿವೇಶದಲ್ಲಿ ಬಳ್ಳಾರಿ ಜಿಲ್ಲೆಯ ಆರ್ಥಿಕ, ಶೈಕ್ಷಣಿಕ, ನೀರಾವರಿ, ಅರಣ್ಯ ಸಂಪತ್ತುಗಳ" ವಿವರಗಳನ್ನು ಸಮಿತಿ ರಚಿಸಿಕೊಂಡು ವರದಿ ಮಾಡುವಂತೆ ನಿರ್ದೇಶಿಸಿದಾಗ, ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳು ಸರಿಯಾದ ಮಾಹಿತಿ ಅಂಕಿ-ಸಂಖ್ಯೆಯನ್ನು ಒದಗಿಸಲು ನೌಕರಿಯಲ್ಲಿದ್ದ ಮತ್ತು ನಿವೃತ್ತರಾದ ನೌಕರರ ಸಹಾಯದಿಂದ ಸಿದ್ಧಪಡಿಸಿ ವರದಿಯನ್ನು ತಯಾರಿಸಿ ಕಳಿಸಿಕೊಟ್ಟರು.

ಈ ಮಧ್ಯೆ ಬಳ್ಳಾರಿ ಜಿಲ್ಲಾ ಸಮಸ್ಯೆಯನ್ನು ಬಗೆಹರಿಸಲು ನ್ಯಾ ಮೂ ವಾಂಛೂ ಸಮಿತಿಯು, ಮಿಶ್ರಾ ಆಯೋಗವನ್ನು ನೇಮಿಸಿತ್ತು. ಈ ಆಯೋಗದ ಮುಂದೆ ಮತ್ತೆ ಮನವಿಯನ್ನು ಸಿದ್ಧಪಡಿಸಿ ಸಲ್ಲಿಸಿದರು. ಕೊನೆಗೆ ಮಿಶ್ರಾ ವರದಿ ಪ್ರಕಟವಾಗಿ ಬಳ್ಳಾರಿ ಜಿಲ್ಲೆಯ ಪಶ್ಚಿಮದ ಏಳು ತಾಲೂಕುಗಳು ಮೈಸೂರು ರಾಜ್ಯದಲ್ಲಿ ವಿಲೀನವಾಗಬೇಕೆಂದು ಮತ್ತು ಪೂರ್ವ ತಾಲೂಕುಗಳು ಆಂಧ್ರದಲ್ಲಿ ವಿಲೀನವಾಗಬೇಕೆಂದು ವರದಿ ಸಲ್ಲಿಸಿತು.

**ಬಳ್ಳಾರಿ ಮೈಸೂರು ರಾಜ್ಯದಲ್ಲಿ ವಿಲೀನ ಮತ್ತು ಕೋ. ಚೆ ಮನೆಯ ಬೆಂಕಿ ಪ್ರಕರಣ**

ಬಳ್ಳಾರಿ ಜಿಲ್ಲೆಯನ್ನು ಮೈಸೂರು ರಾಜ್ಯದಲ್ಲಿ ವಿಲೀನ ಮಾಡಲು ಮಾಡಿದ ಪ್ರಯತ್ನ ಫಲನೀಡಿತು. ಅದಕ್ಕಾಗಿ ದಿನಾಂಕ ೨-೧೦-೧೯೫೩ರಂದು ಬಳ್ಳಾರಿಯಲ್ಲಿ ವಿಲೀನ ಸಮಾರಂಭವನ್ನು ಏರ್ಪಡಿಸಲು ಕ್ರಿಯಾ ಸಮಿತಿ ಸಿದ್ಧತೆ ಮಾಡಿಕೊಂಡಿತು. ಅದಕ್ಕಾಗಿ ಬಿ.ಡಿ.ಎ.ಎ. ಮೈದಾನದಲ್ಲಿ ೨೦ಸಾವಿರ ಪ್ರೇಕ್ಷಕರಿಗೆ ಆಸನ ವ್ಯವಸ್ಥೆಯ ಬೃಹತ್ ಮಂಟಪವನ್ನು ನಿರ್ಮಿಸಲಾಯಿತು. ಈ ಮಂಟಪ ರಕ್ಷಣೆಗಾಗಿ ಕ್ರಿಯಾಸಮಿತಿಯು ಸಕ್ರಿಯ ಕಾರ್ಯಕರ್ತ ಅಬ್ದುಲ್ ರಂಜಾನ್ ಸಾಹೇಬರು ತಮ್ಮ ಪೈಲ್ವಾನ್ ಬಳಗದವರೊಡನೆ ಮಂಟಪ ರಕ್ಷಿಸುವ ಹೊಣೆ ಹೊತ್ತು ದಿನಾಂಕ ೩೦-೯-೧೯೫೩ರ ರಾತ್ರಿ ಬಿ.ಡಿ.ಎ.ಎ. ಮೈದಾನದಲ್ಲಿಯೇ ತಮ್ಮ ಪೈಲ್ವಾನ್ ಬಳಗದವರೊಡನೆ ರಾತ್ರಿ ಕಾವಲಿದ್ದರು.[೧೪] ಆದರೆ ರಾತ್ರಿವೇಳೆ ಯಾರೋ ದುಷ್ಕರ್ಮಿಗಳು ಆ್ಯಸಿಡ್ ಬಲ್ಬನ್ನು ರಂಜಾನ್ ಸಾಹೇಬರ ಮೇಲೆ ಎರಚಿ ಓಡಿಹೋದರು. ಇವರನ್ನು ಕೋ. ಚೆ ಇತರರು ಇಂದಿನ ಒ.ಪಿ.ಡಿ ಆಸ್ಪತ್ರೆಗೆ ದಾಖಲಿಸಿದರಾದರೂ ಸೂಕ್ತ ಚಿಕಿತ್ಸೆ ದೊರೆಯದೆ ಬಳ್ಳಾರಿ ಮೈಸೂರಿನಲ್ಲಿ ವಿಲೀನವಾಗುವ ದಿನವೇ ಮರಣ ಹೊಂದಿದರು. ಈ ಮಧ್ಯೆ ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರನ್ನು ರಥದ ಮೂಲಕ ಬಿ.ಡಿ.ಎ.ಎ. ಮೈದಾನಕ್ಕೆ ಕರೆ ತರಲಾಗಿ ಅಲ್ಲಿ ಹನುಮಂತಯ್ಯನವರು ಭಾವಪೂರಿತ ಭಾಷಣ ಮಾಡುವುದರೊಂದಿಗೆ ಅಧಿಕೃತವಾಗಿ ಬಳ್ಳಾರಿಯನ್ನು ಮೈಸೂರು ರಾಜ್ಯಕ್ಕೆ ಸೇರಿಸಿಕೊಂಡರು. ಈ ಸಮಾರಂಭದಲ್ಲಿ ಒಂದು ಸ್ಮರಣ ಸಂಚಿಕೆ ಬಿಡುಗಡೆ ಮಾಡಿಸಲಾಯಿತು. ಅದರಲ್ಲಿ ಕೋ. ಚೆನ್ನಬಸಪ್ಪನವರು ಬಳ್ಳಾರಿ ಜಿಲ್ಲೆ ಮೈಸೂರು ರಾಜ್ಯಕ್ಕೆ ಸೇರುವಂತೆ ವರದಿ ಮಾಡಿದ ಮಿಶ್ರಾವರದಿಯನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದರು.

ಸಮಾರಂಭ ಮುಗಿದ ಮೇಲೆ ಕೋ.ಚೆಯವರು ಮನೆಗೆ ಮರಳುವ ವೇಳೆಗಾಗಲೇ ಕೆಲವು ಆಂಧ್ರ ಪುಂಡರು, ಮನೆಯ ಹಿಂದಿನ ಹಸುವಿನ ಕೊಠಡಿಗೆ ಬೆಂಕಿ ಹಚ್ಚಿ ಮನೆಯವರನ್ನು

ಬೈಯುವುದಲ್ಲದೆ ಅವರ ಮೇಲೆ ಹಲ್ಲೆ ನಡೆಸಿದರು. ಅಷ್ಟರಲ್ಲಿ ಆಂಧ್ರದ ಪರವಾಗಿ ಹೋರಾಡುತ್ತಿದ್ದ ಸಿ. ಭೀಮಪ್ಪಶೆಟ್ಟಿ, ಆಂಧ್ರದ ಮುಂಡರನ್ನು ಗದರಿಸಿ ಆ ಕೃತ್ಯವನ್ನು ಖಂಡಿಸಿದರು. ಈ ರೀತಿಯ ಹಲ್ಲೆಗಳನ್ನು ಕೋ.ಚೆಯವರ ಮೇಲೆ ಮಾಡುವುದಾಗಿ ಬೆದರಿಕೆ ಬರುತ್ತಿದ್ದವಾದರೂ ಅವುಗಳಿಗೆ ಭಯಪಡದೇ ಕನ್ನಡ ನಾಡಿಗಾಗಿ ತಮ್ಮ ಸೇವೆ ಸಲ್ಲಿಸುತ್ತಿದ್ದರು.

ಕೊನೆಗೂ ಕರ್ನಾಟಕಕ್ಕೆ ಸೇರಬೇಕಿದ್ದ ಬಳ್ಳಾರಿ ಜಿಲ್ಲೆಯ ಭಾಗವನ್ನು ಮೈಸೂರು ರಾಜ್ಯಕ್ಕೆ ಸೇರಿಸುವಲ್ಲಿ ಕೋ. ಚೆಯವರು ಅಪಾರ ಪರಿಶ್ರಮವನ್ನು ಪಟ್ಟರೆಂದು ಹೇಳಬಹುದು.

**ರಾಜ್ಯ ಪುನರ್ವಿಂಗಡನಾ ಆಯೋಗ**

'ಆಂಧ್ರ ರಾಜ್ಯ ರಚನೆ ಆದದ್ದು ಭಾಷಾವಾರು ಪ್ರಾಂತರಚನೆಯ ಚಳವಳಿಗೆ ಪ್ರೋತ್ಸಾಹ ಕೊಟ್ಟಂತೆ ಆಗಿತ್ತು. ಆದರೆ ಆಂಧ್ರರು ವಿಶಾಲಾಂಧ್ರ ರಾಜ್ಯ ಅಂದರೆ ಹೈದರಾಬಾದ್ ಸಂಸ್ಥಾನದ ತೆಲಂಗಾಣ ಜಿಲ್ಲೆಗಳನ್ನೊಳಗೊಂಡು ರಚನೆ ಆಗಲೇಬೇಕೆಂದು ಚಳವಳಿಯನ್ನು ತೀವ್ರಗೊಳಿಸಿದರು. ಬಳ್ಳಾರಿ ಮೈಸೂರಿನಲ್ಲಿ ವಿಲಿನವಾದದ್ದು ಮೈಸೂರುರಾಜ್ಯ, ಉಳಿದ ಕರ್ನಾಟಕ ಪ್ರದೇಶವನ್ನು ತನ್ನೊಳಗೆ ಸೇರಿಸಲು ಬಾಗಿಲು ತೆರೆದಂತಾಯಿತು.' ಈ ಮಧ್ಯೆ ೧೯೫೩ ಅಕ್ಟೋಬರ್ ೨೮ರಂದು ಪ್ರಧಾನಿ ನೆಹರೂ ನಿಜಲಿಂಗಪ್ಪನವರಿಗೆ ಪತ್ರ ಬರೆದು ಭಾಷಾವಾರು ಪ್ರಾಂತಗಳ ರಚನೆಯನ್ನು ಕುರಿತು ಡಿಸೆಂಬರ್ ಅಂತ್ಯದ ಒಳಗೆ ನಿರ್ಧಾರ ಕೈಗೊಳ್ಳುವುದಾಗಿ ತಿಳಿಸಿದರು. ಅದರಂತೆ ೧೯೫೩ ಡಿಸೆಂಬರ್ ೨೯ರಂದು ರಾಜ್ಯ ಪುನರ್ವಿಂಗಡನಾ ಆಯೋಗವನ್ನು ರಚಿಸಿ ಆಜ್ಞೆ ಹೊರಡಿಸಿದರು. ಇದರ ಅಧ್ಯಕ್ಷರಾಗಿ ಫಜಲ್ ಅಲಿಯವರು ನೇಮಕ ಗೊಂಡರು. ಇವರ ಸಹಾಯಕರಾಗಿ ಹೃದಯನಾಥ ಕುಂಜ್ರು, ಕೆ.ಎಂ. ಪಣಿಕ್ಕರ್‌ರು ನೇಮಕಗೊಂಡಿದ್ದರು. "ಈ ಆಯೋಗವನ್ನು ಫಜಲ್ ಅಲಿ ಆಯೋಗ ಅಥವಾ ತ್ರಿಮೂರ್ತಿ ಆಯೋಗವೆಂದೂ ಕರೆಯಲಾಯಿತು." ಈ ಆಯೋಗ ಜನಾಭಿಪ್ರಾಯ ಮತ್ತು ಆಯಾ ಪ್ರದೇಶಗಳ ಮಾಹಿತಿ–ಪ್ರಜಾಸಂಖ್ಯೆ, ನಿಸರ್ಗ ಸಂಪತ್ತು, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ, ಕೃಷಿ, ನೀರಾವರಿ, ಚಾರಿತ್ರಿಕ ಹಿನ್ನಲೆ ಮುಂತಾದ ವಿಷಯ ಸಂಗ್ರಹಣೆಗಾಗಿ ದೇಶಾದ್ಯಂತ ಪ್ರವಾಸ ಕೈಗೊಂಡಿತು. ಆಯೋಗವು ಕರ್ನೂಲಿಗೆ ಭೇಟಿ ಕೊಟ್ಟಾಗ 'ಹಿಂದೂ' ಪತ್ರಿಕೆಯ ಬಳ್ಳಾರಿ ವರದಿಗಾರರಾಗಿದ್ದ ಕೃಷ್ಣರಾವ್ ಅವರು "ನಿಮ್ಮ ಆಯೋಗಕ್ಕೆ ಬಳ್ಳಾರಿ ವಿಚಾರವನ್ನು ಪುನಃ ಪರಿಶೀಲನೆ ಮಾಡುವ ಅಧಿಕಾರ ಇದೆಯೇ?" ಎಂದು ಕೇಳಿದಾಗ ಆಯೋಗದ ಸದಸ್ಯರು ಇಡೀ ದೇಶದ ನಕ್ಷೆಯನ್ನು ಬದಲಿ ಮಾಡುವ ಅಧಿಕಾರ ಆಯೋಗಕ್ಕೆ ಇದೆ ಎಂದು ಉತ್ತರಿಸಿದರು.

ಈ ಕುರಿತು ಬಳ್ಳಾರಿಯ ಕ್ರಿಯಾ ಸಮಿತಿಯು ಮಿಶ್ರಾ ಕಮಿಟಿಯ ತೀರ್ಪು ಅಂತಿಮವಾಗಿದೆ. ಇದನ್ನು ಕೆದಕುವುದಿಲ್ಲ ಎಂದು ತಿಳಿದಿದ್ದರು. ಈ ಮಧ್ಯೆ ಪೂರ್ವ ಕರ್ನಾಟಕ ಗಡಿ ಸಮಿತಿಯ ಕಾರ್ಯದರ್ಶಿಯಾಗಿದ್ದ ಕೋ. ಚೆನ್ನಬಸಪ್ಪನವರು "೧೬–೬–೧೯೫೪ರಂದು ಫಜಲ್ ಅಲಿ ನೇತೃತ್ವದ ರಾಜ್ಯ ಪುನರ್ ವಿಂಗಡನಾ ಆಯೋಗವು ಹುಬ್ಬಳ್ಳಿಗೆ ಬಂದಾಗ ಆಯೋಗದ ಸದಸ್ಯರನ್ನು ಕಂಡು ಕರ್ನಾಟಕ ರಾಜ್ಯದಲ್ಲಿ ಸೇರಬೇಕಾದ ಬಳ್ಳಾರಿ ಜಿಲ್ಲೆಯ ನಕ್ಷೆಯನ್ನು ನೀಡಿದಾಗ ಫಜಲ್ ಅಲಿಯವರು ಗಡಿ ನಿರ್ಧಾರಕ್ಕೆ ಪ್ರತ್ಯೇಕ ಸಮಿತಿಯೊಂದಿದ್ದು ನಕ್ಷೆಯನ್ನು

ಅವರಿಗೆ ನೀಡಬಹುದೆಂಬ ಸಲಹೆ ನೀಡಿದರು.[೧೫] "ಸೆಪ್ಟಂಬರ್ ೯ರಂದು ರಾ.ಪು. ಆಯೋಗದ ಸದಸ್ಯರು ಬಳ್ಳಾರಿಗೆ ಭೇಟಿ ನೀಡಿದಾಗ ಆಲೂರು, ಆದವಾನಿ ಮತ್ತು ರಾಯದುರ್ಗ ತಾಲೂಕುಗಳ ಕನ್ನಡಿಗರ ಶಿಷ್ಯಮಂಡಳವೊಂದು ಆಯೋಗಕ್ಕೆ ಮನವಿಯನ್ನು ಸಲ್ಲಿಸಿ, ತಮ್ಮನ್ನು ಕರ್ನಾಟಕಕ್ಕೆ ಸೇರಿಸುವಂತೆ ಕೋರಿದರು. ಆ ಮೂರು ತಾಲ್ಲೂಕುಗಳ ಸುಮಾರು ೩೦ಕ್ಕೂ ಹೆಚ್ಚು ಪಂಚಾಯತಿ ಬೋರ್ಡ್ ಸದಸ್ಯರು ಶಿಷ್ಯಮಂಡಳದಲ್ಲಿದ್ದರು. ಅವರೆಲ್ಲರ ಪರವಾಗಿ ಕೋ. ಚೆನ್ನಬಸಪ್ಪನವರು ಮನವಿಯನ್ನು ಸಲ್ಲಿಸಿದರು. ಈ ಮಧ್ಯೆ ರಾಜ್ಯ ಪುನರ್ ವಿಂಗಡನಾ ಆಯೋಗವು ಮೈಸೂರು ಸಂಸ್ಥಾನಕ್ಕೆ ಹೋದಾಗ ಅಲ್ಲಿಯ ಕಾಂಗ್ರೆಸ್ ಕಮಿಟಿಯ ಮಧ್ಯದಲ್ಲಿದ್ದ ವೈಮನಸ್ಸನ್ನು ತಿಳಿದುಕೊಂಡರು. ಕೊನೆಗೆ ೧೦-೧೦-೧೯೫೫ರಂದು ಫಜಲ್ ಅಲಿ ನೇತೃತ್ವದ ರಾಜ್ಯ ಪುನರ್ ವಿಂಗಡನಾ ಆಯೋಗವು ಕೇಂದ್ರ ಸರ್ಕಾರಕ್ಕೆ ತನ್ನ ವರದಿಯನ್ನು ಸಲ್ಲಿಸಿತು. ಈ ವರದಿಯಲ್ಲಿ "ಸದ್ಯದ ಮೈಸೂರು ರಾಜ್ಯದಲ್ಲಿನ ಬಳ್ಳಾರಿ, ಹೊಸಪೇಟೆ, ಸಿರುಗುಪ್ಪ ತಾಲ್ಲೂಕುಗಳು ಮತ್ತು ತುಂಗಭದ್ರಾ ಆಣೆಕಟ್ಟು ಹಾಗೂ ಎಂಜಿನಿಯರಿಂಗ್ ಕಾರ್ಯ ನಡೆಯುತ್ತಿರುವ ಮಲ್ಲಾಪುರಂ ಸಬ್ ತಾಲೂಕು ಇವುಗಳನ್ನು ಬಿಟ್ಟು ಉಳಿದೆಲ್ಲವು ಮೈಸೂರು ರಾಜ್ಯಕ್ಕೆ ಸೇರತಕ್ಕದ್ದು"[೧೬] ಎಂದು ಸೂಚಿಸಿತು. ಇದರಿಂದ ಬಳ್ಳಾರಿ ಜಿಲ್ಲೆಯ ಕನ್ನಡಿಗರಿಗೆ ಅಘಾತವಾಯಿತು. ಅದಕ್ಕಾಗಿ ರಾಜ್ಯ ಪುನರ್ ವಿಂಗಡನಾ ಆಯೋಗದ ವರದಿಯನ್ನು ತಿರಸ್ಕರಿಸುವ ಅಥವಾ ಸ್ವೀಕರಿಸುವ ಮತ್ತು ತಿದ್ದುಪಡಿ ಮಾಡುವ ಅಧಿಕಾರ. ಅದನ್ನು ನೇಮಿಸಿದ ಕೇಂದ್ರ ಸರ್ಕಾರಕ್ಕೆ ಇರುವುದರಿಂದ ಅದನ್ನು ಎಚ್ಚರಿಸುವಂತಹ ಹೋರಾಟಗಳನ್ನು ರೂಪಿಸಲು ಹಳ್ಳಿಕೇರಿ ಗುದ್ಲೆಪ್ಪ, ಶಾಂತಪ್ಪಣ್ಣ, ಎಳಮಲಿ, ಸಿದ್ದಪ್ಪ ಹೊಸಮನಿ, ವೈ. ಮಹಾಬಲೇಶ್ವರಪ್ಪ ಇತರ ನಾಯಕರುಗಳೆಲ್ಲಾ ಖಂಡಿಸಿದರು. ಟಿ. ಸುಬ್ರಮಣ್ಯಂ, ಅಬ್ದುಲ್ ರಜಾಕ್‌ಸಾಬ್, ಎಂ. ರಾಘವೇಂದ್ರರಾವ್, ಗಡಿಗಿ ಮರಿಸ್ವಾಮಪ್ಪ, ಎನ್. ಎಂ. ಕೊಟ್ರಬಸಯ್ಯ, ಎಸ್.ಎಂ. ಕೊಟ್ರಯ್ಯ, ಕೆ. ಸುಬ್ಬಣ್ಣ, ಬಿ. ಅನಂತಾಚಾರ್ಯ, ಕೋ. ಚೆ ಮುಂತಾದವರು ಸೇರಿ ಬಳ್ಳಾರಿ ಜಿಲ್ಲಾ ಕ್ರಿಯಾಸಮಿತಿ ಮತ್ತು ಅಖಿಲ ಕರ್ನಾಟಕ ರಾಜ್ಯ ನಿರ್ಮಾಣ ಪರಿಷತ್ತು (ಅ.ಕ.ರಾ. ನಿ ಪರಿಷತ್ತು)ಗಳ ಮೂಲಕ ಮನವಿಗಳನ್ನು ಸಿದ್ಧ ಪಡಿಸುವುದರಲ್ಲಿ ಪ್ರಮುಖ ಪಾತ್ರ ವಹಿಸಿದರು.

ಈ ಮಧ್ಯೆ 'ಬಳ್ಳಾರಿ ಜಿಲ್ಲಾ ಕರ್ನಾಟಕ ಕ್ರಿಯಾಸಮಿತಿಯ ಕಛೇರಿಯಲ್ಲಿ ಪ್ರಮುಖರೆಲ್ಲಾ ಸೇರಿ ಮುಂದೇನು?.... ಎಂದು ಚಿಂತಿಸತೊಡಗಿದರು. ಅಲ್ಲಿದ್ದವರೊಬ್ಬರು. 'ಅಲ್ಲೀಪುರದ ತಾತನವರನ್ನು ಕೇಳಿ ನೋಡೋಣ' ಎಂದಾಗ ಕೋ. ಚೆ ಮತ್ತು ಇತರರು ಅಲ್ಲೀಪುರದ ಎರ್ರಿಸ್ವಾಮಿ ತಾತನವರನ್ನು ಕಂಡು ಕೇಳಿದಾಗ ತ್ರಿಮೂರ್ತಿಗಳು ಹೇಳಿದರೂ ಬಳ್ಳಾರಿ ಮೈಸೂರು ಬಿಟ್ಟು ಎಲ್ಲಿಗೂ ಹೋಗಲ್ಲ ವಕೀಲರೇ ಎಂದು ಭವಿಷ್ಯ ನುಡಿದರು. ಆದರೆ ನಿಮ್ಮ ಕೆಲಸವನ್ನು ನೀವು ಮಾಡಿ ಎಂದು ಸೂಚನೆ ನೀಡಿದರು.

ಅಕರಾನಿಯ ಅಧ್ಯಕ್ಷರಾಗಿದ್ದ ಅಳವಂಡಿ ಶಿವಮೂರ್ತಿ ಸ್ವಾಮಿಗಳು 'ದಿನಾಂಕ ೧೬-೧೦-೧೯೫೫ರಂದು ಹುಬ್ಬಳ್ಳಿ ಗಿರೀಶಾಶ್ರಮಗಳಲ್ಲಿ ಒಂದು ಸರ್ವಪಕ್ಷಗಳ ಪ್ರಾತಿನಿಧಿಕ ಸಭೆಯನ್ನು

ಕರೆದರು. ಆ ಒಂದು ಸಭೆಗೆ ಕೋ.ಚೆಯವರು ಭಾಗವಹಿಸಿ ರಾ.ಪು. ಆಯೋಗ ಬಳ್ಳಾರಿಯ ಬಗ್ಗೆ ವರದಿಯನ್ನು ಚರ್ಚಿಸಿ ಮುಂದೆ ಕೈಗೊಳ್ಳಬೇಕಾದ ಕಾರ್ಯವನ್ನು ರೂಪಿಸುವುದರಲ್ಲಿ ನೆರವಾದರು. ಆರು ಗಂಟೆಗಳ ಕಾಲ ಸುಧೀರ್ಘ ಚರ್ಚೆಯ ನಂತರ ಶಾಂತಿಯುತ ಅಹಿಂಸಾತ್ಮಕ ಸತ್ಯಾಗ್ರಹವನ್ನು ಪ್ರಾರಂಭಿಸುವುದು, ಆ ಚಳವಳಿಯನ್ನು ನಡೆಸುವ ಸರ್ವಾಧಿಕಾರವನ್ನು ಅಳವಂಡಿ ಶಿವಮೂರ್ತಿ ಸ್ವಾಮಿಗಳಿಗೆ ವಹಿಸಿಕೊಡುವುದಾಗಿ ನಿರ್ದರಿಸಲಾಯಿತು.

ದಿನಾಂಕ ೧೫-೧೧-೧೯೫೫ರ ಒಳಗಾಗಿ ಕೇಂದ್ರ ಸರ್ಕಾರ ಬಳ್ಳಾರಿಯನ್ನು ಕರ್ನಾಟಕದಲ್ಲಿಯೇ ಉಳಿಸುವುದಾಗಿ ಘೋಷಿಸದಿದ್ದರೆ ದಿನಾಂಕ ೧೬-೧೧-೧೯೫೫ರಿಂದ ತುಂಗಭದ್ರಾ ನೀರು ಸತ್ಯಾಗ್ರಹವನ್ನು ಹೂಡುವುದಾಗಿ ಸರ್ವಾನುಮತದಿಂದ ತೀರ್ಮಾನಿಸಲಾಯಿತು. ಕೇಂದ್ರ ಸರ್ಕಾರಕ್ಕೆ ನೀಡಿದ ಗಡುವು ಹತ್ತಿರ ಬರುತ್ತಿರುವಾಗಲೇ ಅಂದರೆ "ದಿನಾಂಕ ೧೦-೧೧-೧೯೫೫ರಂದು ಅ.ಕ.ರಾ.ನಿ. ಪರಿಷತ್ತು ಹಂಪಿಯಲ್ಲಿ ಒಂದು ಬಹಿರಂಗ ಅಧಿವೇಶನ ಕರೆದು ದಿನಾಂಕ ೧೬-೧೧-೧೯೫೫ರಿಂದ ಶಾಂತಿಯುತ ಅಹಿಂಸಾತ್ಮಕ ವೈಯಕ್ತಿಕ ಸತ್ಯಾಗ್ರಹ ಹೂಡುವುದಾಗಿ ತೀರ್ಮಾನಿಸಿತು."[೭೬] ಈ ಸತ್ಯಾಗ್ರಹ ಕುರಿತು ಪರ ಮತ್ತು ವಿರೋಧ ವಾದಗಳು ನಡೆದವು. ಹೊಸಪೇಟೆಯ "ಶ್ರೀ ಮತ್ತಿಹಳ್ಳಿ ರಾಘವೇಂದ್ರ ರಾವ್ ಎಂಬ 'ಪ್ಲೀಡರ್' ಮತ್ತು 'ಸಂಯುಕ್ತ ಕ್ರನಾಟಕ' ವರದಿಗಾರರು ಸತ್ಯಾಗ್ರಹ ಸಮರ ಅನಗತ್ಯ ಎಂಬುದಾಗಿ ಹೊಸಪೇಟೆ ಸಂಯುಕ್ತ ಕರ್ನಾಟಕ ಪತ್ರಿಕೆ ವರದಿಗಾರರು ಕರ್ನಾಟಕ ಕ್ರಿಯಾಸಮಿತಿಯ ಹೆಸರಿನಲ್ಲಿ ಒಂದು ಹೇಳಿಕೆಯನ್ನು ಪ್ರಕಟಿಸಿದರು." ಅವರ ಹೇಳಿಕೆ ಕ್ರಿಯಾ ಸಮಿತಿಯ ಅಧಿಕೃತ ಹೇಳಿಕೆ ಅಲ್ಲವೆಂದು ಖಂಡನಾ ಪ್ರತಿ ಹೇಳಿಕೆಯನ್ನು ಕೇಂದ್ರ ಕ್ರಿಯಾಸಮಿತಿಯಿಂದ ಕೋ.ಚೆ ಪ್ರಕಟಿಸಿದರು.

ವೈಯಕ್ತಿಕ ಸತ್ಯಾಗ್ರಹದಲ್ಲಿ ತುಂಗಾಭದ್ರಾ ನದಿ ಸತ್ಯಾಗ್ರಹ ಪ್ರಮುಖವಾಗಿದೆ. ಈ ಸತ್ಯಾಗ್ರಹದಲ್ಲಿ ಕೋ. ಚೆಯವರು ಸಮಿತಿಯ ಸಂಚಾಲಕರಾಗಿ ಕಾರ್ಯ ನಿರ್ವಹಿಸುತ್ತಿದ್ದರು. ಇದರ ಕಾರ್ಯದಲ್ಲಿ ಪ್ರತಿದಿನ ನೂರಾ ಒಂದು ಜನ ಸತ್ಯಾಗ್ರಹ ಮಾಡುವುದು ಪ್ರತಿಯೊಬ್ಬರೂ ತುಂಗಭದ್ರಾ ಕಾಲುವೆಯಿಂದ ಒಂದೊಂದು ಬಿಂದಿಗೆ ನೀರನ್ನು ತುಂಬಿಕೊಂಡು ಕರ್ನಾಟಕದ ಜಮೀನಿಗೆ ಹಾಕುವುದು ಸತ್ಯಾಗ್ರಹದಲ್ಲಿ ಪ್ರತಿದಿನ ಪಾಲ್ಗೊಳ್ಳುವ ೧೦೧ ಜನರ ಹೆಸರನ್ನು ಹಿಂದಿನ ದಿನವೇ ಕಲೆಕ್ಟರ್‌ಗೆ ಒದಗಿಸಲಾಗುತ್ತಿತ್ತು. ಸುಮಾರು ೨೯-೩೦ದಿನ ಸತ್ಯಾಗ್ರಹ ನಡೆದು ೩೦೦೦ ದಿಂದ ೩೧೦೦ ಜನ ಬಂಧಿತರಾದರು. ಸತ್ಯಾಗ್ರಹ ನಡೆಸುವ ಸಮಯದಲ್ಲಿ ಲಿಂಗಮ್ಮವ್ವ ಎಂಬ ಮುದುಕಿಯೊಬ್ಬಳು ಕೋ. ಚೆಯವರ ಹತ್ತಿರ ಬಂದು "ಬಳ್ಳಾರೀನ ಆಂಧ್ರಕ್ಕೆ ಸೇರಿಸ್ತಾರಂತೆ, ನಿಜವೇನೋ ಅಪ್ಪಾ, ಅಂತ ಕೇಳಿದಳು. ಹೌದಮ್ಮ, ವರದಿ ಹಂಗಂತ ಬಂದಿದೆ"[೭೭] ಎಂದಾಗ, ಮುದುಕಿ ಹಂಗಾಗಬಾರ್ದು ಅದನ್ನು ತಪ್ಪಿಸೋಕೆ ಏನು ಮಾಡಬೇಕು? ಎಂದು ಆಕೆ ಕೇಳಿದಳು. ಆಗ ಕೋ. ಚೆಯವರು ನೀನೇನು ಮಾಡ್ತೀಯಾ ಹೋಗಿ ಯರ್ರಿತಾತನನ್ನು ಪ್ರಾರ್ಥನೆ ಮಾಡು ಎಂದು ಸಂತೈಸಿ ಕಳಿಸಿದರು.

ಈ ಮಧ್ಯೆ ಚೆಳ್ಳಗುರ್ಕಿ ಗ್ರಾಮದ ಯುವಕರು ಬಸ್ ಚಳವಳಿಯನ್ನು ಮಾಡತೊಡಗಿದರು.

ಅಂದರೆ ಬಸ್ಸುಗಳಲ್ಲಿ ಕನ್ನಡ ನಾಮಫಲಕವನ್ನು ಹಾಕಿಕೊಂಡು ಹೋಗಬೇಕೆಂದು ಚಳವಳಿಯನ್ನು ನಡೆಸತೊಡಗಿದರು. ಆದರೆ ಚಳವಳಿಯು ಹಿಂಸಾತ್ಮಕಕ್ಕೆ ತಿರುಗಿದಾಗ ಕೋ. ಚೆ ಮತ್ತು ಇತರ ಮುಖಂಡರು ಯುವಕರನ್ನು ಸಮಾಧಾನಪಡಿಸಿ, ಕನ್ನಡ ಗಡಿದಾಟುವವರೆಗೆ ಕನ್ನಡ ನಾಮಫಲಕವನ್ನು ಬಸ್ಸಿನಲ್ಲಿ ಹಾಕುವಂತೆ ಮಾಡಿದರು. ಈ ರೀತಿ ಚಳವಳಿಯು ಉಗ್ರ ಸ್ವರೂಪ ಪಡೆಯುವ ಮುಂಚೆಯೇ ಕೇಂದ್ರ ಸರ್ಕಾರವು ಮಿಶ್ರಾ ತೀರ್ಪಿನಂತೆ ಬಳ್ಳಾರಿಯು ಮುಗಿದ ಹೋದ ಅಧ್ಯಾಯ ಎಂದು ಮಿಶ್ರಾ ತೀರ್ಪನ್ನು ಅಂತಿಮ ಗೊಳಿಸಿತ್ತು.

ಯಾವಾಗ ರಾ.ಪು. ಆಯೋಗದ ವರದಿ ಹೊರಬಿತ್ತೋ ಆಗ ಬಳ್ಳಾರಿ ಕರ್ನಾಟಕ ಕ್ರಿಯಾ ಸಮಿತಿ, ಪೂರ್ವ ಕರ್ನಾಟಕ ಏಕೀಕರಣ ಸಂಘ ಕಾರ್ಯತತ್ಪರವಾಗಿ ದೆಹಲಿಗೆ ಒಂದು ನಿಯೋಗವನ್ನು ಕೊಂಡೊಯ್ಯಲಾಯಿತು. ಅವರ ಆಸಕ್ತಿ ಇದ್ದುದು ಸರ್ಕಾರದ ಅಧಿಕೃತ ಜನಗಣತಿಯ ಅಂಕೆ ಸಂಖ್ಯೆಯಿಂದಲೇ ಆಲೂರು, ಆದವಾನಿ, ರಾಯದುರ್ಗ ತಾಲೂಕುಗಳಲ್ಲಿ ಶೇ. ೭೦-೮೦ರಷ್ಟು ಕನ್ನಡಿಗರಿದ್ದ ಪ್ರದೇಶವನ್ನೂ, ಮಡಕಶಿರಾ, ಹಿಂದೂಪುರ, ಕಲ್ಯಾಣದುರ್ಗ ತಾಲೂಕುಗಳನ್ನು ಕರ್ನಾಟಕದಲ್ಲಿ ಸೇರಿಸಬೇಕೆಂದು ವೈ. ಗಾದಿಲಿಂಗನಗೌಡರು, ಕೆ.ಎಸ್. ರಾಘವಾಚಾರ್ಯರು (ಮಾಸ್ತಿ ವೆಂಕಟೇಶ ಐಯ್ಯಂಗಾರರ ಷಡ್ಡಕರು) ಅಳವಂಡಿ ಶಿವಮೂರ್ತಿಸ್ವಾಮಿಗಳು ಮತ್ತು ಕೋ. ಚೆಯವರು ಹೋಗಿ ಮನವಿಯನ್ನು ಸಲ್ಲಿಸಿದರು. ಮನವಿಯನ್ನು ಸ್ವೀಕರಿಸಿದ ಗೃಹಸಚಿವ ಗೋವಿಂದ ವಲ್ಲಭ ಪಂತರು ಸಂಬಂಧ ಪಟ್ಟ ಪ್ರದೇಶದ ಲೋಕಸಭಾ ಸದಸ್ಯರು ಒಮ್ಮತದ ಒಪ್ಪಂದಕ್ಕೆ ಬಂದು ಯಾವ ಪ್ರದೇಶಗಳನ್ನು ಕರ್ನಾಟಕದಲ್ಲಿ ಸೇರಿಸಬೇಕೆಂದು ಸೂಚಿಸಿದರೂ ಅದನ್ನು ಸರ್ಕಾರ ಅಂಗೀಕರಿಸಿ ರಾ.ಪು. ವರದಿಯಲ್ಲಿ ಸೇರಿಸಲಾಗುವುದು. ಎಂದು ಭರವಸೆ ಕೊಟ್ಟರು. ಹಾಗೆಯೇ ಆಂಧ್ರದ ಪ್ರತಿನಿಧಿಯಾಗಿ ಲೋಕಸಭಾ ಸದಸ್ಯರು ಬಳ್ಳಾರಿ ಜಿಲ್ಲೆಯ ಪೂರ್ವ ತಾಲೂಕುಗಳನ್ನು ಕರ್ನಾಟಕದಲ್ಲಿ ಸೇರಿಸುವಂತೆ ಅಭಿಪ್ರಾಯ ಪಟ್ಟರಾದರೂ, ಆಂಧ್ರ ಒಂದು ಷರತ್ತನ್ನು ಹಾಕಿತು. ಆಂಧ್ರದಲ್ಲಿರುವ ಕನ್ನಡ ಪ್ರದೇಶಗಳನ್ನು ಮಡಕಶಿರಾ ತಾಲೂಕು ಕರ್ನಾಟಕಕ್ಕೆ ತೆಗೆದುಕೊಳ್ಳಿ ಅದರ ಬದಲು ನಮಗೆ ಮೈಸೂರಿನಲ್ಲಿರುವ ಪಾವಗಡ ತಾಲೂಕು ಮಾತ್ರ ಪ್ರತಿಯಾಗಿ ಕೊಡಿ ಎಂದು ವಾದಿಸಿತು. ಮಡಕಶಿರಾದಲ್ಲಿ ಕನ್ನಡಿಗರು ಶೇ. ೭೦-೭೫ರಷ್ಟು ಇರುವಂತೆ ಪಾವಗಡದಲ್ಲಿ ಶೇ ೭೦-೭೫ ಆಂಧ್ರರಿದ್ದಾರೆ ಎಂದು ವಾದಿಸಿದರು. ಇದು ನ್ಯಾಯ ಸಮ್ಮತವಾಗಿದ್ದರೂ ಈ ತೀರ್ಮಾನ ಕೈಗೊಳ್ಳುವ ಅಧಿಕಾರ ಮಾತ್ರ ನಿಜಲಿಂಗಪ್ಪನವರಿಗೆ ನೀಡಲಾಗಿತ್ತು. ಆದರೆ ನಿಜಲಿಂಗಪ್ಪನವರು ಮಾತ್ರ ಕರ್ನಾಟಕಕ್ಕೆ ಸೇರಿದ ಯಾವ ಪ್ರದೇಶವನ್ನು ಬಿಟ್ಟುಕೊಡಲು ಸಿದ್ಧರಿರಲಿಲ್ಲ. ಈ ಮಧ್ಯೆ ಬಳ್ಳಾರಿ ಜಿಲ್ಲೆಯನ್ನು ಮೈಸೂರ ಶಾಸನ ಸಭೆಯಲ್ಲಿ ಪ್ರತಿನಿಧಿಸುತ್ತಿದ್ದ ಮುಂಡ್ಲೂರು ಗಂಗಪ್ಪನವರು ತಮ್ಮ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ ನಂತರ ೧೦-೬-೧೯೫೬ರಂದು ನಡೆದ ಉಪಚುನಾವಣೆಯಲ್ಲಿ ಬಳ್ಳಾರಿಯ ಭವಿಷ್ಯವನ್ನು ನಿರ್ಧರಿಸಲು ಸಹಕಾರಿಯಾಯಿತು. ಆಂಧ್ರದ ಪರವಾಗಿರುವ ತಾವು ಗೆದ್ದರೆ ಬಳ್ಳಾರಿ ಜಿಲ್ಲೆಯು ಆಂಧ್ರಕ್ಕೆ ಸೇರಬೇಕೆಂದು ಸೋತರೆ ಕರ್ನಾಟಕಕ್ಕೆ ಸೇರಬಹುದಾಗಿಯೂ ಎಂ. ಗಂಗಪ್ಪ ಘೋಷಿಸಿದರು. ಆಂಧ್ರ ಪರವಾದಿಗಳೆಲ್ಲಾ ಎಂ. ಗಂಗಪ್ಪನವರನ್ನು ಬೆಂಬಲಿಸಿದರು. ಆದರೆ ಆಂಧ್ರದ ಪರ

ಕಾಂಗ್ರೆಸ್ ಸಮಿತಿಯಾಗಲೀ ಅಥವಾ ಮೈಸೂರು ಪ್ರದೇಶ ಕಾಂಗ್ರೆಸ್ ಸಮಿತಿಯಾಗಲೀ ಕಾಂಗ್ರೆಸ್ ಅಭ್ಯರ್ಥಿಯನ್ನು ಸ್ಪರ್ಧೆಗೆ ನಿಲ್ಲಿಸಲು ಮುಂದಾಗಲಿಲ್ಲ. ಆಗ ಕನ್ನಡಿಗರು ತಮ್ಮ ಪರವಾಗಿ ಹರಗಿನಡೋಣಿ ಸಣ್ಣ ಬಸವನಗೌಡರನ್ನು ಸ್ಪರ್ಧೆಗೆ ನಿಲ್ಲಿಸಿದರು. ಈ ಚುನಾವಣ ಪ್ರಚಾರಕ್ಕೆ ಗುಲ್ಬರ್ಗಾದ ಸರ್ದಾರ್ ಶರಣಗೌಡ ಇನಾಂದಾರ್, ಯಜಮಾನ ಶಾಂತರುದ್ರಪ್ಪ, ಕೋ. ಚೆನ್ನಬಸಪ್ಪ. ಅಳವಂಡಿ ಶಿವಮೂರ್ತಿ ಸ್ವಾಮಿ ಮುಂತಾದವರು ಕನ್ನಡಪರ ಅಭ್ಯರ್ಥಿಯ ಪರವಾಗಿ ಪ್ರಚಾರ ನಡೆಸಿದರು. ಚುನಾವಣೆಯಲ್ಲಿ ಕನ್ನಡಪರ ಅಭ್ಯಾರ್ಥಿಯಾದ ಸಣ್ಣಬಸವನಗೌಡರು ಆಧಿಕ ಮತಗಳಿಂದ ಜಯಗಳಿಸಿದರು ಇದರಿಂದ ಆಂಧ್ರಪರವಾದಿಗಳು ತಮ್ಮ ವಿರೋಧವನ್ನು ನಿಲ್ಲಿಸಬೇಕಾಯಿತು.



ಈ ರೀತಿಯಾಗಿ ಹರಿದು ಹಂಚಿಹೋಗಿದ್ದ ಕನ್ನಡ ಪ್ರದೇಶಗಳನ್ನು ಒಂದು ಮಾಡಲು ಶ್ರಮಿಸಿದ ಕನ್ನಡ ಭಾಷಾಪ್ರೇಮಿಗಳಲ್ಲಿ ಒಬ್ಬರಾಗಿ ಬಳ್ಳಾರಿ ಜಿಲ್ಲೆಯ ಕ್ರಿಯಾಸಮಿತಿಯ ಕಾರ್ಯದರ್ಶಿಯಾಗಿ, ಪೂರ್ವ ಕನ್ನಡ ಗಡಿ ಸಮಿತಿಯ ಕಾರ್ಯದರ್ಶಿಗಳಾಗಿ, ತುಂಗಭದ್ರ ನದಿ–ಸತ್ಯಗ್ರಹದ ಸಂಚಾಲಕರಾಗಿ, ದೆಹಲಿಗೆ ಹೋಗುವ ನಿಯೋಗಗಳಿಗೆ ಮುಂದಾಳುಗಳಾಗಿ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕದೊಳಗೆ ಸೇರಿಸಲು ಪ್ರಯತ್ನಸಿದ್ದವರು ಕೋ. ಚೆನ್ನಬಸಪ್ಪನವರು.

**ಸೌಹಾರ್ದ ಮೂಡಿಸಿದ ಕನ್ನಡ ಸಾಹಿತ್ಯ ಸಮ್ಮೇಳನ ೧೯೫೮**

೧೯೫೬ರಲ್ಲಿ ಕರ್ನಾಟಕ ರಾಜ್ಯ ರಚನೆ ಆದ ಮೇಲೆ ಬಳ್ಳಾರಿಯಲ್ಲಿ ಬಹುತೇಕ ಶಾಂತಿ ನೆಲೆಸಿತು. ಬೆಳಗಾವಿಯಲ್ಲಿ ಕಂಡಂತಹ ಅಶಾಂತಿ ಕಂಡುಬರಲಿಲ್ಲ. ಆದರೂ ಹಿಂದೆ ನಡೆದಿದ್ದ ಕಹಿವಾತಾವರಣದಿಂದಾಗಿ ಆಂಧ್ರ–ಕನ್ನಡಿಗರಲ್ಲಿ ಸಂಪೂರ್ಣ ಪ್ರೇಮ ವಿಶ್ವಾಸಗಳು ಮತ್ತೆ ನೆಲೆಸಿರಲಿಲ್ಲ. ಇಬ್ಬರಿಗೂ ಕಚ್ಚಾಟ ಸಾಕಾಗಿತ್ತು. ಮತ್ತೆ ಮಧುರ ಮೈತ್ರಿ ಬೇಕಾಗಿತ್ತು. ಹಾಗಾಗಿ ಇಬ್ಬರನ್ನು ಒಂದೇ ವೇದಿಕೆಯ ಮೇಲೆ ಕೂಡಿಸುವ ಅಗತ್ಯವಿತ್ತು. ಆದ್ದರಿಂದ ೧೯೫೮ರಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಏರ್ಪಾಡು ಮಾಡಲಾಯಿತು. ಅದರ ಸ್ವಾಗತಾಧ್ಯಕ್ಷರು ವೈ. ನಾಗೇಶ ಶಾಸ್ತ್ರಿ ಅದರ ಕಾರ್ಯದರ್ಶಿಯಾಗಿ ಕೋ. ಚೆ ಯವರು ನೇಮಕಗೊಂಡಿದ್ದರು. ಇದರಲ್ಲಿ ಉಪಾಧ್ಯಕ್ಷರನ್ನಾಗಿ ಮೂವರು ಆಂಧ್ರ ಸಮಿತಿಯ ಮುಂದಾಳುಗಳನ್ನು ಮಾಡಿಕೊಳ್ಳಲಾಯಿತು. ಆ ಸಮ್ಮೇಳನ ಆಗಬಾರದೆಂದು ಕೆಲವರು ಕನ್ನಡಿಗರೇ ಪತ್ರಿಕಾ ಪ್ರಕಟಣೆ ಕೊಟ್ಟು ವಿರೋಧಿಸಿದರು. ಆದರೆ ಕೋ. ಚೆಯವರು ಇದಕ್ಕೆ ತಲೆಕೆಡಿಸಿಕೊಳ್ಳದೆ ಸಮ್ಮೇಳನವನ್ನು ಯಶಸ್ವಿಯಾಗಿ ನೆರವೇರಿಸಲು ಸಹಕಾರಿಯಾದರು.

ಉದ್ಘಾಟನಾ ಸಮಾರಂಭ ಮುಗಿದ ಮೇಲೆ ಕೋ. ಚೆಯವರು ವಂದನಾರ್ಪಣೆ ಮಾಡುತ್ತಾ "ಈ ಸಮ್ಮೇಳನ ಮುಗಿದ ಮೇಲೆ ಈ ಭವ್ಯ ಮಂಟಪ ಕಟ್ಟಲು ಹೂಡಿದ ಗೂಟಗಳು ಇಲ್ಲಿರುವುದಿಲ್ಲ. ಅವುಗಳನ್ನು ಹೂಳಿದ ಗುರುತು ಉಳಿಯುವುದಿಲ್ಲ. ಹಾಗಾದರೆ ಈ ಸಮ್ಮೇಳನ ಮಾಡಿ ಸಾಧಿಸಿದ್ದೇನು? ಎಂದು ಕೇಳಬಹುದು. ಅದಕ್ಕೆ ನನ್ನದು ಒಂದು ಉತ್ತರ: ಒಡೆದು ಹೋಗಿದ್ದ ಆಂಧ್ರ–ಕನ್ನಡಿಗರ ಮನಸ್ಸು ಒಂದಾಯಿತು. ದುಡ್ಡು ಕೊಟ್ಟರೆ ಕೆರೆ ಕಟ್ಟಬಹುದು, ಒಡೆದ ಮನಸ್ಸನ್ನು ಒಂದು ಮಾಡಲು ದುಡ್ಡಿನಿಂದ ಆಗದು. ಆದರೆ

ಇಲ್ಲಿ ಸಮ್ಮೇಳನ ಮಾಡಿ ಇಪ್ಪತ್ತು ಸಾವಿರ ರೂಪಾಯಿ ಖರ್ಚುಮಾಡಿ ಆಂಧ್ರದ ಮನಸ್ಸನ್ನು ಗೆದ್ದುಕೊಂಡಿದ್ದೇವೆ. ಅದನ್ನು ಬೆಲೆ ಕಟ್ಟಲು ಯಾರಿಂದಲೂ ಸಾಧ್ಯ...?"[೧೨] ಎಂದು ಹೇಳಿದರು.

ಸಮ್ಮೇಳನಕ್ಕಾಗಿ ಶೇಖರಿಸಿದ ಹಣದಲ್ಲಿ ಎಂಟುಸಾವಿರಗಳ ಉಳಿತಾಯದ ಮೊತ್ತ ದಿಂದ ಬಳ್ಳಾರಿ ಸಾಹಿತ್ಯ ಅಕಾಡೆಮಿಯನ್ನು ಕೋ. ಚೆ ಯವರು ಸ್ಥಾಪಿಸಿದರು. ಆದರೆ ೧೯೬೫ರಲ್ಲಿ ಕೋ. ಚೆಯವರು ಜಿಲ್ಲಾ ನ್ಯಾಯಾಧೀಶರಾಗಿ ನೇಮಕಗೊಂಡಬಳಿಕ ಬಳ್ಳಾರಿಯನ್ನು ಬಿಡಬೇಕಾಯಿತು. ಅದರಿಂದ ಅಕಾಡೆಮಿ ಕೆಲಸವನ್ನು ಯಾರೂ ಮುಂದುವರೆಸಿಕೊಂಡು ಹೋಗಲಿಲ್ಲ.

ಕೋ. ಚೆಯವರು ಭಾಷಾವಾರು ಪ್ರಾಂತ್ಯ ರಚನೆಯಾದ ಮೇಲೆ ಭಾಷಾ ದ್ವೇಷದಿಂದ ಜನ ಬೆಳಗಾವಿಯಲ್ಲಿ ಹೊಡೆದಾಡುವ ಹಾಗೆ ಬಳ್ಳಾರಿಯ ಜನರನ್ನು ಮಾಡದೆ ಸ್ನೇಹ ಪ್ರೀತಿಯಿಂದ ಸಾಹಿತ್ಯ ಸಮ್ಮೇಳನವನ್ನು ಆಯೋಜಿಸಿದ್ದು ತುಂಬಾ ಉತ್ತಮ ಕಾರ್ಯವೆಂದು ಹೇಳಬಹುದು.

**ಅಡಿ ಟಿಪ್ಪಣಿಗಳು**

೧. ಚಂದ್ರಶೇಖರ್ ಎಸ್., ಏಕೀಕರಣ ಒಂದು ಕಥನ, ಪ್ರಕಾಶಕರು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೫, ಪುಟ-೩

೨. ಅದೇ-ಪುಟ-೮

೩. ಅದೇ-ಪುಟ-೯

೪. ಗೋವಿಂದರಾಜು ಸಿ.ಆರ್., ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು, ಪ್ರಕಾಶನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫, ಪುಟ-೩

೫. ಅದೇ-ಪುಟ-೪

೬. ಸತ್ಯವತಿ ಎನ್. ಕರ್ನಾಟಕ ಏಕೀಕರಣದಲ್ಲಿ ಬಳ್ಳಾರಿ ಜಿಲ್ಲೆ, (ಎಂ.ಫಿಲ್ ನಿಬಂಧ, ಅಪ್ರಕಟಿತ) ಕನ್ನಡ ವಿ.ವಿ.ಹಂಪಿ, ೨೦೦೭, ಪುಟ -೯

೭. ಮಹಾಬಲೇಶ್ವರಪ್ಪ ಬಿ.ಸಿ., ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು (೧೯೪೬-೧೯೫೬) ಪ್ರಸಾರಂಗ, ಗು.ವಿ.ವಿ. ೧೯೯೭, ಪುಟ ೧೩೩

೮. ಚೆನ್ನಬಸಪ್ಪ ಕೋ. ಕರ್ನಾಟಕ ಏಕೀಕರಣ; ಬಳ್ಳಾರಿ ಜಿಲ್ಲೆಯ ಹಿನ್ನಲೆಯಲ್ಲಿ, ಪ್ರಕಾಶಕರು, ಲೋಹಿಯಾ ಪ್ರಕಾಶನ, ಬಳ್ಳಾರಿ ೨೦೦೭, ಪುಟ ೫

೯. ಬರಗೂರು ರಾಮಚಂದ್ರಪ್ಪ (ಪ್ರಸಂ.) ಕರ್ನಾಟಕ ಸಂಗಾತಿ, ಪ್ರಕಾಶಕರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨, ಪುಟ ೧೭೪

೧೦. ಸತ್ಯವತಿ ಎನ್. ಕರ್ನಾಟಕ ಏಕೀಕರಣದಲ್ಲಿ ಬಳ್ಳಾರಿ ಜಿಲ್ಲೆ, (ಎಂ.ಫಿಲ್ ನಿಬಂಧ ಅಪ್ರಕಟಿತ) ಕನ್ನಡ ವಿ.ವಿ. ಹಂಪಿ, ೨೦೦೭, ಪುಟ ೧೦

೧೧. ಗೋಪಾಲ್‌ರಾವ್ ಎಚ್.ಎಸ್. ಕರ್ನಾಟಕ ಏಕೀಕರಣ ಇತಿಹಾಸ, ಪ್ರಕಾಶಕರು ನವ ಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬, ಪುಟ ೧೬೫

೧೨. ಚೆನ್ನಬಸಪ್ಪ ಕೋ. ಕರ್ನಾಟಕದಲ್ಲಿ ಏಕೀಕರಣ; ಬಳ್ಳಾರಿ ಜಿಲ್ಲೆಯ ಹಿನ್ನಲೆ, ಪ್ರಕಾಶಕರು ಲೋಹಿಯಾ ಪ್ರಕಾಶನ ಬಳ್ಳಾರಿ, ೨೦೦೭, ಪುಟ ೯

೧೩. ಅದೇ-ಪುಟ-೧೧

೧೪. ಅದೇ-ಪುಟ-೧೪

೧೫. ಗೋಪಾಲ್‌ರಾವ್ ಎಚ್.ಎಸ್., ಕರ್ನಾಟಕ ಏಕೀಕರಣ ಇತಿಹಾಸ, ಪ್ರಕಾಶಕರು, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬, ಪುಟ- ೨೨೩

೧೬. ಚೆನ್ನಬಸಪ್ಪ ಕೋ. ಕರ್ನಾಟಕ ಏಕೀಕರಣ; ಬಳ್ಳಾರಿ ಜಿಲ್ಲೆಯ ಹಿನ್ನಲೆ, ಪ್ರಕಾಶಕರು, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೭, ಪುಟ-೧೯

೧೭. ಅದೇ-ಪುಟ-೩೪

೧೮. ಅದೇ-ಪುಟ-೫೪

೧೯. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ, (ಭಾಗ-೧) ಪ್ರಕಾಶಕರು, ಸುರುಚಿ ಪ್ರಕಾಶನ ಮೈಸೂರು, ೧೯೭೩, ಪುಟ-೧೯೪

# ಅಧ್ಯಾಯ ೫

## ನ್ಯಾಯವಾದಿಗಳಾಗಿ ಮತ್ತು ನ್ಯಾಯಾಧೀಶರಾಗಿ ಕೋ. ಚೆನ್ನಬಸಪ್ಪನವರು

# ಅಧ್ಯಾಯ – ೫

# ನ್ಯಾಯವಾದಿಗಳಾಗಿ ಮತ್ತು ನ್ಯಾಯಾಧೀಶರಾಗಿ ಕೋ. ಚೆನ್ನಬಸಪ್ಪನವರು

---

ಸ್ವಾತಂತ್ರ್ಯ ಚಳವಳಿಯಲ್ಲಿ ಬಹುತೇಕ ರಾಷ್ಟ್ರೀಯ ನಾಯಕರಿಂದ ಹಿಡಿದು ಪ್ರಾದೇಶಿಕ ನಾಯಕರವರೆಗೆ ಕಾನೂನು ಪದವೀದರರು ಕಂಡುಬರುತ್ತಾರೆ. ಆದರೆ ಅವರು ಕೇವಲ ಹೋರಾಟಗಾರರಾಗಿ ಕಂಡುಬರುವರೇ ವಿನಃ ಅವರ ವೃತ್ತಿ ಜೀವನವನ್ನು ಕುರಿತಾದ ಅಧ್ಯಾಯಗಳಾಗಿರುವುದು ಬಲು ವಿರಳ.

ಗಾಂಧೀಜಿ, ನೆಹರು, ಸರ್ದಾರ್ ವಲ್ಲಬಾಯಿ ಪಾಟೀಲ್, ಅಂಬೇಡ್ಕರ್ ಮುಂತಾದವರು ವಕೀಲರಾಗಿ ಅಥವಾ ಕಾನೂನು ಪದವಿದರರಾಗಿದ್ದರೂ ಕೂಡ, ಅವರು ಹೆಚ್ಚಾಗಿ ಕಂಡುಬರುವುದು ಹೋರಾಟಗಾರಾಗಿಯೇ ವಿನಃ ಅವರ ವಕೀಲ ಜೀವನ ಕಂಡುಬರುವುದಿಲ್ಲ. ಆ ಕಾರಣದಿಂದ ಕೋ. ಚೆಯವರನ್ನು ಕೇವಲ ಸ್ವಾತಂತ್ರ್ಯ ಹೋರಾಟಗಾರರಾಗಿ, ಏಕೀಕರಣ ಚಳವಳಿಗಾರರಾಗಿ, ಸಾಹಿತಿಗಳಾಗಿ, ಚಿಂತಕರಾಗಿ ನೋಡುವುದರ ಜೊತೆಗೆ ಅವರ ನ್ಯಾಯಾಲಯದ ಜೀವನವನ್ನು ನೋಡುವುದು ಅವಶ್ಯಕವಾಗಿದೆ. ಕೋ. ಚೆಯವರ ಜೀವನದಲ್ಲಿ ನ್ಯಾಯಾಲಯದಲ್ಲಿ ನಡೆದ ಪ್ರಸಂಗಗಳನ್ನು ಅವರ ಅನುಭವಗಳನ್ನು ಇಲ್ಲಿ ಚರ್ಚಿಸಿಲಾಗುತ್ತಿದೆ.

**ಕಾನೂನು ಪದವಿಯ ವ್ಯಾಸಂಗ**

ಕೋ. ಚೆ 'ಚಲೇ ಜಾವ್' ಚಳವಳಿಯಲ್ಲಿ ಭಾಗವಹಿಸಿ ಜೈಲು ಸೇರಿ ಬಂದಿದ್ದರು. ನಂತರ ಗುರಣ್ಣನವರ ಮಾರ್ಗದರ್ಶನದಂತೆ ಬಿ.ಎ. ಅಂತಿಮ ಪರೀಕ್ಷೆ ಬರೆದು ಉತ್ತೀರ್ಣರಾದರು. ನಂತರ ಎಲ್.ಟಿ (ಶಿಕ್ಷಕರ ತರಬೇತಿ) ಮಾಡಬೇಕೆಂದುಕೊಂಡಿದ್ದರು. ಆದರೆ ಈ ವಿಷಯದಲ್ಲಿ ಶ್ರೀಮತಿ ಸರೋಜಮ್ಮ (ಕೋ. ಚೆಯವರ ಪತ್ನಿ) ಅವರು ಬೇಸರಗೊಂಡಿದ್ದಕ್ಕೆ ಕೋ. ಚೆಯವರು ಗುರಣ್ಣನವರ ಹತ್ತಿರ ಬಂದು ಮುಂದಿನ ಓದಿನ ಬಗ್ಗೆ ಕೇಳಿದಾಗ

‘ನೀನು ಕಾನೂನು ಓದಿಬಿಡು’ ಎಂದು ತಿಳಿಸಿದರು. ಆದರೆ ಕೋ. ಚೆಯವರಿಗೆ ‘ಲಾ’ ಓದುವುದಕ್ಕೆ ಆಸಕ್ತಿ ಇರಲಿಲ್ಲ. ಏಕೆಂದರೆ “ಲಾಯರುಗಳೆಂದರೆ ಇದ್ದದ್ದನ್ನು ಇಲ್ಲವೆಂದು ಸಾಧಿಸುವವರು, ಇಲ್ಲದ್ದನ್ನು ಇದೆಯೆಂದು ಸಾಧಿಸುವವರು ಎಂದೇ”[೧] ಭಾವಿಸಿದ್ದರು. ಆದರೆ ಅಬ್ದುಲ್‌ಖಾದರ್ ಸಾಹೇಬ ಎಂಬ ಶಾಸ್ತ್ರಿಯು ನಿನ್ನ ಜಾತಕದಲ್ಲಿ ‘ಲಾ’ ಓದಬೇಕೆಂದು ಬರೆದಿದೆ ಎಂದು ಹೇಳಿ ನೀನು ‘ಲಾ’ ಓದಬೇಕು ಎಂದು ಬಲವಂತ ಪಡಿಸಿದರು. ಆಗ ಕೋ. ಚೆಯವರು ಬೆಳಗಾವಿಗೆ ಹೋಗಿ ೧೯೪೪ನೇ ಜುಲೈ ನಲ್ಲಿ ರಾಜಾ ಲಖಮಗೌಡ ಕಾನೂನು ಕಾಲೇಜಿಗೆ ಸೇರಿಕೊಂಡರು. ಅಲ್ಲಿ ಹೆಚ್.ಸಿ. ಬೋರಯ್ಯ, ವಿ. ಮುನಿಯಪ್ಪ ಎಂಬುವರು ದ್ವಿತೀಯ ವರ್ಷದಲ್ಲಿ ಅಭ್ಯಾಸ ಮಾಡುತ್ತಿದ್ದರು. ಅವರು ಚಿತ್ರದುರ್ಗದವರಾಗಿದ್ದರಿಂದ ಕೋ. ಚೆಯವರು ಅವರನ್ನು ಪರಿಚಯ ಮಾಡಿಕೊಂಡು ಮೊದಲನೇ ವರ್ಷದ ‘ಲಾ’ ಪುಸ್ತಕಗಳನ್ನು ಉಚಿತವಾಗಿ ಪಡೆದರು. ಹಾಗೆಯೇ ಮತ್ತೊಬ್ಬ ಸ್ನೇಹಿತ ಹರಿಹರ ಎಂಬುವರು ಬಹುತೇಕ ಕೋ. ಚೆಯವರಿಗೆ ಆರ್ಥಿಕ ಸಹಾಯವನ್ನು ಮಾಡುತ್ತಿದ್ದರು.

ಹರಿಹರನ ಆರ್ಥಿಕ ಸಹಾಯವು ಅಂದಿನ ಕೋ. ಚೆಯವರ ಕಷ್ಟದ ಆರ್ಥಿಕ ಪರಿಸ್ಥಿತಿಯ ಸಮಯದಲ್ಲಿ ತುಂಬಾ ಉಪಕಾರವಾಗಿತ್ತೆಂದು ಹೇಳಬಹುದು. ಆದರೆ ಈ ಸ್ನೇಹ ಉಳಿದದ್ದು ಒಂದೇ ವರ್ಷ. ನಂತರ ಹರಿಹರರು ಕಾಲೇಜು ಬಿಟ್ಟು ತನ್ನ ರಾಜ್ಯಕ್ಕೆ ಹೋಗಿಬಿಟ್ಟರು. ಆದರೆ ಕೋ. ಚೆಯವರು ಬಹು ಕಷ್ಟದಿಂದ ಕಾನೂನು ಮುಗಿಸಿಕೊಂಡು ೧೯೪೬ ರಲ್ಲಿ ವಕೀಲ ವೃತ್ತಿಯನ್ನು ಆರಂಭಿಸಿದರು.

**‘ಲಾ’ ಪ್ರಾಕ್ಟೀಸ್**

ಕ್ರಿ. ಶ. ೧೯೪೬ರ ಜೂನ್ ವೇಳೆಗಾಗಲೇ ಕೋ. ಚೆಯವರು ಕಾನೂನು ಪದವಿಯ ವ್ಯಾಸಾಂಗ ಪೂರ್ಣಗೊಳಿಸಿದರು. ಆದರೆ ಅವರಿಗೆ ಎಲ್ಲಿ ವಕಾಲತ್ತು ಮಾಡಬೇಕೆಂಬ ಸಮಸ್ಯೆ ಉಂಟಾಗಿತ್ತು. ಕೋ. ಚೆ ಯವರಿಗೆ ಆದಷ್ಟು ಕಡಿಮೆ ಖರ್ಚು ಬರುವಂತ, ಕಕ್ಷಿದಾರರು ದೊರೆಯುವಂತಹ ಸ್ಥಳವೇ ಬೇಕಾಗಿತ್ತು. ಅದಕ್ಕೆ ಸೂಕ್ತ ಸ್ಥಳ ಹೊಸಪೇಟೆಯಾಗಿದ್ದರೂ ಕೋ. ಚೆಯವರು ಬಳ್ಳಾರಿಯಲ್ಲಿ ವಕಾಲತ್ತು ಮಾಡಲು ಪ್ರಾರಂಭಿಸಬೇಕೆಂದುಕೊಂಡರು. ಆದರೆ ಕೋ. ಚೆಯವರ ತಂದೆಯವರಿಗೆ, ಮಗ ಹೊಸಪೇಟೆಯಲ್ಲಿ ವಕೀಲ ವೃತ್ತಿಯನ್ನು ಆರಂಭಿಸಲಿ ಎನ್ನುವ ಆಸೆ ಇತ್ತು. ಕೊನೆಗೆ ಗುರಣ್ಣನವರ ಬೆಂಬಲದಿಂದ ಕೋ. ಚೆಯವರು ಬಳ್ಳಾರಿಯಲ್ಲಿ ವಕೀಲ ವೃತ್ತಿಯನ್ನು ಆರಂಭಿಸಲು ಸಿದ್ಧರಾದರು. ಬಳ್ಳಾರಿಗೆ ಬಂದ ಮೇಲೆ ಶ್ರೀ ವೇಣುಗೋಪಾಲ ಚಾರ್ಯರ ಹತ್ತಿರ ಜೂನಿಯರ್ ಆಗಿ ಸೇರಿಕೊಂಡರು.

ಕೋ. ಚೆಯವರು ವೇಣುಗೋಪಾಲಾಚಾರ್ಯರ ಜೂನಿಯರ್ ಆಗಿದ್ದುಕೊಂಡು ಕೆಲಸ ಕಲಿಯತೊಡಗಿದರು. ಅಲ್ಲದೆ ಅವರ ಕಛೇರಿಯಲ್ಲಿ ಕಲ್ಲುಕಂಬದ ಹನುಮಂತರಾಯರೆಂಬ ವಕೀಲ ಗುಮಾಸ್ತರಿದ್ದರು. ಅವರಿಂದಲೂ ಕೆಲವು ಸಲಹೆ ಸೂಚನೆಗಳನ್ನು ಕೇಳಿ ತಿಳಿದುಕೊಂಡರು. ಹೀಗೆ ಲಾ ಪ್ರಾಕ್ಟೀಸ್ ಮಾಡತೊಡಗಿದರು. ಈ ಮಧ್ಯೆ ಅಂದರೆ ೧೯೪೬ನೇ ಆಗಷ್ಟ್‌ನಲ್ಲಿ ಮುಂಬೈ ಹೈಕೋರ್ಟ್ ನಡೆಸುತ್ತಿದ್ದ ಬಾರ್ ಕೌನ್ಸಲ್ ಪರೀಕ್ಷೆಗೆ ಕುಳಿತುಕೊಂಡು ಉತ್ತೀರ್ಣರಾದರು.

ಆದರೆ ಫಲಿತಾಂಶ ಸೆಪ್ಟೆಂಬರಿನಲ್ಲಿ ಪ್ರಕಟವಾಗಿ 'ಎನ್‌ರೋಲ್‌ಮೆಂಟ್' ಮಾಡಿಸಿಕೊಳ್ಳಲು ೭೫೦.೦೦ ರೂ.ಗಳನ್ನು ಹೈಕೋರ್ಟ್‌ಗೆ ತುಂಬಬೇಕಾಗಿತ್ತು. ಆದರೆ ಮನೆಯಲ್ಲಿ ಕೆಟ್ಟ ಆರ್ಥಿಕ ಪರಿಸ್ಥಿತಿಯಿಂದ ಹಣ ಕಟ್ಟಲು ಸಾಧ್ಯವಾಗುತ್ತಿರಲಿಲ್ಲ. ಇಂತಹ ಸಂದರ್ಭದಲ್ಲಿ ಕೋ. ಚೆಯವರ ಸಂಬಂಧಿಗಳಾದ ಬಿ. ಬಸಣ್ಣನವರು ಧನ ಸಹಾಯ ಮಾಡಿದರು. ಕೊನೆಗೆ ೧೯೪೬ನೆಯ ನವಂಬರ್ ೧೨ನೇ ತಾರೀಖಿನಂದು 'ಎನ್‌ರೋಲ್‌ಮೆಂಟ್' ಮಾಡಿಸಿಕೊಂಡರು.

**ಕೋ. ಚೆಯವರ ಮೊದಲ ಕೇಸು**

ಕೋ. ಚೆಯವರ 'ಎನ್‌ರೋಲ್‌ಮೆಂಟ್' ಆಗಿದ್ದು ೧೯೪೬ನೇ ನವಂಬರ್ ೧೨ನೇ ತಾರೀಖುಎನ್‌ರೋಲ್‌ಮೆಂಟ್ ಆದಮೇಲೆ ವಕೀಲ ವೃತ್ತಿಯನ್ನು ಕೈಗೊಳ್ಳಲು ಅವಕಾಶ ಇರುತ್ತಿತ್ತು. ಆದರೆ ಎನ್‌ರೋಲ್‌ಮೆಂಟ್ ಆಗಿರುವ ಬಗ್ಗೆ ಒಂದು ಸನದು ಬರುವುದಕ್ಕಿಂತ ಮುಂಚೆ ಕೋ. ಚೆಯವರು ಒಂದು ಕೇಸ್ ನಡೆಸಿದರು. ಅದು ಗುರಣ್ಣನವರದ್ದೇ ಆಗಿತ್ತು.

ಗುರಣ್ಣನವರು ಒಬ್ಬ ಸರಾಯಿ ಕಾಂಟ್ರ್ಯಾಕ್ಟರ್ ಆಗಿದ್ದರು. ಆದರೆ ೧೯೪೬ರಲ್ಲಿ ಮದ್ರಾಸ್ ಸರ್ಕಾರ ಪ್ರೋಹಿಬೀಷನ್ ಕಾಯ್ದೆ ಜಾರಿಗೆ ತಂದು ಯಾವುದೇ ಕಾರಣಕ್ಕೂ ಮದ್ರಾಸ್ ಸರ್ಕಾರದ ಒಳಗೆ ಸರಾಯಿ ತರುವುದನ್ನು ನಿಷೇಧಿಸಿತ್ತು. ಈ ಸಂದರ್ಭದಲ್ಲಿ ಆಲೂರಿನಿಂದ ಜಗಳೂರಿಗೆ ಸರಾಯಿಯನ್ನು ಹೆಂಡದ ಹುಸೇನಿ ಕೈಯಲ್ಲಿ ಕಳಿಸುವಾಗ ಕಾನಾಮಡುಗಿನಲ್ಲಿ ಪೊಲೀಸರು ಬಂಧಿಸಿದ್ದರು. ಈ ಕುರಿತು ಕೂಡ್ಲಿಗಿ ಪೊಲೀಸ್ ಠಾಣೆಯಲ್ಲಿ ಕೇಸ್ ದಾಖಲಾಯಿತು. ಈ ವಿಚಾರವನ್ನು ಗುರಣ್ಣನವರು ಕೋ. ಚೆಯವರಿಗೆ ತಿಳಿಸಿದಾಗ ಆಗಿನ ಎನ್‌ರೋಲ್‌ಮೆಂಟಿನ ಸನದು ಬಂದಿರಲಿಲ್ಲ. ಹೀಗಾಗಿ ಕೋ. ಚೆಯವರ ಹಿರಿಯ ವಕೀಲರಾದ ವೇಣುಗೋಪಾಲಾ ಚಾರ್ಯರ ಹತ್ತಿರ ವಿಚಾರಿಸಿದಾಗ, ಇದೊಂದು 'ಡಿಫೈನ್ಸ್ ಕೇಸು' ಹಾಗಾಗಿ ಸರಾಯಿ ನಮ್ಮದಲ್ಲ ಅಂತ ಸಾಧಿಸುವುದು ಒಂದೇ ದಾರಿ. ಇನ್ನು ಎತ್ತಿನಗಾಡಿ ಇತ್ಯಾದಿ ವಸ್ತುಗಳು ನಿಮ್ಮವಾಗಿರುವುದರಿಂದ ನೀವು ಪೊಲೀಸರೇ ತಂದು ಗಾಡಿಯಲ್ಲಿಟ್ಟು ಹೊಸಳ್ಳಿಗೆ ಗಾಡಿ ಹೊಡೆಯಿರಿ ಎಂದರು. ಆದರೆ ಹಾಗಲ್ಲ! ಅಂತ ನಿರಾಕರಿಸದ್ದಕ್ಕೆ ಸುಳ್ಳು ಕೇಸು ದಾಖಲಿಸಿದ್ದಾರೆಂದೂ, ವಾದಿಸಬೇಕೆಂದು ಹೇಳಿದರು. ಅದಕ್ಕೆ ಗುರಣ್ಣನವರು ವೇಣುಗೋಪಾಲ ಚಾರ್ಯರಿಗೆ ನೀವೆ ವಕಾಲತ್ತು ವಹಿಸಿಕೊಳ್ಳಿ ಎಂದು ಕೇಳಿಕೊಂಡರಾದರೂ ಅದಕ್ಕೆ ಅವರು ಒಪ್ಪದೆ ಕೋ. ಚೆಯವರೇ ಇದನ್ನು ಮುಂದುವರಿಸಲಿ ಎಂದು ಸಲಹೆ ನೀಡಿದರು.

ಕೋ. ಚೆಯವರು ಈ ಕೇಸ್ ತೆಗೆದುಕೊಳ್ಳುವುದೋ, ಬಿಡುವುದೋ ಎನ್ನುವ ತಳಮಳದಲ್ಲಿ ಇದ್ದದು ನಿಜ. ಏಕೆಂದರೆ! ಸ್ವಾತಂತ್ರ್ಯ ಚಳವಳಿಯ ಸಮಯದಲ್ಲಿ ಮಧ್ಯಪಾನ ನಿಷೇಧ ಆಗಲೇಬೇಕೆಂದು ಹೋರಾಡಿದ್ದರು. ಆದ್ದರಿಂದ ಈ ಕೇಸ್ ನಡೆಸುವುದು ಹೇಗೆಂದು ತರ್ಕಿಸಿ ಕೊಂಡರು. ಆದರೆ ವಾಸ್ತವವಾಗಿ ಮದ್ರಾಸ್ ರಾಜ್ಯಕ್ಕೆ ಸರಾಯಿ ತರುವುದು ನಿಷೇಧಿಸಿದ್ದರಿಂದ ಸರಾಯಿಯನ್ನು ಅಲ್ಲಿಂದ ಹೊರಹಾಕಲು ಪ್ರಯತ್ನಿಸಿದರೇ ವಿನಃ ಕಾನೂನು ಮುರಿಯುವುದಕ್ಕೆ ಅಲ್ಲ ಎಂಬುದಾಗಿ ತಿಳಿದು ಹಾಗೆ ವಾದಿಸಿದರಾಯಿತು ಎಂದುಕೊಂಡರು. ಆಗ ಕೂಡ್ಲಿಗಿ ಕೋರ್ಟ್‌ನಲ್ಲಿ ಮೈದೂರು ರಾಮರಾಯರೆಂಬುವರು ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸುತ್ತಿದ್ದು,

ಅವರ ಮುಂದೆ ನನಗೆ ಇನ್ನು ಎನ್‌ರೋಲ್‌ಮೆಂಟ್‌ನ ಸನದು ಬಂದಿಲ್ಲ ತಾವು ಅಪ್ಪಣೆ ನೀಡಿದರೆ ಆರೋಪಿಯ ಪರ ವಕಾಲತ್ತು ವಹಿಸುತ್ತೇನೆಂದು ವಿನಂತಿಸಿಕೊಂಡರು. ಅದಕ್ಕೆ ನ್ಯಾಯಮೂರ್ತಿಗಳು ಅನುಮತಿ ನೀಡಿದರು. ಕೋ. ಚೆಯವರು ಎಂ.ಹೆಚ್. ಗುರುಶಂಕರಯ್ಯನವರ ಸಹಾಯದಿಂದ ಪ್ರಿಂಟೆಡ್ ಫಾರಂನ್ನು ಸಿದ್ಧಪಡಿಸಿದರು. ಕೋ. ಚೆಯವರ ಮೊದಲನೇ ವಕಾಲತ್ತಿನಲ್ಲಿ ಎಂ.ಹೆಚ್. ಗುರುಶಂಕರಯ್ಯನವರು ಅಗತ್ಯವಾದ ಕಡೆ ಸಹಾಯ ಮಾಡುತ್ತಿದ್ದರು.

ಈ ಮೊದಲನೇ ಕೇಸಿನಲ್ಲಿ ಕೋ. ಚೆಯವರು ಬಹು ಜಾಗ್ರತಿಯಿಂದ ಕಾರ್ಯ ನಿರ್ವಹಿಸಿ ಗುರಣ್ಣನವರ ಪರವಾಗಿ ತೀರ್ಪು ಬರುವಂತೆ ಮಾಡಿದರು. ನಂತರದ ದಿನಗಳಲ್ಲಿ ಕೋ. ಚೆಯವರಿಗೆ ಅನೇಕ ಕೇಸುಗಳು ಬರಲಾರಂಭಿಸದವು. ಇವರು ಆರಂಭದ ದಿನಗಳಲ್ಲಿ ಒಂದು ಕೇಸಿಗೆ ಒಂದು ನೂರು ಎಂಬಂತೆ ಫೀಜು ನಿರ್ಧರಿಸಿಕೊಂಡು ಕೇಸು ಹಿಡಿಯುತ್ತಿದ್ದರು.

**ಲೇಸಿ ಗುಂಡವ್ವನ ಕೇಸು**

ಹಡಗಲಿ ತಾಲೂಕಿಗೆ ಸೇರಿದ ಒಬ್ಬ ಹೆಂಗಸು ಈ ಲೇಸಿ ಗುಂಡವ್ವ "ಲೇಸಿ ಎಂದರೆ ಬಸವಿ"[3] ಎಂದು. ಆಕೆ ತನ್ನ ಮೈ ಮಾರಿಕೊಂಡು ಜೀವನ ನಡೆಸುತ್ತಿದ್ದರೂ ಅವಳಿಗೆ ಮಕ್ಕಳಾಗಿರಲಿಲ್ಲ. ಹೀಗಾಗಿ ಅವಳ ತಮ್ಮನ ಮಗನನ್ನು ಸಾಕಿಕೊಂಡಿದ್ದಳು. ಆದರೆ ತಮ್ಮನ ಮಗ ಮದುವೆ ಆದ ನಂತರ ಗುಂಡವ್ವನಿಗೆ ಹಿಂಸಿಸಿ ಭೂಮಿಯನ್ನು, ಬಂಗಾರವನ್ನು ಕಸಿದುಕೊಂಡಿದ್ದ ಈ ಕುರಿತು ಕೋ. ಚೆಯವರ ಹತ್ತಿರ ವಕಾಲತ್ತನ್ನು ಕೊಡಲು ಬಂದಿದ್ದಳು. ಆದರೆ ಅವಳು ಕೇವಲ ಒಂದುನೂರು ರೂಪಾಯಿ ತಂದು ಕೊಟ್ಟು ದಾವಾ ದಾಖಲು ಮಾಡುವಂತೆ ವಿನಂತಿಸಿಕೊಂಡಿದ್ದಳು. ಕೋ. ಚೆಯವರು ಲೇಸಿ ಗುಂಡವ್ವನ ದಾವಾ ದಾಖಲು ಮಾಡಿಕೊಂಡು ಅವಳಿಗೆ ಹೊಲ, ಮನೆಯನ್ನು ಬಿಡಿಸಿಕೊಟ್ಟರು. ಇದು ಕೋ. ಚೆಯವರು ವಕಾಲತ್ತು ವಹಿಸಿದ ವಿಶಿಷ್ಟ ವ್ಯಕ್ತಿಯ ಕೇಸು.

**ಕೋ. ಚೆಯವರ ಬಂಧುಗಳಿಂದಲೇ ಮೋಸ**

ಈ ಕೇಸು ಗುಂಡವ್ವನಂತದ್ದಲ್ಲ. ಇದು ಕೋ. ಚೆಯವರ ಸಂಬಂಧಿಗಳ ಮೇಲಿದ್ದ ಒಂದು ಹೀನಾಯ ಕೇಸು. ಕೋ. ಚೆಯವರ ಸಂಬಂಧಿಗಳ ಅಣ್ಣತಮ್ಮಂದಿರು ಒಬ್ಬ ಪೊಲೀಸ್ ಅಧಿಕಾರಿಯನ್ನು ಬಡಿದು ತಮ್ಮ ಕರ್ತವ್ಯ ನಿರ್ವಹಣೆಗೆ ಅಡ್ಡಿಮಾಡಿದರೆಂಬ ಗಂಭೀರ ಆರೋಪವನ್ನು ಮಾಡಲಾಗಿತ್ತು. ಆಗಿನ್ನು ಮದ್ರಾಸ್ ಸರ್ಕಾರದ ಆಡಳಿತವಿದ್ದು, ಮದ್ರಾಸ್ ರಾಜ್ಯದಿಂದ ಹೊರಗಡೆ ಅಕ್ಕಿ, ಗೋದಿ, ಬೆಲ್ಲ, ಜೋಳ, ಸೇಂಗಾ ಮುಂತಾದ ವಸ್ತುಗಳನ್ನು ಸಾಗಿಸಬಾರದೆಂಬ 'ಪ್ರೊಹಿಬಿಷನ್ ಕಾಯ್ದೆ' ಜಾರಿಯಲ್ಲಿತ್ತು. ಈ ನಿಷೇಧದ ಮಧ್ಯೆ ಮೈಸೂರು ರಾಜ್ಯಕ್ಕೆ ಸೇಂಗಾ ಸಾಗಿಸುತ್ತಿದ್ದರು. ಅದನ್ನು ತಡೆಯಲೆಂದು ಹೋಗಿದ್ದ ಪೊಲೀಸ್ ಸಬ್ ಇನ್ಸಪೆಕ್ಟರ್, ಜಮೇದಾರ್ ಮತ್ತು ಪೊಲೀಸರನ್ನು ಬಡಿದು ಮಾಲು ತುಂಬಿದ ಗಾಡಿಯನ್ನು ಮೈಸೂರು ರಾಜ್ಯದ ಗಡಿಯೊಳಕ್ಕೆ ಕಳಿಸಿದ್ದರು. ಹಾಗಾಗಿ ಕೋ. ಚೆಯವರ ಸಂಬಂಧಿಗಳನ್ನು ಪೊಲೀಸರು ಮಾಲು ಸಮೇತ ಹಿಡಿದುಕೊಂಡು ಕೋರ್ಟಿಗೆ ಹಾಜರು ಪಡಿಸಿದರು. ಕೋ. ಚೆಯವರು ತಮ್ಮ ಸಂಬಂಧಿಗಳ ಪರವಾಗಿ ವಾದಿಸಿ

ಬಿಡುಗಡೆಗೊಳಿಸಿದರು. ಆದರೆ ಅಲ್ಲಿಯವರೆಗೆ ಯಾವುದೇ ಫೀಜನ್ನು ಪಡೆಯದ ಕೋ. ಚೆ ಎಲ್ಲಾ ಮುಗಿದ ನಂತರ ಫೀಜ್ ಕೇಳಿದರು. ಆದರೆ ಬಂಧುಗಳಿಂದ ಪ್ರಯಾಣ ವೆಚ್ಚ ನೀಡಿರುವುದೇ ಫೀಜ್‌ಗಿಂತ ಹೆಚ್ಚಾಗಿದೆ ಎಂಬ ಉಡಾಫೆ ಉತ್ತರ ಬಂದಾಗ, ಅವರ ಮೇಲೆ ದಾವಾ ದಾಖಲಿಸಿ ಒಂದು ವರ್ಷಕಾಲ ಕೋರ್ಟಿಗೆ ಅಲೆಯುವಂತೆ ಮಾಡಿದರು. ಕೊನೆಗೆ ವೇಣುಗೋಪಾಲಾಚಾರ್ಯರ ಮಾತು ಕೇಳಿ ಕೇಸನ್ನು ವಾಪಾಸು ಪಡೆದರು.

**ನ್ಯಾಯಾಧೀಶರನ್ನು ತರಾಟೆಗೆ ತೆಗೆದುಕೊಂಡ ಕೋ. ಚೆ.**

೧೯೫೫ನೇ ಏಪ್ರೀಲ್‌ನ ಕೊನೆಯ ಕೆಲಸದ ದಿನ–ಮರುದಿನದಿಂದ ಕೋರ್ಟಿಗೆ ಬೇಸಿಗೆ ರಜೆ ಆರಂಭವಾಗುತ್ತಿತ್ತು. ಅಂದು ಕೋ. ಚೆಯವರು ಶಿವಲಿಂಗಪ್ಪ ಎಂಬುವರ ಪರ ವಾದ ಮಂಡಿಸುತ್ತಿದ್ದರು. ಶಿವಲಿಂಗಪ್ಪನವರು ಕೋ. ಚೆಯವರ ಸ್ನೇಹಿತರಾಗಿದ್ದು ಜ್ಯೋತಿ ಪುಟ್ಟಪ್ಪ ಎಂಬುವರಿಂದ ಒಂದು ಹೊಲವನ್ನು ಗುತ್ತಿಗೆ ಹಿಡಿದಿದ್ದರು. ಆದರೆ ಆ ಗುತ್ತಿಗೆ ಅಕ್ರಮವೆಂದು ಜ್ಯೋತಿ ಪುಟ್ಟಪ್ಪನವರ ಇನ್ನೊಬ್ಬ ಸದಸ್ಯರು ಪಾಲು ವಿಭಾಗ ದಾವಾ ದಾಖಲಿಸಿದರು. ಈ ಕುರಿತು ಕೋ. ಚೆಯವರು ಶಿವಲಿಂಗಪ್ಪನವರ ಪರ ವಕಾಲತ್ತು ವಹಿಸಿಕೊಂಡಿದ್ದ ಸಂದರ್ಭದಲ್ಲಿ ಬಳ್ಳಾರಿ ಜಿಲ್ಲಾ ನ್ಯಾಯಾಧೀಶ 'ಸಿವಿಲ್ ಜಜ್' (ಆಗ ಅವರನ್ನು ಸಬ್ ಜಜ್ ಎಂದು ಕರೆಯುತ್ತಿದ್ದರು) ಎಂಬುವರ ಮುಂದೆ ದಾವಾ ವಿಚಾರಣೆಗೆ ಬಂತು. ಶಿವಲಿಂಗಪ್ಪನವರ ಗುತ್ತಿಗೆ ಹಿಡಿದ ಹೊಲ ಹಿಂದೊಮ್ಮೆ ಕೆರೆಯ ಅಂಗಳವಾಗಿದ್ದು, ಆದರೆ ಕೆರೆ ಒಡೆದು ಎಷ್ಟೋ ವರ್ಷಗಳಾಗಿ ಭೂಮಿ ಪಾಳು ಬಿದ್ದಿತ್ತು. ಆ ಹೊಲದ ತುಂಬಾ ಜಾಲಿಗಿಡ, ಈಚಲಗಿಡ ಇತ್ಯಾದಿ ಬೆಳೆದುಕೊಂಡು ಹೊಲ ಉಳುಮೆ ಮಾಡಲು ಅಯೋಗ್ಯವಾಗಿತ್ತು. ಅದನ್ನು ವರ್ಷಕ್ಕೆ ಒಂದು ಸಾವಿರ ರೂಪಾಯಿ ಗುತ್ತಿಗೆಗೆ ಶಿವಲಿಂಗಪ್ಪ ಪಡೆದು ಹೊಲವೆಲ್ಲವನ್ನು ಸ್ವಚ್ಛಗೊಳಿಸಿ ಉಳುಮೆ ಮಾಡಿದ್ದರು. ಇದು ಅಲ್ಪ ಮೊತ್ತದ ಗುತ್ತಿಗೆ ಎಂಬುದು ಜ್ಯೋತಿ ಪುಟ್ಟಪ್ಪನವರ ಸಂಬಂಧಿಯ ವಾದವಾಗಿತ್ತು.

ಈ ಕುರಿತು ಕೋ. ಚೆಯವರು ಶಿವಲಿಂಗಪ್ಪನವರನ್ನು ವಿಚಾರಣೆಗೆ ಒಳಪಡಿಸಿದರು. ಆಗ ಕೋ. ಚೆಯವರು 'ಈ ಹೊಲವನ್ನು ಬೇರೆಯಾರಾದರು ಗುತ್ತಿಗೆ ಹಿಡಿಯುತ್ತಿದ್ದರೋ?' ಎಂದು ಪ್ರಶ್ನಿಸಿದಾಗ, ಶಿವಲಿಂಗಪ್ಪ ಇಲ್ಲ ಎಂದರು. ಯಾಕೆ ಎಂದು ಕೋ. ಚೆ ಪ್ರಶ್ನಿಸಿದಾಗ, ಅದು ವ್ಯವಸಾಯಕ್ಕೆ ಯೋಗ್ಯವಾಗಿರಲಿಲ್ಲ ಎಂದು ಉತ್ತರಿಸಿದರು. ಶಿವಲಿಂಗಪ್ಪ ಹಾಗಾದರೆ ಅದನ್ನು ನೀನು ಯಾಕೆ ಗುತ್ತಿಗೆ ಹಿಡಿದೆ? ಎಂದು ಪ್ರಶ್ನಿಸಿದರು. ಈ ಮಧ್ಯೆ ಸಬ್‌ಜಜ್ ನಡುವೆ ಬಾಯಿ ಹಾಕಿ, "ನಿಮ್ಮ ಪಕ್ಷಗಾರನಿಗೆ ತಲೆಯಲ್ಲಿ ಮೆದುಳೇ ಇಲ್ಲ" ಎಂದು ವ್ಯಂಗ್ಯ ಮಾಡಿದರು. ಇದನ್ನು ಕೋ. ಚೆಯವರು ಸಹಿಸದೆ ಈ ಕೇಸಿನ ನಿರ್ಣಯಕ್ಕೆ ನ್ಯಾಯಾಧೀಶರು ಈ ಮಾತನ್ನಾಡಲೇಬೇಕಿತ್ತೆ? ಎಂದು ಪ್ರಶ್ನಿಸಿದರು. ಆಗ ಸರಿ ಮುಂದಿನ ಪ್ರಶ್ನೆ ಕೇಳಿ ಎಂದರು ನ್ಯಾಯಾಧೀಶರು. ಆದರೆ ಕೋ ಚೆಯವರು ನಾನು ಪ್ರಶ್ನೆಗಳನ್ನು ಸಿದ್ದವಾಗಿ ಇಟ್ಟುಕೊಂಡು ಬಂದಿರುವೆ ನೀವು ಆ ಮಾತು ಹಾಡಿದ್ದು ಸರಿಯೇ? ಅದಕ್ಕೆ ಉತ್ತರ ಬಂದ ಮೇಲೆ ನಾನು ಪ್ರಶ್ನೆ ಕೇಳುತೇನೆ, ಇಲ್ಲವಾದರೆ ಈ ಕೇಸು ಮುಂದುವರಿಸುವುದಿಲ್ಲ. ನೀವು

ಆ ಮಾತನ್ನು ಮರಳಿ ಪಡೆದು ಕ್ಷಮೆ ಕೇಳಬೇಕು ಎಂದು ಪಟ್ಟುಹಿಡಿದರು. ಕೊನೆಗೆ ನ್ಯಾಯಾಧೀಶರು ಆಯಿತು. ವಾಪಸ್ಸು ತೆಗೆದುಕೊಂಡಿದ್ದೇನೆ. ನೀವು ಪ್ರಶ್ನೆ ಕೇಳಿ ಎಂದರು. ಈ ರೀತಿಯಲ್ಲಿ ನ್ಯಾಯಾಧೀಶರನ್ನು ಕೆಲವು ಬಾರಿ ತರಾಟೆಗೆ ತೆಗೆದುಕೊಂಡಿದ್ದರೇ ಹೊರತು, ಅವರಿಗೆ ನ್ಯಾಯಾಧೀಶರ ಮೇಲಿನ ಗೌರವ ಮಾತ್ರ ಹೋಗಿರಲಿಲ್ಲ. ಅದರೆ ನ್ಯಾಯಾಧೀಶರ ನಡೆ ನುಡಿ ಸರಿಯಿಲ್ಲವೆಂದರೆ ಅದನ್ನು ತಿಳಿಸುವುದರಲ್ಲಿ ಕೋ. ಚೆ ಎಂದು ಹಿಂಜರಿದವರಲ್ಲ.

ಈ ರೀತಿಯಾಗಿ ಕೋ. ಚೆಯವರು ಪ್ರಥಮ ಹಂತದ ವಕೀಲ ವೃತ್ತಿಯನ್ನು ಮುಗಿಸಿದರು. ಅವರು ೧೯೪೬ರಿಂದ ೧೯೬೫ ಡಿಸೆಂಬರ್ ೧೦ ರವರೆಗೂ ನ್ಯಾಯಾವಾದಿಗಳಾಗಿ ಅನೇಕ ರೀತಿಯ ಕೇಸುಗಳಿಗೆ ವಕಾಲತ್ತು ಮಾಡಿ ಬಿಡುಗಡೆಗೊಳಿಸಿದರು. ಅವರು ಬಳಿ ಬರುವ ಕೇಸುಗಳು 'ಸಿವಿಲ್ ಮತ್ತು ಕ್ರಿಮಿನಲ್' ಕೇಸುಗಳ ರೂಪದಲ್ಲಿದ್ದು ಬಹುತೇಕ ತಮ್ಮ ಬಳಿ ಬರುವ ಕಕ್ಷಿದಾರರಿಗೆ ನ್ಯಾಯಾವನ್ನು ವದಗಿಸಿಕೊಡುವಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದರು

ಕೋ ಚೆಯವರು ಕೇಸಿಗೆ ಅನುಗುಣವಾಗಿ ವಕಲತ್ತು ಶುಲ್ಕ ವನ್ನು ಪಡೆಯುತ್ತಿದ್ದರಾದರು ಅವರ ತಾಯಿಯ ಆಸೆಯಂತೆ ಕೆಲವು ಕೇಸುಗಳಿಗೆ ವಕಾಲತ್ತು ಮುಗಿಸಿದ ನಂತರ ಕಕ್ಷಿದಾರರಿಗೆ ನ್ಯಾಯ ದೊರೆಕಿಸಿದ ನಂತರ ಪಡೆಯುತ್ತಿದ್ದರು.

**೫.೨ ನ್ಯಾಯಾಧೀಶರಾಗಿ' ಕೋ. ಚೆನ್ನಬಸಪ್ಪ**

**ನ್ಯಾಯಾಧೀಶರಾಗಿ ಆಯ್ಕೆ**

೧೯೬೫ರಲ್ಲಿ ನ್ಯಾಯಾಧೀಶರಾಗುವುದಕ್ಕಿಂತ ಮುಂಚೆ ಕೋ. ಚೆಯವರು ೧೯೬೧-೬೨ರ ವೇಳೆಗಾಗಲೇ 'ಪಬ್ಲಿಕ್ ಪ್ರಾಸಿಕ್ಯೂಟರ್' ಆಗಿ ಸೇವೆಸಲ್ಲಿಸಿದ್ದರು. ಅವರು ಬಳ್ಳಾರಿ ಜಿಲ್ಲಾ ನ್ಯಾಯಾಲಯದ 'ಬಾರ್' ಸದಸ್ಯರಾಗಿ, ಜನಮನದಲ್ಲಿ ಹೆಸರು ಮಾಡಿದರು. ಅಲ್ಲದೇ ವಕೀಲರಾಗಿದ್ದ ಕೊಂಡು ತಮ್ಮ ಬಳಿಬರುವ ಕಕ್ಷಿದಾರರಿಗೆ ಸರಿಯಾಗಿ ನ್ಯಾಯವದಗಿಸಿಕೊಡುತ್ತಿದ್ದರು. ಹಾಗಾಗಿ ಅಂದಿನ "ಶ್ರೇಷ್ಠ ನ್ಯಾಯಮೂರ್ತಿ ಹೊಂಬೇಗೌಡ" ಇವರ ಹೆಸರನ್ನು ಸರಕಾರಕ್ಕೆ ಜಿಲ್ಲಾ ನ್ಯಾಯಾಧೀಶರನನ್ನಾಗಿ ನೇಮಕ ಮಾಡಲು ಶಿಫಾರಸ್ಸು ಮಾಡಿದರು ಇವರ ಜೊತೆಗೆ ಸಭಾಹಿತ, ಎನ್.ಡಿ. ವೆಂಕಟೇಶ್, ಮಹದೇವರಾವ್‌ಪಾಟೀಲ್, ಆರ್.ಜಿ. ದೇಸಾಯಿಯವರನ್ನು ನ್ಯಾಯಾಧೀಶರನ್ನಾಗಿ ನೇಮಿಸಿಕೊಳ್ಳಲು ತಿಳಿಸಿದರು. ಆದರೆ ಕೋ. ಚೆಯವರನ್ನು ಹೊರತು ಪಡಿಸಿ ಉಳಿದ ನಾಲ್ಕು ಜನರನ್ನು ಡಿಸೆಂಬರ್ ೨-೧೯೬೫ ರಂದು ನ್ಯಾಯಾಧೀಶರನ್ನಾಗಿ ಆಯ್ಕೆ ಮಾಡಿರುವುದಾಗಿ ಪ್ರಕಟಿಸಿತ್ತು. ಆಗ ಕೋ. ಚೆಯವರು ಹೊಂಬೇಗೌಡರು ಮನೆಗೆ ಬರಲು ಹೇಳಿ 'ನೀವು ಕೂಡಲೇ ಮುಖ್ಯಮಂತ್ರಿ ನಿಜಲಿಂಗಪ್ಪನವರನ್ನು ಕಾಣಬೇಕೆಂದು ತಿಳಿಸಿದರು'. ಅವರು ಕೂಡ ಕೋ.ಚೆಯವರನ್ನು ಚಿಕ್ಕಂದಿನಿಂದಲೂ ಬಲ್ಲವರಾಗಿದ್ದರು. ಆದರೆ ನ್ಯಾಯಾಧೀಶರಾಗಿ ನೇಮಕ ಮಾಡಿಕೊಳ್ಳುವಾಗ ಒಂದು ಪೊಲೀಸ್ ವರದಿಯನ್ನು ಸರ್ಕಾರ ತರಿಸಿಕೊಂಡಿತ್ತು. ಅದರಲ್ಲಿ ೧೯೬೦-೬೧ರಲ್ಲಿ ಆರ್.ಎಸ್.ಎಸ್. ರ‍್ಯಾಲಿಯನ್ನು ಉದ್ದೇಶಿಸಿ ಭಾಷಣ ಮಾಡಿದ್ದರೆಂದು ಪೊಲೀಸ್ ವರದಿಯಲ್ಲಿ ಸಲ್ಲಿಸಲಾಗಿತ್ತು. ಈ ಕಾರಣದಿಂದ ನೇಮಕಾತಿಯ ತಡೆಯಾಜ್ಞೆಯನ್ನು ಮಾಡಿರುವುದಾಗಿ ತಿಳಿಯಿತು. ಪೊಲೀಸ್ ವರದಿಯನ್ನು

ಆ ರೀತಿ ಕೊಡಲು ಒಂದು ಕಾರಣವಿತ್ತು. ಆಗ ಬಳ್ಳಾರಿ ಜಿಲ್ಲೆಯಲ್ಲಿದ್ದ ಎಸ್.ಪಿ. ಮೇಲೆ 'ರೈತ' ಪತ್ರಿಕೆಯಲ್ಲಿ ಬರೆದು ಟೀಕಿಸಿದ್ದರಿಂದ ಅವರು ಹಾಗೆ ಕಳಿಸಿದ್ದಾರೆ ಎಂಬುದಾಗಿ ತಿಳಿಸಿದರು. ಆಗ "ನಿಜಲಿಂಗಪ್ಪನವರು ತಮ್ಮ ಸೆಕ್ಯೂರಿಟಿ ಆಫೀಸರ್ ಜಿ.ವಿ. ಶಿವಣ್ಣನವರನ್ನು ಕರೆದು ಬಳ್ಳಾರಿ ಎಸ್.ಪಿ.ಯಿಂದ ವರದಿ ತರಿಸಿಕೊಳ್ಳುವಂತೆ ತಿಳಿಸಿದರು. ವರದಿ ಬಂದ ನಂತರ ಕೋ. ಚೆಯವರು ನೇಮಕಾತಿಯ ಫೈಲ್ ಡಿಸೆಂಬರ್ ೬ರಂದು ರಾಜ್ಯಪಾಲರ ಒಪ್ಪಿಗೆಗಾಗಿ ಹೋಗಿತ್ತು. ಏಳನೇ ತಾರೀಖು ವಿಧಾನಸೌಧದಿಂದ ಉಚ್ಚ ನ್ಯಾಯಾಲಯಕ್ಕೆ ಹೋಗಿತ್ತು. ಕೊನೆಗೆ ೧೯೬೫ನೇ ಡಿಸೆಂಬರ್ ೧೦ರಂದು ಶುಕ್ರವಾರ ಬೆಂಗಳೂರಿನಲ್ಲಿ ಪ್ರಥಮ ಅಡಿಷನಲ್ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರಾಗಿ ಅಧಿಕಾರ ವಹಿಸಿಕೊಂಡರು. ಆದರೆ ವಾಸ್ತವವಾಗಿ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಲು ಆರಂಭಿಸಿದ್ದು ಡಿಸೆಂಬರ್ ೧೨ರಂದು.

**ನ್ಯಾಯಾಧೀಶರಾಗಿ ಹಾಕಿಕೊಂಡ ಬಂಧನ**

ಕೋ. ಚೆಯವರು ಬೆಂಗಳೂರಿನ ಮೇಯೊ ಹಾಲ್‌ನಲ್ಲಿ ನ್ಯಾಯಾಧೀಶರಾಗಿ ಅಧಿಕಾರವಹಿಸಿಕೊಂಡರು. ಆ ತರುವಾಯ ಅವರು ತಮ್ಮ ನ್ಯಾಯಾಧೀಶನ ವೃತ್ತಿಗೆ ಸಂಬಂಧಿಸಿದಂತೆ ಹೃದಯ ನೈವೇದ್ಯ ಎಂಬ ಕವನ ಸಂಕಲನದ 'ಕರಿ ಕಪಣಿಯ ಸನ್ಯಾಸಿ' ಎಂಬ ಕವನದಲ್ಲಿ ಹೀಗೆ ಹೇಳಿಕೊಂಡಿದ್ದಾರೆ.

ಸರಕಾರ ನೌಕರಿಯ ಸೇರುವುದೆ ಇಲ್ಲೊಂದು
ದರಕಾರ ಇಲ್ಲದೆಯೆ ಘೋಂಕರಿಸುತ್ತಿದೆ।........
............................................................
............ಹರಸಮ್ಮ ತಲೆಬಾಗಿ ಬೇಡುತಿಹೆನು।

ಕೋ. ಚೆಯವರು ನ್ಯಾಯಾಧೀಶರಾದ ತರುವಾಯ ತಮಗೆ ಬಂದ ಅಧಿಕಾರ ಎಂತದ್ದು? ಬೇರೆಯವರಿಗೆ ಅಜೀವ ಶಿಕ್ಷೆಯನ್ನು ನೀಡಬಹುದು ಎಂದು ಜನ ಹೇಳುತ್ತಾರೆ. ಆದರೆ ನನಗೆ ಬಂದಿರುವ ಅಧಿಕಾರ ತಮಗೆ ಅಜೀವ ಶಿಕ್ಷೆ ವಿಧಿಸಿದಂತಿದೆ ಎಂದು ಹೇಳುತ್ತಾರೆ. ಏಕೆಂದರೆ ನ್ಯಾಯಾಧೀಶನಾದವನದು ವಕೀಲರು ಏನು ಹೇಳುತ್ತಾರೋ ಅದನ್ನು ಕೇಳಿ ವಾದ-ವಿವಾದಗಳನ್ನು ಕೇಳಿದ ಮೇಲೆ ತೀರ್ಪುಕೊಡುವ ಕೆಲಸವೇ ಹೊರತು, ನನ್ನ ಬಂಧು ಬಳಗ, ಆಪ್ತಮಿತ್ರರು, ಜಾತಿ, ಕುಲ, ಬೇರೆಯವರ ಹಂಗು ಅಥವಾ ಬೇರೆಯವರ ಮೇಲಿನ ವೈಯಕ್ತಿಕ ದ್ವೇಷ ಮುಂತಾದುವುಗಳಿಗೆ ಕಟ್ಟುಬೀಳುವಂತದ್ದಲ್ಲ ಎಂದು ಅರಿತಿದ್ದ ಕೋ. ಚೆ ತಮ್ಮಷ್ಟಕ್ಕೆ ತಾವೇ ಕೆಲವು ಬಂಧನಗಳನ್ನು ಹಾಕಿಕೊಂಡಿದ್ದರು. ಇದು ಪ್ರತಿಯೊಬ್ಬ ನ್ಯಾಯಾಧೀಶನು ಪಾಲಿಸಬೇಕಾದ ಮೊದಲ ಗುಣವೆಂದು ತಿಳಿದಿದ್ದರು.

**ಹಳೆಯ ಕೇಸುಗಳಿಗೆ ಮುಕ್ತಿ**

ಕೋ. ಚೆಯವರು ಬೆಂಗಳೂರಿನಿಂದ ಬೆಳಗಾವಿಗೆ ಅಧಿಕಾರ ವಹಿಸಿಕೊಂಡ ಮೂರು ತಿಂಗಳ ಒಳಗೆ ವರ್ಗಾವಣೆ ಮಾಡಿ ಬಿಟ್ಟರು. ಹಾಗಾಗಿ ದಿನಾಂಕ ೬-೩-೧೯೬೬ ರಂದು ಪ್ರಥಮ ಅಡಿಷನಲ್ ಜಿಲ್ಲಾ ನ್ಯಾಯಾಧೀಶರಾಗಿ ಅಧಿಕಾರವನ್ನು ಬೆಳಗಾವಿಯಲ್ಲಿ ವಹಿಸಿಕೊಂಡರು.

ಬೆಳಗಾವಿಯಲ್ಲಿ ಅಂದು ಮೂವರು ಜಿಲ್ಲಾ ನ್ಯಾಯಾಧೀಶರಾಗಿ ಕೆಲಸ ಮಾಡುತ್ತಿದ್ದರು. ಅವರಲ್ಲಿ ಒಬ್ಬೊಬ್ಬರು ಒಂದು ತಿಂಗಳು ಸಿವಿಲ್ ಖಟ್ಲೆಗಳನ್ನು ವಿಚಾರಿಸುತ್ತಿದ್ದರು. ಇನ್ನಿಬ್ಬರು ಕ್ರಿಮಿನಲ್ ಖಟ್ಲೆಗಳನ್ನು ವಿಚಾರಿಸುತ್ತಿದ್ದರು. ಕೋ. ಚೆಯವರು ನ್ಯಾಯಾಧೀಶರಾಗುವ ಮೊದಲು ಪಬ್ಲಿಕ್ ಪ್ರಾಸಿಕ್ಯೂಟರ್ ಆಗಿದ್ದುದ್ದರಿಂದ ಸಿವಿಲ್ ಕೇಸುಗಳನ್ನು ನಡೆಸುವ ಅವಕಾಶಗಳು ಹೆಚ್ಚಾಗಿ ದೊರೆಯಲಿಲ್ಲ. ಆದರೆ ಅವರಿಗೆ ಕ್ರಿಮಿನಲ್ ಕೇಸುಗಳಿಗಿಂತ ಸಿವಿಲ್ ಕೇಸುಗಳಲ್ಲಿ ಹೆಚ್ಚು ಆಸಕ್ತಿ ಇತ್ತು. ಹೀಗಾಗಿ ಬೆಳಗಾವಿಯಲ್ಲಿ ಹತ್ತಾರು ವರ್ಷಗಳಿಂದ ಇತ್ಯರ್ಥವಾಗದೇ ಉಳಿದಿರುವ ಕೇಸುಗಳನ್ನು ವಿಚಾರಣೆಗೆ ಒಳಪಡಿಸಲು ಮುಂದಾದರು.

**ಮೂವತ್ತೇಳು ವರ್ಷದ ಹಿಂದಿನ ಡಿಕ್ರಿಯ ವಿಚಾರಣೆ**

ಕೋ. ಚೆಯವರು ಬೆಳಗಾವಿನಲ್ಲಿ ನ್ಯಾಯಾಧೀಶರಾಗಿ ಅಧಿಕಾರ ವಹಿಸಿಕೊಂಡ ಮೂರು ವಾರದೊಳಗೆ ಮೂವ್ವತ್ತೇಳು ವರ್ಷದ ಹಿಂದಿನ ಒಂದು ಹಳೆ ಕೇಸನ್ನು ವಿಚಾರಣೆಗೆ ಒಳಪಡಿಸಲು ನಿಶ್ಚಯಿಸಿ ಒಂದು ಎಕ್ಸಿಕ್ಯೂಷನ್ ಅಪೀಲನ್ನು ಕೂಗಿದರು. ಆಗ ಎರಡೂ ಪಕ್ಷದ ವಕೀಲರು ಹಾಜರಾದರು. ಆಗ ಕೋ. ಚೆಯವರು ಅಪೀಲನ್ನು ವಿಚಾರಣೆ ಮಾಡುವುದಾಗಿ ತಿಳಿಸಿದರು. ಆ ವಿಚಾರಣೆಯಲ್ಲಿ ಒಂದು ಕಡೆ ಬಿ.ಜಿ. ಬಡಕುದರಿ ಇನ್ನೊಂದು ಕಡೆ ಜಿ.ಪಿ. ಕುಲಕರ್ಣಿ ಕಕ್ಷಿದಾರರ ಪರ ವಕಾಲತ್ತು ವಹಿಸಿಕೊಂಡಿದ್ದರು. ಅವರು ಕೇಸು ಬಹಳ ಜಟಿಲವಾದುದೆಂದು, ಮರಾಠಿ ಭಾಷೆಯಲ್ಲಿರುವ ದಸ್ತಾವೇಜುಗಳನ್ನು ಅರ್ಥೈಸುವ ತೊಂದರೆಯಿದೆ ಎಂದು ಕೋ. ಚೆಯವರಿಗೆ ತಿಳಿಸಿ ಇದು ನಿಮ್ಮಿಂದ ಸಾಧ್ಯವಾದೀತೋ ಇಲ್ಲವೋ ಎಂಬ ಸಂದೇಹವನ್ನು ವ್ಯಕ್ತಪಡಿಸಿದರು.

ಆಗ ಕೋ. ಚೆಯವರು "ಆರು ಸಾವಿರ ಮೈಲುಗಳಿಂದ ಬಂದಿದ್ದ ಅಂಗ್ರೇಜಿ ದೊರೆಗಳು ಭಾರತೀಯ ಭಾಷೆಗಳನ್ನು ಕಲಿತು ನ್ಯಾಯ ಪರಿಪಾಲನೆ ಮಾಡಿದ್ದರೆಂದಮೇಲೆ ಇಲ್ಲಿಯೇ ಹುಟ್ಟಿ ಬೆಳೆದ ಭಾರತೀಯರಿಗೆ ಏಕೆ ಸಾಧ್ಯವಾಗಬಾರದು?"[1] ಎಂದು ಕೇಳಿದರು.

ವಾಸ್ತವವಾಗಿ ದಸ್ತಾವೇಜುಗಳನ್ನು ಓದುವುದು ಕಷ್ಟವಾಗಿತ್ತು. ಏಕೆಂದರೆ ಭಾಷೆಯೂ ಕಠಿಣವಾಗಿತ್ತಲ್ಲದೆ. ಅದರಲ್ಲಿ ಕೆಲವು ಸಂಸ್ಕೃತ ಶಬ್ಧಗಳು ಸೇರಿಕೊಂಡಿದ್ದವು. ಅಲ್ಲದೇ ಕನ್ನಡ ಪದಗಳು ಕೂಡ ಸೇರಿಕೊಂಡಿದ್ದವು. ಹೀಗಾಗಿ ಓದಿ ಅರ್ಥಮಾಡಿಕೊಳ್ಳಲು ಕಷ್ಟವಾಗುತ್ತಿತ್ತು. ಆದರೆ ಕೋ. ಚೆಯವರಿಗೆ ಈ ಭಾಷೆಗಳ ಶಬ್ಧ ಪರಿಚಯ ಅಲ್ಪಮಟ್ಟಿಗೆ ಇದ್ದುದರಿಂದ ವಿಚಾರಣೆಗೆ ಸಹಕಾರಿಯಾಯಿತು.

ಬಡಕುದರಿ ವಕೀಲರು ಬಹಳ ಸಮರ್ಥರೆಂದು ಪ್ರಸಿದ್ಧರಾಗಿದ್ದರು ಅವರನ್ನು ವಿರೋಧಿಸುತ್ತಿದ್ದ ಜಿ.ಪಿ. ಕುಲಕರ್ಣಿ ಅವರೂ ಅಷ್ಟೇ ಸಮರ್ಥರು. ವಾದಕ್ಕೆ ಪ್ರತಿವಾದ ಹುಡುಕುವುದರಲ್ಲಿ ಒಬ್ಬರನ್ನು ಒಬ್ಬರು ಮೀರಿಸುತ್ತಿದ್ದರು. ಇಬ್ಬರ ವಾದದ ಸಮರ್ಥನೆಗೂ ಮುಂಬಯಿ ಹೈಕೋರ್ಟ್ ತೀರ್ಪಿನ ಬೆಂಬಲವಿತ್ತು. ಆ ಅಪೀಲನ್ನು ಕೇಳುತ್ತಾ ಕೇಳುತ್ತಾ ಅದನ್ನು ಅಷ್ಟುದಿನ ಹಿಂದಿಟ್ಟಿದ್ದರ ಮರ್ಮ ಕೋ. ಚೆಯವರಿಗೆ ಅರ್ಥವಾಗಿತ್ತು. ಅದರಲ್ಲೂ ಮೋಡಿ ಅಕ್ಷರದಲ್ಲಿ ಬರೆದ ಪುರಾತನ ದಾಖಲೆಗಳನ್ನು ಶೀರ್ಣವಾಗಿದ್ದ ದಸ್ತಾವೇಜುಗಳಿಂದ ಓದಿ ಗ್ರಹಿಸುವುದು ಇನ್ನು

ತೀಕ್ಷ್ಣವಾಗಿತ್ತು. ಅವರಿಬ್ಬರ ವಾದ-ವಿವಾದ ಎರಡು ದಿನ ನಡೆದು ಮೂರನೇ ದಿನ ಒಂದು ಗಂಟೆ ವಾದ ವಿವಾದ ಕೇಳಿದ ಕೋ. ಚೆಯವರು ಈ ಕುರಿತಂತೆ ಟಿಪ್ಪಣಿ ಮಾಡಿಕೊಂಡಿದ್ದ ಅಂಶಗಳ ಆಧಾರದ ಮೇಲೆ ಅಂದೇ ತೀರ್ಪು ನೀಡಿದರು.

ಕೋ. ಚೆಯವರು ಬೆಂಗಳೂರಿನಲ್ಲಿ ಬಾಡಿಗೆ ನಿಯಂತ್ರಣ ಅಪೀಲು ನ್ಯಾಯಾಧೀಶರಾಗಿದ್ದಾಗ ಮೇಲಿನಂತದೆ ಒಂದು ಕೇಸು ವಿಚಾರಣೆಗೆ ಬಂದಿತು. ಒಬ್ಬ ವಿಧವೆ ಐದು ವರ್ಷಗಳಿಂದ ಕೋರ್ಟಿಗೆ ಅಲೆಯುತ್ತಿದ್ದಳು. ಅವಳ ಗಂಡ ಸರ್ಕಾರಿ ನೌಕರಿಯಲ್ಲಿದ್ದು ಬೆಂಗಳೂರಿನಿಂದ ಅವರು ವರ್ಗವಾಗಿ ಹೋಗುವಾಗ ಅಲ್ಲಿದ್ದ ಮನೆಯನ್ನು ಬಾಡಿಗೆಗೆ ನೀಡಿದ್ದರು. ಆದರೆ ಅವನು ಸರ್ಕಾರಿ ನೌಕರಿಯಲ್ಲಿ ಇದ್ದಾಗಲೇ ಆಕಸ್ಮಿಕವಾಗಿ ತೀರಿಕೊಂಡನು. ಆಗ ವಿಧವೆಯಾದ ಹೆಂಗಸು ಬೆಂಗಳೂರಿನಲ್ಲಿದ್ದ ಮನೆಗೆ ಬರಲು ಅಲ್ಲಿಯವರನ್ನು ಮನೆ ಬಿಡುವಂತೆ ಕೇಳಿದಳು. ಆದರೆ ಅವರು ಮನೆ ಬಿಡಲು ನಿರಾಕರಿಸಿದಾಗ ಅವಳು ಒಂದು ಅರ್ಜಿಯನ್ನು ದಾಖಲು ಮಾಡಿದಳು. ಆದರೆ ಆ ಮನೆಯಲ್ಲಿದ್ದವರು ತಡೆಯಾಜ್ಞೆ ತಂದು ಪ್ರತಿ ಬಾರಿ ವಾಯಿದೆ ಮುಂದೆ ಹಾಕಿಸಿಕೊಳ್ಳುತ್ತಿದ್ದರು. ಇದರಿಂದ ಆ ಹೆಂಗಸು "ವಾಯಿದಾ ಕೊಡಬೇಡಿ ಸ್ವಾಮಿ ಅವರು ಕಳೆದ ಐದು ವರ್ಷಗಳಿಂದ ಹೀಗೆ ಕೇಳ್ತಾ ಇದ್ದಾರೆ"' ಎಂದಳು. ಅವಳ ಗೋಳನ್ನು ಕೇಳಿದ ಕೋ. ಚೆಯವರು "ವಾಯಿದಾ ಕೊಡುವುದಿಲ್ಲ ನಿಮ್ಮ ವಕೀಲರನ್ನು ಕರೆದು ತನ್ನಿ" ಎಂದರು. ಆದರೆ ವಕೀಲರಿಗೆ ಸಮಯ ನೀಡಿದರು. ಅವರು ಬರದ ಕಾರಣ ದಸ್ತಾವೇಜು ಓದಿಕೊಂಡು ಅಂದೇ ತೀರ್ಪು ನೀಡಿದರು. ತರುವಾಯ ಕೆಳಕೋರ್ಟಿನ ಡಿಕ್ರಿ (ಆಜ್ಞೆ) ಅಮಲ್ ಜಾರಿ ಆಗದಂತೆ ತಡೆಯಾಜ್ಞೆ ಕೊಡಬೇಕೆಂದು ಅವರ ವಕೀಲರು ಅರ್ಜಿಸಲ್ಲಿಸಿದರು. ಅದನ್ನು ಕೂಡ ವಜಾ ಮಾಡಿದರು. ಈ ರೀತಿಯಾಗಿ ನ್ಯಾಯಾಲಯದಲ್ಲಿ ಆಗುತ್ತಿದ್ದ ವಿಳಂಬ ನೀತಿಯನ್ನು ಕೋ. ಚೆಯವರು ಸಾಧ್ಯವಾದಷ್ಟು ತಡೆದು, ಶೀಘ್ರವಾಗಿ ವಿಚಾರಣೆ ಮಾಡಿ, ತಡಮಾಡದೇ ತೀರ್ಪು ನೀಡುತ್ತಿದ್ದರು.

ನ್ಯಾಯಾಧೀಶರಾದವರು ಇಬ್ಬರಿಗೂ ತೃಪ್ತಿ ಕೊಡುವಂತಹ ತೀರ್ಪು ಕೊಡಲು ಆಗುವುದಿಲ್ಲ ನಿಜ. ಆದರೆ ನ್ಯಾಯ ಯಾರ ಕಡೆಗಿದೆಯೊ ಅವರಿಗೆ ಆದಷ್ಟು ಶೀಘ್ರ ತೀರ್ಪು ಕೊಡಬೇಕಾದದ್ದು ನ್ಯಾಯಾಧೀಶನ ಕರ್ತವ್ಯ ಎಂದು ಕೋ. ಚೆಯವರು ಭಾವಿಸಿದಂತೆ ಕಂಡು ಬರುತ್ತದೆ.

**ಮಾತು ಬದಲಿಸುವ ವಕೀಲ**

ಕೋ. ಚೆಯವರು ಶಿವಮೊಗ್ಗದಲ್ಲಿ ನ್ಯಾಯಾಧೀಶರಾಗಿದ್ದಾಗ ಸೆಷನ್ಸ್ ಕೇಸುಗಳು ಬಹಳ ಉಳಿದಿದ್ದವು. ಶಿವಮೊಗ್ಗದಲ್ಲಿ ಅಂದು ಆರ್.ಟಿ.ಓ. ಕೇಸುಗಳೆ ಹೆಚ್ಚಿದ್ದವು. ಅಂತದರಲ್ಲಿ ಸುಮಾರು ಹತ್ತಿಪ್ಪತ್ತು ಹಳೆ ಕೇಸುಗಳು ೬-೭ ವರ್ಷಗಳಿಂದ ಅರ್ಧ ವಿಚಾರಣೆಯಾಗಿ ನಿಂತು ಹೋಗಿದ್ದವು. ಆರ್.ಟಿ.ಓ ಕೇಸುಗಳೆಂದರೆ ದೇಶದ ನಾನಾ ಶಹರಗಳಿಂದ ಆರ್.ಟಿ.ಓ. ಕಛೇರಿಗಳಿಂದ ಅಸಲು ದಸ್ತಾವೇಜುಗಳನ್ನು ತರಿಸಿಕೊಂಡು ವಿಚಾರಣೆ ಮಾಡಬೇಕಾಗಿತ್ತು. ಇಂತಹ ಹಲವು ಕಾರಣದಿಂದ ಇವುಗಳ ವಿಚಾರಣೆ ತ್ವರಿತ ಗತಿಯಲ್ಲಿ ಆಗುತ್ತಿರಲಿಲ್ಲ.

ಇಂತಹ ಸೆಷನ್ಸ್ ಕೇಸು ವಿಚಾರಣೆ ವಹಿಸಿಕೊಂಡ ವಕೀಲರೊಬ್ಬರು ನಡೆದುಕೊಂಡ

ರೀತಿ ಎಂತದ್ದು ಅಂದರೆ, ನ್ಯಾಯಾಧೀಶರು (ಕೋ. ಚೆಯವರು) ವಿಚಾರಣೆಗೆ ಒಳಪಡಿಸಿ ಸಾಕ್ಷಿ ಕನ್ನಡದಲ್ಲಿ ಹೇಳಿದ್ದನ್ನೆಲ್ಲ ಇಂಗ್ಲಿಷಿಗೆ ತರ್ಜುಮೆ ಮಾಡಿ, ಬೆರಳಚ್ಚು ಮಾಡಿಸುತ್ತಿದ್ದರು. ಅಲ್ಲದೆ ಸಾಕ್ಷಿಗಳ ವಿಚಾರಣೆಯು ಬಹಿರಂಗವಾಗಿ ನಡೆಯುತ್ತಿದ್ದರಿಂದ ನ್ಯಾಯಾಧೀಶರಾರು ನ್ಯಾಯಾಲಯದಲ್ಲಿ ಬರೆಸುತ್ತಿರುವಾಗ ಸಾಕ್ಷಿ ಹೇಳಿದಿದ್ದುದನ್ನು ಬರೆದುಕೊಳ್ಳುವುದಾಗಲಿ ಹೇಳಿದ್ದನ್ನು ಬರೆಯದೆ ಇರುವುದಾಗಲಿ ಅಥವಾ ಹೇಳಿದ ಮಾತನ್ನು ಬೇರೆ ಬಣ್ಣ ಹಚ್ಚಿ ಬರೆಯುವುದಾಗಲಿ ಸಾಧ್ಯವಿರಲಿಲ್ಲ. ಆದರೆ ತರ್ಜುಮೆ ಮಾಡಿ ಹೇಳುತ್ತಿದ್ದಾಗ ವಾಕ್ಯ ಇನ್ನೂ ಮುಗಿಯುವುದರ ಮೊದಲೇ ಆಪಾದಿತರ ಪರ ವಕೀಲರೊಬ್ಬರು ಸಾಕ್ಷಿಯನ್ನು ಹಾಗೆ ಹೇಳಲಿಲ್ಲ. ಹೀಗೆ ಹೇಳಿದ ಎಂದು ಮಾತು ಬದಲಾಯಿಸುತ್ತಿದ್ದ. ಆಗ ಕೋ. ಚೆಯವರು ಹಾಗಾದರೆ ಇನ್ನೊಮ್ಮೆ ಕೇಳಿ ದಿಟಪಡಿಸಿಕೊಳ್ಳೋಣ ಎಂದು ಮತ್ತೆ ಕೇಳಿದಾಗ ಸಾಕ್ಷಿ ಮತ್ತೆ ಅದೇ ಉತ್ತರವನ್ನು (ಕೋ. ಚೆಯವರು ಬರೆದುಕೊಂಡ ಅಥವಾ ಬರೆದುಕೊಳ್ಳಲಿದ್ದ) ಕೊಡುತ್ತಿದ್ದರು. ಆಗ ಆ ವಕೀಲರು "ಸಾಕ್ಷಿ ಹುಷಾರಾಗಿ ಬಿಟ್ಟು ಮತ್ತೆ ಕೇಳಿದಾಗ ಮಾತು ತಿರುವಿ ಹಾಕಿದ" ಎಂದು ವಾದಿಸುತ್ತಿದ್ದರು. ವಕೀಲರು ಹೀಗೆ ಪದೇ ಪದೇ ಮಧ್ಯಪ್ರವೇಶಿಸುತ್ತಿದ್ದರಿಂದ ಕೋ. ಚೆಯವರು "ಸ್ವಲ್ಪ ತಡೆಯಿರಿ ಹೀಗೇಕೆ ಮಾಡುತ್ತೀರಿ ಸಮಾಧಾನದಿಂದ ಮಾಡೋಣ" ಎಂದು ಹೇಳುತ್ತಿದ್ದರು. ಆದರೆ ಆ ವಕೀಲರು ನೀವು ಬೇಕಾದ್ದು ಬರೆದುಕೊಂಡರೆ ನಾನಿಲ್ಲಿ ಮೂಕ ಪ್ರೇಕ್ಷಕನಾಗಿ ಕುಳಿತಿರಲೋ? ನನ್ನ ಪಕ್ಷಿಗಾರನ ಹಿತ ರಕ್ಷಣೆ ಮಾಡಬೇಕಾದ್ದು ನನ್ನ ಕರ್ತವ್ಯ" ಎಂದು ನ್ಯಾಯಾಧೀಶರೇ ಸರಿ ಇಲ್ಲವೇನೋ ಎಂಬುವ ರೀತಿಯಲ್ಲಿ ಮಾತನಾಡುತ್ತಿದ್ದ. ಆಗ ಕೋ. ಚೆಯವರು ವಿಪರೀತ ಕೋಪ ಮಾಡಿಕೊಂಡು ನ್ಯಾಯಾಲಯದ ಪೀಠಕ್ಕೆ ನಮಸ್ಕರಿಸಿ ಐದು ನಿಮಿಷ ತಡೆಯಿರಿ ಎಂದು ತಮ್ಮ ಕೊಠಡಿಗೆ ತೆರಳಿದರು. ಆಗ ವಕೀಲರು ಮಾತು ಬದಲಿಸುವುದನ್ನು ಹೇಗೆ ತಡೆಯಬೇಕೆಂದು ಯೋಚಿಸಿ ಮತ್ತೊಬ್ಬ ಶೀಘ್ರ ಲಿಪಿಕಾರರನ್ನು ಕರೆಸಿ, ವಕೀಲರ ಮಾತನ್ನು ಚಾಚೂ ತಪ್ಪದೆ ಬರೆದು ಕೊಳ್ಳಬೇಕೆಂದು ತಿಳಿಸಿದರು. ಹತ್ತು ನಿಮಿಷದ ನಂತರ ವಿಚಾರಣೆಯನ್ನು ಮತ್ತೊಂದು ಬಾರಿ ಒಳಪಡಿಸಿ, ಪ್ರತಿ ಶಬ್ದವನ್ನು ಬರೆದುಕೊಳ್ಳುವಂತೆ ಶೀಘ್ರಲಿಪಿಗಾರನಿಗೆ ಸೂಚಿಸಿದರು. ಆಗ ವಕೀಲರು ಮತ್ತೆ ನಡುವೆ ಬಾಯಿ ಹಾಕಲೇ ಇಲ್ಲ. ಹೀಗೆ ಮಾತು ಬದಲಿಸುವ ವಕೀಲನಿಗೆ ನಡುವೆ ಮಾತನಾಡಲು ಅವಕಾಶ ಸಿಗದಂತೆ ಮಾಡಿದರು.

**ಕೊಲೆಗಾರನಿಗೆ ಮರಣದಂಡನೆ ಶಿಕ್ಷೆ**

ಶಿವಮೊಗ್ಗ ಜಿಲ್ಲೆಯ ಕೊಮ್ಮನಾಳು ಪೋಸ್ಟ್ ಆಫೀಸಿನಲ್ಲಿ ರನ್ನರ್ ಆಗಿ ಕೆಲಸ ಮಾಡುತ್ತಿದ್ದ ಗೋವಿಂದಪ್ಪ ಎಂಬುವನನ್ನು ೨೧-೭-೧೯೬೭ರಂದು ಅಂಚೆ ಚೀಲವನ್ನು ಶಿವಮೊಗ್ಗ ಟಪಾಲ್ ಬಸ್ಸಿಗೆ ಕೊಡಲೆಂದು ಹೋದವನು ಮರಳಿ ಬಂದಿಲ್ಲದಿರುವುದರಿಂದ ಬ್ರಾಂಚ್ ಪೋಸ್ಟ್‌ಮಾಸ್ಟರ್ ಪ್ರಧಾನ ಪೋಸ್ಟ್ ಆಫೀಸಿಗೆ ದೂರು ನೀಡಿದ ಈ ಹಿನ್ನಲೆಯಲ್ಲಿ ಅಂಚೆ ಇನ್ಸ್‌ಪೆಕ್ಟರ್ ಬಂದು ತಪಾಸಣೆ ನಡೆಸಿ, ಕೊನೆಗೆ ಪೊಲೀಸರಿಗೆ ದೂರು ನೀಡಲಾಗಿತ್ತು. ಆ ಕುರಿತು ದೂರು ಸ್ವೀಕರಿಸಿದ ಪೊಲೀಸರು ಕಾಣೆಯಾಗಿದ್ದ ಗೋವಿಂದಪ್ಪನ ಬಗ್ಗೆ ತೀವ್ರ ಶೋಧನೆ ನಡೆಸಿದರಾದರು ಏನು ಪ್ರಯೋಜನವಾಗಲಿಲ್ಲ. ಕೊನೆಗೆ ಪೊಲೀಸರು ಕೈಚೆಲ್ಲಿ

ಕುಳಿತುಬಿಟ್ಟರು. ಆದರೆ ಕೊಮ್ಮನಾಳು ಪಶ್ಚಿಮಕ್ಕಿರುವ ಆಯನೂರು ಕಾಡಿನ ಮಧ್ಯದಲ್ಲಿ ಭೀಮನಾಯ್ಕ ಎಂಬ ಹುಡುಗ ಧನಕಾಯಲು ಹೋಗಿದ್ದ, ಅವನಿಗೆ ಒಂದು ಸತ್ತ ಮನುಷ್ಯನ ಹೆಣ ಕಂಡು ಊರಿನ ಜನರಿಗೆ ತಿಳಿಸಿದನು. ಊರಿನವರು ಪೊಲೀಸರಿಗೆ ದೂರು ನೀಡಿದಾಗ ಪೊಲೀಸರು ಅದು ಗೋವಿಂದಪ್ಪನ ಶವ ಎಂದು ಗೊತ್ತಾಯಿತು. ಆಗ ಪೊಲೀಸರು ತನಿಖೆಯನ್ನು ಚುರುಕುಗೊಳಿಸಿ ಆಪಾದಿತರನ್ನು ಬಂಧಿಸಿದರು. ಆಪಾದಿತರಲ್ಲಿ ಗೋವಿಂದಪ್ಪನ ಹೆಂಡತಿ, ಗೋವಿಂದಪ್ಪನ ಮನೆಯಲ್ಲಿ ಕೆಲಸಮಾಡುವ ಕೆಲಸದಾಳು ತಿಮ್ಮ ಮತ್ತು ಅಣ್ಣನ ಮಗ ಗಂಗ ಪ್ರಮುಖರು.

ನಡೆದ ಘಟನೆ ಏನೆಂದರೆ ತಿಮ್ಮ ಗೋವಿಂದಪ್ಪನ ಹೆಂಡತಿಯ ಜೊತೆ ಅಕ್ರಮ ಸಂಬಂಧ ಇರಿಸಿಕೊಂಡಿದ್ದು, ಅವಳನ್ನು ಸಂಪೂರ್ಣ ತನ್ನವಳನ್ನಾಗಿ ಮಾಡಿಕೊಳ್ಳಲು ಗೋವಿಂದಪ್ಪನ ತಲೆಯನ್ನು ಕತ್ತರಿಸಿದರು. ಈ ವಿಚಾರ ನ್ಯಾಯಾಲಯದಲ್ಲಿ ಇತ್ಯರ್ಥವಾಗಿ ತಿಮ್ಮನನ್ನು ಅಪರಾಧಿಯೆಂದು ತೀರ್ಪುಕೊಟ್ಟ "ನಿಮಿತ್ತವಾಗಿ ನಂಬಿದವನನ್ನು ವಂಚಿಸಿ ನಿರ್ಜನ ಪ್ರದೇಶದಲ್ಲಿ ನಿರ್ದಯೆಯಿಂದ ತಲೆ ಕಡಿದು ಅಮಾನುಷ ಮಾನವಹತ್ಯೆ ಮಾಡಿದ್ದರಿಂದ" ಆರೋಪಿಗೆ ಮರಣದಂಡನೆಯನ್ನು ಕೋ. ಚೆಯವರು ವಿಧಿಸಿದರು.

**ಜಾತಿಯಿಂದ ಉಚ್ಚ ನ್ಯಾಯಾಲಯದ ನ್ಯಾಯಾಧೀಶನ ಸ್ಥಾನ ತಪ್ಪಿತ್ತು**

ಕೋ. ಚೆಯವರು ೧೯೭೭ರಲ್ಲಿ ನಿವೃತ್ತಿಯಾದರು. ಆದರೆ ನಿವೃತ್ತಿಯ ಪೂರ್ವದಲ್ಲಿ ಅವರನ್ನು ಉಚ್ಚ ನ್ಯಾಯಾಲಯದ ನ್ಯಾಯಾಧೀಶನನ್ನಾಗಿ ನೇಮಕ ಮಾಡಬೇಕಿತ್ತು. ಆದರೆ ಶ್ರೇಷ್ಠ ನ್ಯಾಯಮೂರ್ತಿ ಗೋವಿಂದಭಟ್ಟರು ಹಿಂದೆ ಉಚ್ಚ ನ್ಯಾಯಾಲಯದಲ್ಲಿನ ಕೋ. ಚೆಯವರ ಸೇವಾ ಹಿರಿತನವನ್ನು ಪರಿಗಣಿಸದೆ ಅವರಿಗಿಂತ ಕೆಳಗಿದ್ದವನನ್ನು ಶಿಫಾರಸು ಮಾಡಿದ್ದರು. ಅದನ್ನು ಸರ್ವೋಚ್ಚ ನ್ಯಾಯಾಲಯವು ಜಿಲ್ಲಾ ನ್ಯಾಯಾಧೀಶರ ರಹಸ್ಯ ಸೇವಾ ವರದಿಯನ್ನು ತರಿಸಿಕೊಂಡು ಕೋ. ಚೆಯವರ ಮತ್ತು ಅವರಿಗಿಂತ ಹಿರಿತನದಲ್ಲಿದ್ದವರ ಮೇಲೆ ಯಾವುದೇ ಅಕ್ಷೇಪಣೆ ಇಲ್ಲದಿರುವಾಗ ಇವರುಗಳಿಗಿಂತ ಕೆಳಗಿನವರನ್ನು ಸಿಫಾರಸ್ಸು ಮಾಡಿರುವುದನ್ನು ಪ್ರಶ್ನಿಸಿ ಸಿಫಾರಸ್ಸನ್ನು ತಿರಸ್ಕರಿಸಿತ್ತು. ಹಾಗಾಗಿ ತಮಗೆ ಬೇಕಾದವರನ್ನು ನ್ಯಾಯಾಧೀಶರನ್ನಾಗಿ ನೇಮಕ ಮಾಡಿಕೊಳ್ಳಲು ಕೋ. ಚೆಯವರು ನಿವೃತ್ತಿ ಹೊಂದುವವರೆಗೂ ಯಾರ ಹೆಸರನ್ನು ಸಿಫಾರಸ್ಸು ಮಾಡಲಿಲ್ಲ. ಇದಕ್ಕೆ ಕಾರಣ ಅಂದಿನ ರಾಜಕೀಯ ಸ್ಥಿತಿ ಅಂದಿನ ಶ್ರೇಷ್ಠ ನ್ಯಾಯಮೂರ್ತಿ ಕಟ್ಟಾ ಲಿಂಗಾಯತ ವಿರೋಧಿಯಾಗಿದ್ದರು. ಹಾಗೆಯೇ ಅಂದಿನ ಮುಖ್ಯಮಂತ್ರಿಗಳೂ ಅಷ್ಟೇ ಕಡುವಿರೋಧಿಗಳಾಗಿದ್ದರು ಎಂಬುದು ಕೋ. ಚೆಯವರು ಉಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ಆಯ್ಕೆಯಾಗದಿರುವುದಕ್ಕೆ ಈ ರಾಜಕೀಯ ವ್ಯಕ್ತಿಗಳಲ್ಲಿ ಅಂದು ಬೇರೂರಿದ್ದ ಲಿಂಗಾಯತರ ವಿರೋಧ ನೀತಿ ಕಾರಣವೆಂಬುದನ್ನು ಗುರುತಿಸಬಹುದು.

ಈ ರೀತಿಯಾಗಿ ಕೋ. ಚೆಯವರು ರಾಜ್ಯದ ಅನೇಕ ಜಿಲ್ಲೆಗಳಲ್ಲಿ ನ್ಯಾಯಾಧೀಶರಾಗಿ ಕಾರ್ಯ ನಿರ್ವಹಿಸಿದರು. ಅಲ್ಲಿ ನೂರಾರು ಕೇಸುಗಳನ್ನು ವಿಚಾರಣೆಗೆ ಒಳಪಡಿಸಿ ತಡಮಾಡದೇ

ತೀರ್ಮ ನೀಡುತ್ತಿದ್ದರು. ಕೆಲವು ಕೇಸುಗಳು ವಿಚಾರಣೆಗೆ ಬಂದಾಗ ಕೋ. ಚೆಯವರು ಅಪರಾಧವನ್ನು ಯಾವ ಕಾರಣಕ್ಕೆ ಮಾಡಲಾಗಿದೆ ಎಂಬುದನ್ನು ಗಮನಿಸಿ, ಆರೋಪಿ ಯಾವ ಪರಿಸ್ಥಿತಿಯಲ್ಲಿ ಅಪರಾಧ ಮಾಡಿದ್ದಾನೆ ಎಂಬುದನ್ನು ತಿಳಿದು ಶಿಕ್ಷೆ ವಿಧಿಸುತ್ತಿದ್ದರು.

ಈ ರೀತಿಯಾಗಿ ಕೋ. ಚೆಯವರು ಬೆಂಗಳೂರು, ಮಂಗಳೂರು, ಬೆಳಗಾವಿ, ಶಿವಮೊಗ್ಗ, ವಿಜಾಪುರ ಮುಂತಾದ ಜಿಲ್ಲೆಗಳಲ್ಲಿ ನ್ಯಾಯಾಧೀಶರಾಗಿ ಹನ್ನೊಂದು ವರ್ಷ ಮೂರು ತಿಂಗಳ ಕಾಲ ಸೇವೆ ಸಲ್ಲಿಸಿದ್ದರು. ಆದರೆ ಅವರನ್ನು ಉಚ್ಚ ನ್ಯಾಯಾಲಯದ ನ್ಯಾಯಾಧೀಶರನ್ನಾಗಿ ಮಾಡಲು ಜಾತಿ ಅಡ್ಡ ಬಂದ್ದಿದ್ದು ತುಂಬಾ ವಿಷಾದದ ಸಂಗತಿ.

**೫.೩ ಪುನಃ ನ್ಯಾಯವಾದಿಗಳಾಗಿ ಕೋ. ಚೆ**

ಕೋ. ಚೆಯವರು ಒಬ್ಬ ಜಿಲ್ಲಾ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸಿದ್ದರಿಂದ ಅವರು ಸರ್ಕಾರದ ಕೆಲಸದಿಂದ ನಿವೃತ್ತಿ ಹೊಂದಬೇಕಾಗಿತ್ತು. ಅವರು ನಿವೃತ್ತಿ ಹೊಂದಿದ ತಕ್ಷಣ ಮುಂದೇನು ಮಾಡುವುದು ಎಂಬ ವ್ಯಾಕುಲಕ್ಕೆ ಒಳಗಾಗಿದ್ದರು. ಆದರೆ ಅವರಲ್ಲಿ ಜಿಲ್ಲಾ ನ್ಯಾಯಾಧೀಶನಾಗಿ ತನ್ನ ಮುಂದೆ ವಿಚಾರಣೆ ಮಾಡುತ್ತಿದ್ದವರ ಅಕ್ಕ-ಪಕ್ಕದಲ್ಲಿ ಕುಳಿತು ಕೊಂಡು ಹೇಗೆ ವಕೀಲನಾಗಿ ಕಾರ್ಯ ನಿರ್ವಹಿಸುವುದು ಎಂಬುವ ಆತಂಕ ಉಂಟಾಗಿದ್ದು ನಿಜ. ಏಕೆಂದರೆ ನ್ಯಾಯಾಧೀಶರಾಗಿದ್ದಾಗ ಜಿಲ್ಲಾ ನ್ಯಾಯಾಲಯದಲ್ಲಿ ವಕಾಲತ್ತು ನಡೆಸುವ ವಕೀಲರು ಇವರು ನ್ಯಾಯಾಲಯಕ್ಕೆ ಬಂದಾಗ ಎದ್ದು ನಿಂತು ನಮಸ್ಕರಿಸುತ್ತಿದ್ದರು. ಅಲ್ಲದೆ ಇವರಿಂದ ನೇಮಕವಾಗಿದ್ದ ಕೆಲಸಗಾರರು ಇವರ ಮೇಲೆ ಅಪಾರ ಗೌರವವನ್ನು ಹೊಂದಿದ್ದರು. ಈಗ ವಕೀಲನಾಗಿ ಅವರ ಮುಂದೆ ಕುಳಿತುಕೊಂಡರೆ ಅವರಿಗೆ ಸಂಕೋಚವಾಗುತ್ತದೆ ಎಂಬುದು ಕೋ. ಚೆಯವರ ಚಿಂತೆಯಾಗಿತ್ತು. ಆದರೆ ಆ ಸಮಯದಲ್ಲಿ "ಮುಂಬೈ ನಿವೃತ್ತ ಶೇಷ್ಠ ನ್ಯಾಯಮೂರ್ತಿ ಎಂ.ಸಿ. ಛಾಗಲಾ ಸರ್ವೋಚ್ಛ ನ್ಯಾಯಾಲಯದಲ್ಲಿ ಯಾವುದೊ ಒಂದು ಕೇಸಿನಲ್ಲಿ ಹಾಜರಾಗಿ ವಾದಿಸಿದರೆಂಬ ಸುದ್ಧಿ ಬಂದಿತ್ತು" ಅದನ್ನು ಓದಿದಾಗ, ಅಂಥ ದೊಡ್ಡವರು ಕೇಂದ್ರ ಸರ್ಕಾರದಲ್ಲಿ ಶಿಕ್ಷಣ ಮಂತ್ರಿಗಳು, ಯುಕ್ತ ರಾಷ್ಟ್ರ ಸಂಘದಲ್ಲಿ ನಮ್ಮ ದೇಶದ ಪ್ರತಿನಿಧಿಗಳೂ ಆಗಿದ್ದ ನ್ಯಾಯಮೂರ್ತಿ ಗಜೇಂದ್ರಗಡ, ನ್ಯಾಯ ಮೂರ್ತಿ ಭಗವತಿ ಮುಂತಾದ ಮಹಾನುಭಾವರೆ ತಮಗಿಂತ ವೃತ್ತಿಯಲ್ಲಿ ಬಹು ಕಿರಿಯರಾಗಿದ್ದ ಕೆಳ ನ್ಯಾಯಾಲಯಗಳಲ್ಲಿ ವಕಾಲತ್ತು ಮಾಡುತ್ತಿರುವಾಗ ನಾನು ಏಕೆ ಹಿಂಜರಿಯಲಿ ಎಂಬ ತರ್ಕದಿಂದ ಕೊನೆಗೆ ನ್ಯಾಯಾಲಯದಲ್ಲಿ ವಕಾಲತ್ತು ಮಾಡಲು ನಿರ್ಧರಿಸಿದರು.

**ವಕಾಲತ್ತಿಗೆ ಸ್ವಯಂ ನಿರ್ಮಿತ ನಿರ್ಬಂಧನೆಗಳು**

ಕೋ. ಚೆಯವರು ಜಿಲ್ಲಾ ನ್ಯಾಯಧೀಶರಾಗಿ ನಿವೃತ್ತಿ ಹೊಂದಿದ ನಂತರ ವಕಾಲತ್ತು ಆರಂಭಿಸಲು ನಿರ್ಧರಿಸಿದರು. ಆದರೆ ಅವರು ಕೆಲವು ಸ್ವಯಂ ನಿರ್ಮಿತ ನಿರ್ಬಂಧನೆಗಳನ್ನು ತಮ್ಮ ವಕೀಲ ಜೀವನದಲ್ಲಿ ಹಾಕಿಕೊಂಡರು. ಮೊದಲನೆಯದು ಜಿಲ್ಲಾ ನ್ಯಾಯಾಲಯಗಳಿಗಿಂತ ಕೆಳಗಿನ ನ್ಯಾಯಾಲಯದಲ್ಲಿ ವಕಾಲತ್ತು ಮಾಡದಿರುವುದು. ಏಕೆಂದರೆ ಅವರು ಜಿಲ್ಲಾ ನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಅಲ್ಲಿಯ ಕೆಲವು ವಕೀಲರು

ಕೋ. ಚೆ ವಕಾಲತ್ತು ಆರಂಭಿಸುವ ಸಮಯದಲ್ಲಿ ಸಿವಿಲ್ ಜಡ್ಜ್ ಆಗಿ ನೇಮಕಗೊಂಡಿದ್ದರು. ಅದಕ್ಕಾಗಿ ಅವರ ಮುಂದೆ ವಾದ ಮಾಡುವಾಗ ನ್ಯಾಯಾಧೀಶರು ತಮ್ಮ ಮೇಲಿನ ಗೌರವದಿಂದ ಅವರಿಗೆ ನಿರ್ಭಯದಿಂದ ಕಾರ್ಯ ನಿರ್ವಹಿಸುವುದು ಕಷ್ಟವಾಗುತ್ತದೆ ಎಂದು ಈ ನಿರ್ಬಂಧ ಹಾಕಿಕೊಂಡರು.

ಹೀಗೆ ಕಟ್ಟು ನಿಟ್ಟಾಗಿ ಈ ನಿಯಮವನ್ನು ಪಾಲಿಸಿಕೊಂಡು ಬಂದರೂ ಒಂದೆರಡು ಸಂಕಟ ಪರಿಹಾರಕ್ಕಾಗಿ ಆಧೀನ ನ್ಯಾಯಾಲಯಕ್ಕೆ ಹಾಜರಾಗುವ ಸಂದರ್ಭಗಳು ಬಂದಿದ್ದವು. ಅಂತಹ ಸಂದರ್ಭಗಳನ್ನು ಬಿಟ್ಟರೆ ಬೇರೆ ಯಾವುದೇ ಕಾರಣಕ್ಕೂ ತಾವು ಹಾಕಿಕೊಂಡ ನಿರ್ಬಂಧ ಸಡಿಲಿಸಲಿಲ್ಲ.

**ಪ್ರಥಮ ರಿಟ್ ಅರ್ಜಿ ದಾಖಲು**

ಕೋ. ಚೆಯವರು ವಕಾಲತ್ತನ್ನು ಮತ್ತೆ ಆರಂಭಿಸಿದ ಮೇಲೆ ದಾಖಲು ಮಾಡಿದ ಮೊಟ್ಟ ಮೊದಲ ರೀಟ್ ಅರ್ಜಿ ಪ್ರೊ. ಬಿ. ವಿರೂಪಾಕ್ಷಪ್ಪನವರ ಸೇವಾ ಹಿರಿತನದ ಆಧಾರದ ಮೇಲೆ ಭಡ್ತಿ ನೀಡದಿರುವುದರ ಕುರಿತುದಾಗಿತ್ತು.

ಪ್ರೊ. ಬಿ. ವಿರೂಪಾಕ್ಷಪ್ಪನವರು ಕೊಲಿಜಿಯೇಟ್ ಶಿಕ್ಷಣ ಇಲಾಖಾ ನಿರ್ದೇಶಕರ ಹುದ್ದೆಗೆ ಸಂಬಂಧಿಸಿದಂತೆ ಕೋ.' ಚೆಯವರ ಮೂಲಕ ರೀಟ್ ಅರ್ಜಿ ದಾಖಲಿಸಿದರು. ಇಲ್ಲಿ ಶಿಕ್ಷಣ ಇಲಾಖಾ ನಿರ್ದೇಶಕರ ಹುದ್ದೆಯನ್ನು ಸೇವಾ ಹಿರಿತನದ ಮೇಲೆ ಪ್ರೊ. ಬಿ. ವಿರೂಪಾಕ್ಷಪ್ಪನವರಿಗೆ ನೀಡದೆ ಇವರಿಗಿಂತ ಕಿರಿಯರಾಗಿದ್ದ "ಸೆಲ್ವಿದಾಸ್ ಎಂಬ ಮಹಿಳೆಗೆ ಕೊಟ್ಟಿದ್ದರು" ಈ ಕುರಿತು ವಿಚಾರಣೆಗೆ ನ್ಯಾಯಮೂರ್ತಿ ಜೋಯಿಸರ ಮುಂದೆ ಬಂತು. ಅವರು ಸರ್ಕಾರಿ ಕಡತಗಳನ್ನು ಪ್ರಾರಂಭಿಸಿದಾಗ ಅರ್ಜಿದಾರರು ಸೇವಾ ಹಿರಿತನದಲ್ಲಿ ಮೇಲೆ ಇದ್ದಾರೆಂದು ಅವರ ಸೇವೆ ನಿಷ್ಕಳಂಕವಾಗಿದೆಯೆಂದೂ ನಮೂದಿಸಿ "Of course, Prof Virupakshappa and selvidas are eqvally qualified ಎಂದು ಬರೆದರು. ತರುವಾಯ 'As Mr. Virupakshappa has only a short period of just two years service Smt. Selvidas is selected' ಎಂದು ಆಯ್ಕೆ ಮಾಡಿದ ಕಾರಣ"[೭] ವನ್ನು ಸರ್ಕಾರ ತೋರಿಸಿತು. ಆದರೆ ನ್ಯಾಯಮೂರ್ತಿ ಜೋಯಿಸರು ಆ ಕಾರಣಗಳು ನ್ಯಾಯ ಸಮ್ಮತವಾಗಿಲ್ಲ ಎಂದು ಅಭಿಪ್ರಾಯ ಪಟ್ಟರು.

'ಕೊಲಿಜಿಯೇಟ್ ಶಿಕ್ಷಣ ಇಲಾಖೆಗೆ ನಿರ್ದೇಶಕರ ನೇಮಕಾತಿ ನಿಯಮಗಳಲ್ಲಿ ನೇಮಕವಾಗ ಬೇಕಾಗಿರುವ ಅಭ್ಯರ್ಥಿಗಳಿಗೆ ಎರಡು ವರ್ಷಗಳಿಗಿಂತ ಹೆಚ್ಚು ಸೇವಾವಧಿ ಇರಬೇಕೆಂದು ನಿಯಮವಿಲ್ಲ. ಆಯ್ಕೆ ಮಾಡುವ ಅಧಿಕಾರ ಇಂತಿಷ್ಟೇ ಅವಧಿ ಇರಬೇಕೆಂಬ ಹೊಸ ಸೇವಾ ನಿಯಮವನ್ನು ಸೇರಿಸಲು ಅಧಿಕಾರವಿಲ್ಲ. ಆದ್ದರಿಂದ ಅರ್ಜಿದಾರರನ್ನು ಈ ಕಾರಣದಿಂದ ಕಡೆಗಣಿಸಿ ಕೈ ಬಿಟ್ಟಿದ್ದು ನ್ಯಾಯ ಬಾಹಿರ' ಎಂಬುದಾಗಿ ತೀರ್ಪು ಕೊಟ್ಟರು. ಈ ಕುರಿತು ವಾದ-ವಿವಾದಗಳು ನಡೆದಾಗಲೂ ಕೋ. ಚೆಯವರು ಕೇವಲ ಎರಡೇ ದಿನಗಳ ನಂತರ ನಿವೃತ್ತಿರಾಗಲಿದ್ದ ಮುನ್ಸಿಫರನ್ನು ಸಿವಿಲ್ ಜಡ್ಜರಾಗಿ ಭಡ್ತಿ ಕೊಟ್ಟು ನೇಮಕ ಮಾಡಿ ಅವರಿಗೆ

ಆಜ್ಞೆ ಹೊರಟ ದಿನದ ಸಂಜೆಯೇ ಅಧಿಕಾರ ಸ್ವೀಕಾರ ಮಾಡಿ ಅಂದು ಸಂಜೆಯೇ ನಿವೃತ್ತಿಯಾದ ಉದಾಹರಣೆಗಳು ಇವೆ. ಹಾಗಾಗಿ ಸರ್ಕಾರ ಸೇವಾ ಹಿರಿತನವನ್ನು ಪರಿಗಣಿಸ ಬೇಕೆಂದು ವಾದಿಸಿದರು.

ಆದರೆ ನ್ಯಾಯಾಧೀಶರು ಸೆಲ್ವಿದಾಸ್ ನೇಮಕವನ್ನು ರದ್ದು ಪಡಿಸದೇ, ಅರ್ಜಿದಾರರನ್ನು ನೇಮಕ ಮಾಡುವಂತೆ ನಿರ್ದೇಶನ ನೀಡದೆ, ಈ ಹುದ್ದೆಗೆ ಅರ್ಜಿದಾರ ಅರ್ಹನೇ ಎಂದು ಪರಿಗಣಿಸಿ ಅವರ ಸೇವಾ ಹಿರಿತನವನ್ನು ಕಡೆಗಣಿಸಬಾರದು ಎಂದು ತೀರ್ಪು ನೀಡಿದರು.

ಅದಕ್ಕೆ ಸರ್ಕಾರ ಪ್ರೊ. ಬಿ. ವಿರೂಪಾಕ್ಷಪ್ಪನವರ ಆರೋಗ್ಯ ಅಷ್ಟೊಂದು ಧೃಡವಾಗಿಲ್ಲ ಎಂಬ ಕಾರಣ ನೀಡಿ ಕೊಲಿಜಿಯೇಟ್ ಶಿಕ್ಷಣ ನಿರ್ದೇಶಕರ ಹುದ್ದೆಗೆ ಅಸಮರ್ಥರು ಎಂಬ ಕಾರಣವನ್ನು ತೋರಿಸಿದರು. ಇದು ಕೂಡ ನ್ಯಾಯಬಾಹಿರವಾಗಿದ್ದು, ಮತ್ತೊಂದು ರಿಟ್ ಅರ್ಜಿಯನ್ನು ದಾಖಲು ಮಾಡಿ ಅರ್ಜಿದಾರರ ಆರೋಗ್ಯ ಇಂದು ಹೇಗಿದೆ ಎಂಬುದು ಮುಖ್ಯವಲ್ಲ. ನೇಮಕಾತಿಯ ಆದೇಶ ನೀಡುವಾಗ ಅವರ ಆರೋಗ್ಯ ಹೇಗಿತ್ತು, ಎಂದು ಪರಿಗಣಿಸಬೇಕೆಂದು ವಾದಿಸಿದರು. ಕೊನೆಗೆ ಇವರ ವಾದವನ್ನು ನ್ಯಾಯಮೂರ್ತಿಗಳು ಒಪ್ಪಿಕೊಂಡು ಪ್ರೊ. ಬಿ. ವಿರೂಪಾಕ್ಷಪ್ಪನವರು ಕೊಲಿಜಿಯೇಟ್ ಶಿಕ್ಷಣ ನಿರ್ದೇಶಕರ ಹುದ್ದೆಗೆ ಅರ್ಹರು ಎಂದು ತೀರ್ಪು ನೀಡಿತ್ತು. ಆದರೆ ಸರ್ಕಾರ ಸೆಲ್ವಿದಾಸರಿಗೆ ಹಿಂಬಡ್ತಿ ನೀಡದೆ ಕೊಲಿಜಿಯೇಟ್ ಶಿಕ್ಷಣ ಇಲಾಖೆ ನಿರ್ದೇಶಕ ಹುದ್ದೆಗೆ ಸಮನಾದ ವಯಸ್ಕರ ಶಿಕ್ಷಣ ಇಲಾಖೆ ನಿರ್ದೇಶಕರ ಹುದ್ದೆಯನ್ನು ಸೃಷ್ಟಿಸಿ ಈ ಹೊಸ ಹುದ್ದೆಗೆ ಪ್ರೊ. ಬಿ. ವಿರೂಪಾಕ್ಷಪ್ಪನವರನ್ನು ನೇಮಿಸಿತು. ಇದು ಕೋ. ಚೆಯವರ ನಿವೃತ್ತಿ ನ್ಯಾಯಾಧೀಶರಾಗಿ ಬಂದು ವಕಾಲತ್ತು ಆರಂಭಿಸಿದ ನಂತರದ ಪ್ರಥಮ ರಿಟ್ ಅರ್ಜಿ.

**ಕಕ್ಷಿದಾರರಿಗೆ ಹಾಕಿದ ಶಾಪ!**

ಕರ್ನಾಟಕದ ಉಚ್ಚ ನ್ಯಾಯಾಲಯದ ಅಂದಿನ ಶ್ರೇಷ್ಠ ನ್ಯಾಯಮೂರ್ತಿಗಳು ೩೫೦ ಜನ ಗುಮಾಸ್ತರನ್ನು ಸಿಬ್ಬಂದಿ ವರ್ಗಕ್ಕೆ ನೇಮಕ ಮಾಡಿಕೊಂಡಿದ್ದರು. ಆದರೆ ನೌಕರಿ ಸಿಗದ ಅರ್ಜಿದಾರರೊಬ್ಬರು, ಆ ಗುಮಾಸ್ತರ ನೇಮಕ ನೌಕರಿ ಭರ್ತಿ ನಿಯಮಾವಳಿ(Rules of Recruitment)ಗೆ ವಿರೋಧವಾಗಿದೆ ಎಂದು ರಿಟ್ ಅರ್ಜಿ ದಾಖಲು ಮಾಡಿದ್ದರು. ಆ ರಿಟ್ ಅರ್ಜಿ ನಂ. ೩೮೬/೮೪ ಅನ್ನು ನ್ಯಾಯಮೂರ್ತಿಗಳಾಗಿದ್ದ ರಾಮಜೋಯಿಸ್ ಮತ್ತು ಚಂದ್ರಕಾಂತ ಅರಸು ಅವರನ್ನು ಒಳಗೊಂಡ ವಿಭಾಗೀಯ ಪೀಠದ ಮುಂದೆ ಆಖೈರ ವಿಚಾರಣೆಗೆ ಬಂದು ರಿಟ್ ಅರ್ಜಿಯನ್ನು ಮಂಜೂರು ಮಾಡಿ, ಆ ೩೫೦ ಗುಮಾಸ್ತರ ನೇಮಕ ಅಕ್ರಮ ಎಂದೂ ಅವರನ್ನು ನೌಕರಿಯಿಂದ ತೆಗೆದು ಹಾಕಬೇಕೆಂದು ತೀರ್ಪುನೀಡಿತು. "ಆ ತೀರ್ಪಿನ ವಿರುದ್ಧ ಸರ್ವೋಚ್ಚ ನ್ಯಾಯಾಲಯಕ್ಕೆ ಮಾಡಿಕೊಂಡ ಎಸ್‌ಎಲ್‌ಪಿ ೬೦೫೦/೮೮ ಮೇಲ್ಮನವಿಯೂ ತಿರಸ್ಕೃತವಾಗಿ ಮುಂಬರುವ ೧೯೯೦ ಜೂನ್ ಅಂತ್ಯಕ್ಕೆ ಅವರನ್ನು ಕೆಲಸದಿಂದ ತೆಗೆದುಹಾಕಬೇಕೆಂದು ನಿರ್ದೇಶನ ಕೊಟ್ಟರು."[೫] ಅವರನ್ನು ನೌಕರಿಯಿಂದ ತೆಗೆದು ಹಾಕಲು ಇನ್ನು ೧೦-೧೫ದಿನಗಳು ಇರುವಾಗ ಆ ೩೫೦ ಗುಮಾಸ್ತರ ಮುಂದಾಳಾಗಿದ್ದ

ಒಬ್ಬ ಗುಮಾಸ್ತ ತನ್ನ ೮-೧೦ ಸಹೋದ್ಯೋಗಿಗಳೊಡನೆ ಕೋ. ಚೆಯವರ ಬಳಿಗೆ ಬಂದು ಸಮಾರು ೭೦೦-೮೦೦ ಪುಟಗಳ ದಾಸ್ತವೇಜುಗಳನ್ನು ಕೊಟ್ಟು ತಾವು ನೌಕರಿಯಲ್ಲಿ ಮುಂದುವರಿಯಲು ಏನಾದರೂ ದಾರಿ ತೋರಿಸಬೇಕೆಂದು ಅಂಗಲಾಚಿದರು. ಆದರೆ ಸರ್ವೋಚ್ಚ ನ್ಯಾಯಾಲಯವೇ ನೇಮಕಾತಿ ಅಕ್ರಮವೆಂದು ದೃಢಪಡಿಸಿರುವಾಗ ಯಾರೇನು ಮಾಡುವಂತಿರಲಿಲ್ಲ. ಅದಕ್ಕೆ ಕೋ. ಚೆಯವರು ಒಂದು ಉಪಾಯ ಮಾಡಿ ಶ್ರೇಷ್ಠ ನ್ಯಾಯಮೂರ್ತಿಗಳಿಗೆ ಒಂದು ಮನವಿ ಪತ್ರ ಅರ್ಪಿಸಿ, ಸರ್ವೋಚ್ಚ ನ್ಯಾಯಾಲಯದಲ್ಲಿ ಪುನರ್ವಿಮರ್ಶಾ ಅರ್ಜಿ ಇತ್ಯರ್ಥ ಆಗುವವರೆಗೆ ನೌಕರಿಯಿಂದ ತೆಗೆದಾಕಬೇಡಿರೆಂದು ಪ್ರಾರ್ಥಿಸಿರಿ. ಅದು ಫುಲ್‌ಕೋರ್ಟ್ ಮೀಟಿಂಗಿಗೆ ಬರುತ್ತದೆ ಎಂದು ಹೇಳಿದರು. ಆದರೆ ಗುಮಾಸ್ತರ ಮುಖಂಡ ತಾವೇ ಒಂದು ಮನವಿಯನ್ನು ಸಿದ್ಧಪಡಿಸಿಕೊಡಿ ಎಂದರು. ಕೊನೆಗೆ ಫೀಜ್ ವಿಚಾರ ಮಾತನಾಡುವಾಗ ಒಬ್ಬ ನೌಕರನಿಗೆ ಒಂದು ನೂರು ರೂಪಾಯಿಯಂತೆ ಕೊಡಬೇಕು ಎಂದರು.

ನೌಕರಸ್ತರು ಎಲ್ಲಾ ಸೇರಿ ಕೊಡಬಹುದಾದ ಹಣ ೩೫ ಸಾವಿರ ಆಗುವುದರಲ್ಲಿತ್ತು. ಆದರೆ ಬಂದವರು ಎರಡು ಸಾವಿರ ನೀಡಿ ತಿಂಗಳ ಸಂಬಳ ಬಂದಾಗ ವಂತಿಗೆ ಎತ್ತಿ ಕೊಡುತ್ತೇವೆ, ಆ ಮೇಲೆ ಪುನರ್ವಿಮರ್ಶಾ ಅರ್ಜಿ ಸಿದ್ಧಪಡಿಸಲು ಬೇರೆ ಫೀಜು ಕೊಡುತ್ತೇವೆ ಎಂದು ಮಾತು ಕೊಟ್ಟರು. ಕೊನೆಗೆ ಕೋ. ಚೆಯವರು ಒಂದು ಮನವಿ ಪತ್ರ ಸಿದ್ಧಪಡಿಸಿಕೊಟ್ಟರು. ನಂತರ ಶ್ರೇಷ್ಠ ನ್ಯಾಯಮೂರ್ತಿ ಜೈನ್ ಅವರಿಗೆ ಮನವಿ ಪತ್ರ ಸಲ್ಲಿಸಿದರು. ಅದನ್ನು ಪರಿಗಣಿಸಿ ಫುಲ್ ಕೋರ್ಟ್‌ನಲ್ಲಿಟ್ಟು ಕಾಲಾವಕಾಶ ಕೊಟ್ಟರು. ಮತ್ತೆ ಕಾರ್ಮಿಕರು ಬಂದು ಒಂದು ಪುನರ್ವಿಮರ್ಶಾ ಅರ್ಜಿ ತಯಾರಿಸಿಕೊಡಬೇಕೆಂದೂ ಅಲ್ಲದೆ ನೀವೆ ದೆಹಲಿಗೆ ಬಂದು ವಾದಿಸಬೇಕೆಂದು ಮನವಿ ಮಾಡಿಕೊಂಡರಾದರೂ ಅದಕ್ಕೆ ಅವಕಾಶ ಸಿಗುವುದು ಕಡಿಮೆ ಇತ್ತು. ಆದರೆ ಪುನರ್ವಿಮರ್ಶಾ ಅರ್ಜಿಯನ್ನು ತಯಾರಿಸಿ ಕೊಟ್ಟರು.

ಕೋಚೆಯವರು ತಯಾರಿಸಿದ ಅರ್ಜಿಯಲ್ಲಿ ಒಂದು ಕಾನೂನಿನ ಅಂಶವನ್ನು ತಿಳಿಸಿದ್ದರು. ಅದೇನೆಂದರೆ ಉಚ್ಚ ನ್ಯಾಯಾಲಯ ನೌಕರರ ಮೇಲ್ಮನವಿಯನ್ನು ತಿರಸ್ಕರಿಸುವಾಗ ಈ ೩೫೦ ಹುದ್ದೆಗಳನ್ನು ಪುನಃ ಜಾಹಿರಾತು ಹೊರಡಿಸಿ ಆಯ್ಕೆ ಮಾಡಬೇಕೆಂದು ಸೂಚಿಸಿತು. ಆದರೆ ಈಗ ಇರುವ ನೌಕರಿಯವರಿಗೆ ಅರ್ಜಿ ಹಾಕಿಕೊಳ್ಳಬಹುದು ಎಂದು ತಿಳಿಸಿದರು ಸಹಾ ಅದನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಿಲ್ಲ. ಏಕೆಂದರೆ ಈ ನೌಕರರಲ್ಲಿ ವಯೋಮಿತಿ ಮೀರಿದವರಿದ್ದಾರೆ. ಹೀಗಾಗಿ ಯಾರಿಗೂ ಅರ್ಜಿಸಲ್ಲಿಸಲು ಸಾಧ್ಯವಿಲ್ಲದ ಹಾಗೆ ಆಗುತ್ತದೆ ಎಂದು, ಅಲ್ಲದೆ ಒಂದು ವೇಳೆ ಸರ್ಕಾರ ಇವರಿಗೆ ಮಾತ್ರ ವಯೋಮಿತಿಯಲ್ಲಿ ಸಡಿಲ ಕೊಟ್ಟರೆ ಅದು ಅರ್ಟಿಕಲ್ ೧೪ ಸರ್ವಸಮಾನತೆಯ ತತ್ವಕ್ಕೆ ಭಂಗ ಬರುತ್ತದೆ. ಆದ್ದರಿಂದ ದಯಾಪ್ರಭುಗಳು ತಮ್ಮ ಮೊದಲಿನ ಆಜ್ಞೆಯನ್ನು ಪುನರ್ವಿಮರ್ಶಿಸಬೇಕೆಂದು ಮನವಿ ಮಾಡಿಕೊಂಡಿದ್ದರು. ಅಲ್ಲದೇ ಇದರಲ್ಲಿ ಮಾನವೀಯತೆಯ ದೃಷ್ಟಿಯಿಂದ ಅಂಗವಿಕಲರ ಬಗ್ಗೆ, ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡದವರ ಬಗ್ಗೆ, ಪದವೀದರರ ಬಗ್ಗೆ, ಅವರ ಸಾಂಸಾರಿಕ ಜೀವನದ ಬಗ್ಗೆ ನಮೂದಿಸಿ ಅವರಿಗೆ ಅನ್ಯಾಯವಾಗಿರುವುದು ಎದ್ದು ಕಾಣುವಂತಿದೆ ಎಂದು

ಕೋ. ಚೆಯವರು ಪುನರ್ವಿಮರ್ಶಾ ಅರ್ಜಿ ಸಿದ್ಧಪಡಿಸಿ ಕೊಟ್ಟಿದ್ದರು. ಈ ಅರ್ಜಿ ಸರ್ವೋಚ್ಚ ನ್ಯಾಯಾಲಯದಲ್ಲಿ ವಿಚಾರಣೆಯಾಗಿ ಆ ೩೫೦ ಜನರಿಗೆ ಮಾತ್ರ ಅನ್ವಯವಾಗುವಂತೆ ಒಂದು ನ್ಯಾಯಸೂತ್ರ ರಚಿಸಿ, ಅವರನ್ನು ನೌಕರಿಯಲ್ಲಿ ಮುಂದುವರೆಯುವಂತೆ ನ್ಯಾಯಾಲಯ ಆಜ್ಞೆ ನೀಡಿತು. ಆದರೆ ನೌಕರರು ಕೊಡಬೇಕಾದ ಫೀಜು ಕೊಡದೆ ಮೋಸಗೊಳಿಸಿದರು. ಈ ವಿಚಾರವಾಗಿ ಕೋ. ಚೆಯವರು ಬೇಸರಗೊಂಡು "ನರಕ ಎಂಬ ಸ್ಥಾನ ಎಲ್ಲಿಯಾದರೂ ಇದ್ದರೆ ಅದರಲ್ಲಿ ಇವರಿಗೆ ಜಾಗ ಮೀಸಲಾಗಿರಲೇಬೇಕು ಅದನ್ನು ಅವರು ಅನುಭವಿಸಲೇಬೇಕು" ಎಂದು ಕಕ್ಷಿದಾರರಿಗೆ ಹಿಡಿಶಾಪ ಹಾಕಿರುವುದನ್ನು ತಮ್ಮ ಆತ್ಮಕಥನದಲ್ಲಿ ದಾಖಲಿಸಿಕೊಂಡಿದ್ದಾರೆ.

ಸರ್ಕಾರದ ವಕೀಲನಿಗೆ ಸರ್ಕಾರದಿಂದ ಸಂಬಳ ಬರುತ್ತದೆ. ಆದರೆ ಖಾಸಗಿಯಾಗಿ ವಕಾಲತ್ತು ವಹಿಸಿದವರು ತಮ್ಮ ಕಕ್ಷಿದಾರರು ಕೊಡುವ ಫೀಜನ್ನು ನಂಬಿ ವಕಾಲತ್ತು ಆರಂಭಿಸಿರುತ್ತಾರೆ. ವಕೀಲರಿಗೆ ಈ ರೀತಿ ಫೀಜು ಕೊಡದೇ, ಕೊಡುವುದಾಗಿ ನಂಬಿಸಿ ಕೈ ಕೊಟ್ಟರೆ ಯಾರು ತಾನೆ ಏನು ಮಾಡುವರು ಶಾಪಿಸುವುದನ್ನು ಬಿಟ್ಟು, ಆದರೆ ಕೋ. ಚೆಯವರು ಬಡವರ ಬಗ್ಗೆ ಕನಿಕರ ಉಳ್ಳವರಾಗಿದ್ದರೂ, ಬಡವರ ಕೇಸುಗಳನ್ನು ನಡೆಸಿಕೊಡುವಾಗ ಕಡ್ಡಾಯವಾಗಿ ಫೀಜು ವಸೂಲಿ ಮಾಡುತ್ತಿರಲಿಲ್ಲ. ಅಲ್ಲದೇ ಅವರು ಎಷ್ಟೇ ಫೀಜು ಕೊಟ್ಟರೂ ಅದನ್ನೇ ಪಡೆದು ವಕಾಲತ್ತು ವಹಿಸಿಕೊಂಡು ಅವರಿಗೆ ನ್ಯಾಯ ಒದಗಿಸಿಕೊಡಲು ಶ್ರಮಿಸುತ್ತಿದರು. ಆದರೆ ಅವರಿಗೆ ನಂಬಿಕೆ ದ್ರೋಹ ಮಾಡಿದರು ಎಂಬ ಕಾರಣಕ್ಕೆ ಆ ನಂಬಿಕೆ ದ್ರೋಹಿಗಳಿಗೆ ಶಾಪ ನೀಡಿದರು.

**ಹಾವನೂರ ವರದಿ ಆಜ್ಞೆಯನ್ನು ಕುರಿತು ಸಲ್ಲಿಸಿದ ರಿಟ್ ಅರ್ಜಿ**

ಕರ್ನಾಟಕದ ಮಟ್ಟಿಗೆ ದೇವರಾಜ ಅರಸರ ಆಡಳಿತ ಒಂದು ಪರ್ವಕಾಲವೆಂದು ಇತಿಹಾಸ ತಜ್ಞರು ಅಭಿಪ್ರಾಯ ಪಡುತ್ತಾರೆ. ಅದಕ್ಕೆಲ್ಲಾ ಕಾರಣ ದೇವರಾಜು ಅರಸರು. ಹಿಂದುಳಿದ ವರ್ಗಗಳನ್ನು ಗುರಿತಿಸಲು ಎಲ್.ಜಿ. ಹಾವನೂರು ಅವರನ್ನು ನೇಮಿಸಿದರು. ಎಲ್.ಜಿ. ಹಾವನೂರ ಅವರು ತಮ್ಮ ವರದಿಯನ್ನು ಸಿದ್ಧಪಡಿಸಿ ೧೯೭೫ರಲ್ಲಿ ಸರ್ಕಾರಕ್ಕೆ ಸಲ್ಲಿಸಿದರು. ಆ ವರದಿಯನ್ನು ಸರ್ಕಾರ ಜಾರಿಗೊಳಿಸಿದಾಗ ಅಂದಿನ ವೀರಶೈವ ಮಾಹಾಸಭೆಯ ಅಧ್ಯಕ್ಷರಾದ ಜಿ.ಬಿ. ಮಲ್ಲಾರಾಧ್ಯರು ಸರ್ಕಾರಿ ನೌಕರಿಗೆ ಅರ್ಜಿ ಹಾಕಿ ಕೆಲಸ ಸಿಗದ ಒಬ್ಬ ಅಭ್ಯಾರ್ಥಿಯನ್ನು, ಇನ್ನೊಬ್ಬ ಎಂಜಿನಿಯರಿಂಗ್ ಶಿಕ್ಷಣ ವ್ಯಾಸಂಗಕ್ಕೆ ಪ್ರವೇಶ ಕೋರಿ ತಿರಸ್ಕೃತವಾದ ವಿದ್ಯಾರ್ಥಿಯನ್ನು ಕೋ. ಚೆಯವರ ಬಳಿಗೆ ಕಳಿಸಿಕೊಟ್ಟು, ಹಾವನೂರು ವರದಿಯ ಮೇಲೆ ಒಂದು ರಿಟ್ ಅರ್ಜಿಯನ್ನು ಹಾಕಿಸಲಾಗಿತ್ತು. ಇದು ಹಾವನೂರು ವರದಿ ಆಧಾರಿತ ಆಜ್ಞೆಯನ್ನು ಪ್ರಶ್ನಿಸಿದ ಪ್ರಥಮ ರಿಟ್ ಅರ್ಜಿಯಾಗಿದ್ದು, ನಂತರದಲ್ಲಿ ಅನೇಕ ಅರ್ಜಿಗಳು ದಾಖಲಾದವು. ಈ ಅರ್ಜಿಯ ವಿಚಾರಣೆ ಪಂಚನ್ಯಾಯಾಮೂರ್ತಿಗಳ ಪೀಠದಲ್ಲಿ ಬಂತು. ಆಗ ಕೋ. ಚೆಯವರು ಹಿಂದಿನ ಹಿಂದುಳಿದ ಆಯೋಗಗಳ ವಿರುದ್ಧ ನ್ಯಾಯಾಲಯ ನೀಡಿದ ತೀರ್ಪುಗಳಾದ ಬಾಲಾಜಿ ಕೇಸಿನಿಂದ ಹಿಡಿದು ಥಾಮಸ್ ಕೇಸಿನವರೆಗೆ ಎಲ್ಲಾ ಮಾಹಿತಿಯನ್ನು ತಿಳಿದುಕೊಂಡರು. ಅಲ್ಲದೆ ಅವರು ಬಾಲಾಜಿ ಕೇಸಿನಲ್ಲಿ ನಿರ್ಧರಿಸಿದಂತೆ

ಮೀಸಲಾತಿ ಮಿತಿ ಶೇಕಡ ೫೦ ಕ್ಕಿಂತ ಹೆಚ್ಚಾಗಬಾರದೆಂದು ವಾದಿಸಿದರು. ಇಂತಹ ಸಮಯದಲ್ಲಿ ವಿಶ್ವನಾಥ ಹೀರೇಮಠ ಎಂಬುವವರು ನ್ಯಾಯಾಲಯದ ನಡಾವಳಿಯನ್ನು ತಿಳಿಯಲು ಕೋ. ಚೆಯವರ ಸಹಾಯಕರಾಗಿ ಸೇರಿಕೊಂಡಿದ್ದರು.

ನ್ಯಾಯಾಲಯಕ್ಕೆ ಮೀಸಲಾತಿ ಆಜ್ಞೆ ವಿಚಾರಣೆಗೆ ಬಂದಾಗ, ಸರ್ಕಾರಿ ಆಜ್ಞೆ ಹಾವನೂರು ವರದಿಯನ್ನು ಆಧರಿಸಿ ಅನೇಕನೇಕ ಜಾತಿಗಳನ್ನು ಹಿಂದುಳಿದವರ ವರ್ಗಕ್ಕೆ ಸೇರಿಸಿ, ಅವರಿಗೆಲ್ಲ ಮೀಸಲಾತಿ ಸೌಲಭ್ಯವನ್ನು ಕಲ್ಪಿಸಿದ್ದು ಸಂವಿಧಾನ ಬಾಹಿರ ಎಂಬುದು ಆ ವರ್ಗೀಕರಣ ಜಾತಿಯನ್ನು ಅವಲಂಬಿಸಿದೆ. ಸಂವಿಧಾನದ ಪ್ರಕಾರ ಹಿಂದುಳಿದ ವರ್ಗ (ಕ್ಲಾಸ್) ದವರಿಗೆ ಮಾತ್ರ ಮೀಸಲಾತಿ ಇರಬೇಕು. ಹಿಂದುಳಿದ ಜಾತಿಗಳಿಗೆ ಮೀಸಲಾತಿ ಸಂವಿಧಾನ ಬಾಹಿರ, ಹಿಂದುಳಿಯುವಿಕೆಗೆ ಜಾತಿಯೂ ಒಂದು ಆಧಾರವಾಗಿರಬಹುದು. ಆದರೆ ಅದೇ ಜಾತಿಯೇ ಏಕಮಾತ್ರ ಆಧಾರವಾಗಿರಬಾರದು. ಜಾತಿಯ ಜೊತೆಗೆ ಅವರ ಆರ್ಥಿಕ ಸ್ಥಿತಿ, ವಾಸಿಸುವ ಸ್ಥಳ, ಶೈಕ್ಷಣಿಕ ಮಟ್ಟ, ಸಾಮಾಜಿಕ ಸ್ಥಾನ-ಮಾನ ಮುಂತಾದವುಗಳನ್ನು ಗಣನೆಗೆ ತೆಗೆದುಕೊಳ್ಳಲೇಬೇಕು. ಆದರೆ ಹಾವನೂರು ವರದಿಯು ಈ ವಿಚಾರಗಳನ್ನು ಗಮನಿಸಿದರೂ ಅವುಗಳ ಪ್ರಮಾಣ ಮಾತ್ರ ಗೌಣ ಎಂದು ಕೋ. ಚೆಯವರು ಧೃಡಪಡಿಸಲು ಇಡೀ ಹಾವನೂರು ವರದಿಯನ್ನು ನ್ಯಾಯಾಲಯದಲ್ಲಿ ಓದಿದರು. ಅವರಿಗೆ ಆಯಾಸವಾದಾಗ ವಿಶ್ವನಾಥರು ವರದಿಯನ್ನು ಓದುತ್ತಿದರು. ಈ ಮಧ್ಯೆ ವರದಿಯನ್ನು ಕುರಿತು ಸಾಂದರ್ಭಿಕ ಟೀಕೆ, ವಿಮರ್ಶೆ, ವ್ಯಾಖ್ಯಾನ ಮಾಡುತ್ತಿದ್ದರು.

ಈ ವರದಿಯನ್ನು ಪ್ರಶ್ನಿಸಿದ್ದು ಲಿಂಗಾಯತರನ್ನು ಹಿಂದುಳಿದ ವರ್ಗಕ್ಕೆ ಸೇರಿಸಿಲ್ಲ ಎನ್ನುವ ಕಾರಣಕ್ಕಾಗಿ ಅಲ್ಲ ಅಥವಾ ನ್ಯಾಯಾಲಯ ಇವರನ್ನು ಹಿಂದುಳಿದ ವರ್ಗಗಳಿಗೆ ಸೇರಿಸಿಕೊಳ್ಳಬೇಕು ಎಂದು ನಿರ್ದೇಶಿಸುವುದಕ್ಕೂ ಅಲ್ಲ, ಮೀಸಲಾತಿಯ ಮಿತಿ ಶೇ. ೫೦ಕ್ಕಿಂತ ಮೀರಬಾರದು ಎಂಬುದು ಈ ರಿಟ್ ಅರ್ಜಿಯ ವಾದವಾಗಿತ್ತು

ಕೊನೆಗೆ ಸುದೀರ್ಘವಾದ ವಾದ-ವಿವಾದಗಳಾದ ಮೇಲೆ ಒಂದೆರಡು ಸಣ್ಣ ಮಟ್ಟ ತಿದ್ದುಪಡಿ ಮಾಡಿ, ದರ್ಜಿ, ಅರಸು ಮುಂತಾದ ನಾಲ್ಕಾರು ಜಾತಿಗಳನ್ನು ಹಿಂದುಳಿದ ವರ್ಗಕ್ಕೆ ಸೇರಿಸಿದ್ದು ನ್ಯಾಯಬಾಹಿರವೆಂದು ಘೋಷಿಸಿ ಅರ್ಜಿಯನ್ನು ವಜಾಮಾಡಿತು. ಈ ಕುರಿತು ಸುಪ್ರೀಂ ಕೋರ್ಟಿನಲ್ಲಿ ಅಫೀಲು ಮಾಡಲಾಗಿತ್ತಾದರು ಅಷ್ಟರೊಳಗೆ ಸರ್ಕಾರ ಇನ್ನೊಂದು ಹಿಂದುಳಿದ ವರ್ಗಗಳ ಆಯೋಗವನ್ನು ನೇಮಿಸುವುದಾಗಿ ನ್ಯಾಯಲಯಕ್ಕೆ ನಿವೇದಿಸಿಕೊಂಡಿದ್ದರಿಂದ ಸರ್ವೋಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ ಮೇಲ್ಮನವಿಗೆ ತೀರ್ಪು ಕೊಡದೆ ನಿಖಾಲೆ ಮಾಡಿತು.

**ವಕೀಲ ವೃತ್ತಿಗೆ ನಿವೃತ್ತಿಯ ಹಿಂಗಿತು**

ಕೋ ಚೆಯವರು ೧೯೬೭ರ ನವೆಂಬರ್ ೧೨ಕ್ಕೆ ವಕಾಲತ್ತು ಪ್ರಾರಂಭಿಸಿ ಐವತ್ತು ವರ್ಷಗಳು ತುಂಬಿವೆ. ವಕೀಲ ವೃತ್ತಿ ಎಂಬುವುದು ನಿವೃತ್ತಿ ಇಲ್ಲದ ಉದ್ಯೋಗ. ವಕೀಲರ ವಯಸ್ಸು, ಆರೋಗ್ಯ ಎಷ್ಟು ಗಟ್ಟಿಯಾಗಿರುತ್ತದೆ, ಅಷ್ಟು ವರ್ಷ ಕಾರ್ಯ ನಿರ್ವಹಿಸಬಹುದು.

ಆದರೆ ಕೋ. ಚೆಯವರಿಗೆ ತಮ್ಮ ಮಕ್ಕಳಿಂದ ವಕೀಲ ವೃತ್ತಿ ಕೈ ಬಿಟ್ಟು ಮನೆಯಲ್ಲಿ ಸುಖವಾಗಿ ಇದ್ದುಬಿಡಿ ಸಾಕು ಎಂಬ ಒತ್ತಡದಿಂದ ವಕೀಲ ವೃತ್ತಿಗೆ ಶರಣು ಹೇಳಬೇಕೆಂದಿರುವರು. ಆದರೆ ವಕೀಲ ವೃತ್ತಿ ಎಂಬುದು ಒಂದೇಸಾರಿ ಬಿಡುವಂತದ್ದಲ್ಲ. ಈ ಹಿಂದೆ ಹಿಡಿದ ಕೇಸುಗಳನ್ನು ಇತ್ಯರ್ಥ ಪಡಿಸಬೇಕಾಗಿತ್ತು. ಇಲ್ಲವೆ ಅವುಗಳನ್ನು ಬೇರೆಯವರಿಗೆ ವಹಿಸಬೇಕಿತ್ತು.

ಒಂದು ಕಡೆ ಮನೆಯವರಿಗೆ ತಾವು ವೃತ್ತಿ ಬಿಡಲಿ ಎನ್ನುವ ಬಯಕೆ ಇದ್ದರೆ, ಇನ್ನೊಂದು ಕಡೆ ಕೋ. ಚೆಯವರ ಅನುಭವವಾಗಬೇಕು ಎಂಬುದು ಯುವ ವಕೀಲರ ಆಸೆಯಾಗಿತ್ತು. ಹಾಗಾಗಿ ಹಳೆಯ ಕೇಸುಗಳನ್ನು ಬಿಟ್ಟು ಬೇರೆಯಾವ ಹೊಸ ಕೇಸುಗಳನ್ನು ತೆಗೆದುಕೊಳ್ಳದೆ ಪೂರ್ಣಗೊಳಿಸುತ್ತಿದ್ದಾರೆ. ಅಲ್ಲದೇ ಬರುವ ಕೇಸುಗಳನ್ನು ಕೋ. ಚೆಯವರ ತಮ್ಮನ ಮಗ ಕೋ. ವಿಜಯಕುಮಾರ್ ಹತ್ತಿರ ಕಳಿಸಿ ಬೇಗ ನಿವೃತ್ತಿ ಹೊಂದುವ ಆಸೆ ಇಟ್ಟುಕೊಂಡರಾದರೂ ಇನ್ನುವರೆಗೂ ಅವರು ಕೋರ್ಟಿಗೆ ಹೋಗಿಬರುವುದು ತಪ್ಪಿಲ್ಲ! ಈ ೨೦೦೯ನೇ ನವೆಂಬರ್ ಒತ್ತಿಗೆ ಕೋ. ಚೆಯವರು ನ್ಯಾಯಾಲಯದಲ್ಲಿ ಇರುತ್ತಿರುವುದು ೬೩ ವರ್ಷಗಳಾಗುತ್ತದೆ.

ಹೀಗೆ ಕೋ. ಚೆಯವರು ನ್ಯಾಯಾವಾದಿಯಾಗಿ, ಸರ್ಕಾರಿ ಪರ ವಕೀಲರಾಗಿ, ಜಿಲ್ಲಾ ನ್ಯಾಯಾಧೀಶರಾಗಿ, ನಿವೃತ್ತಿಯ ನಂತರ ನ್ಯಾಯಾವಾದಿಯಾಗಿ ಇಂದಿಗೂ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರ ಕಾರ್ಯಕ್ಷೇತ್ರದಲ್ಲಿ ವೈವಿಧ್ಯಮಯ ಕೇಸುಗಳು ಬಂದಿವೆ. ಅನೇಕ ಖೂನಿ ಕೇಸುಗಳಿಗೆ ಕೋ. ಚೆಯವರು ನ್ಯಾಯಾಧೀಶರಾಗಿ ಮರಣದಂಡನೆ ಶಿಕ್ಷೆ ನೀಡಿದ ಉದಾಹರಣೆಗಳು ಸಿಗುತ್ತವೆ. ಹಾಗೆ ಮಾನವೀಯತೆಯ ದೃಷ್ಟಿಯಿಂದ ಅಪರಾಧ ಮಾಡಿದವರ, ಅಪರಾಧದ ಹಿಂದಿರುವ ಕಾರಣ ತಿಳಿದು ಸರ್ಕಾರಕ್ಕೆ ಅಪಾರಧಿಯ ಶಿಕ್ಷೆಯನ್ನು ಕಡಿತ ಮಾಡುವಂತೆ ಸಲಹೆಯನ್ನೂ ನೀಡಿದ್ದಾರೆ. ಕೆಲವೊಮ್ಮೆ ಬಡವರಿಗೆ ಕನಿಷ್ಟ ಫೀಜು ತೆಗೆದುಕೊಂಡು ವಕಾಲತ್ತು ಮಾಡಿ ಸೂಕ್ತ ನ್ಯಾಯ ದೊರೆಕಿಸಿಕೊಟ್ಟಿದ್ದಾರೆ. ಅಲ್ಲದೆ ಕೆಲವರು ಫೀಜು ಕೊಡದೆ ನಂಬಿಕೆ ದ್ರೋಹಮಾಡಿದವರೂ ಇದ್ದಾರೆ. ಇವರ ಕಾರ್ಯ ವ್ಯಾಪ್ತಿಯಲ್ಲಿ ವೈವಿಧ್ಯಮಯ ಕೇಸುಗಳನ್ನು ತಮ್ಮ ಸಾಹಿತ್ಯಕ್ಕೆ ಸೇರಿಸಿಕೊಂಡು ವಾಸ್ತವಿಕ ಸತ್ಯಗಳನ್ನು ಕಥಾರೂಪಕ್ಕೆ ತಂದಿದ್ದಾರೆ. ಹಾಗೆ ಅಂತಹ ಕಥೆಗಳನ್ನು ಬರೆದ ಮೊದಲಿಗರು ಎಂಬ ಪ್ರಶಂಸೆಗೆ ಒಳಗಾಗಿದ್ದಾರೆ.

**ಅಡಿ ಟಿಪ್ಪಣಿ**

೧. ಚೆನ್ನಬಸಪ್ಪ ಕೋ. ನನ್ನ ಮಾನಸ್ಸು ನನ್ನ ನಂಬಿಗೆ (ಭಾಗ-೧), ಸುರುಚಿ ಪ್ರಕಾಶನ ಮೈಸೂರು, ೧೯೭೭ ಪುಟ-೧೨೭

೨. ಅದೇ-ಪುಟ-೧೬೬

೩. ಚೆನ್ನಬಸಪ್ಪ ಕೋ. ನ್ಯಾಯಾಧೀಶನ ನೆನಪುಗಳು, ವಾಗ್ದೇವಿ ಪುಸ್ತಕಗಳು, ಮೈಸೂರು, ೧೯೮೬-ಪುಟ-೩

೪. ಅದೇ-ಪುಟ-೨೯

೫. ಅದೇ-ಪುಟ-೩೩

೬. ಅದೇ-ಪುಟ-೧೦೬

೭. ಚೆನ್ನಬಸಪ್ಪ ಕೋ. ನ್ಯಾಯಾಲಯದ ಸತ್ಯಕಥೆಗಳು, ಸಂವಹನ ಪ್ರಕಾಶನ, ಮೈಸೂರು, ೨೦೦೪ ಪುಟ-೨೪

೮. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೨), ಅರವಿಂದ ಪ್ರಕಾಶನ, ಬೆಂಗಳೂರು, ಪುಟ-೨೪

೯. ಅದೇ-ಪುಟ-೩೫

## ಅಧ್ಯಾಯ ೬

## ಸಾಹಿತಿ ಮತ್ತು ಚಿಂತಕರಾಗಿ ಕೋ. ಚೆನ್ನಬಸಪ್ಪನವರು

೬.೧ ಸಾಹಿತ್ಯ ರಚನೆ ಕುರಿತು ಕೋಚೆಯವರ ಚಿಂತನೆ

೬.೨ ಧಾರ್ಮಿಕ ಚಿಂತನೆಗಳು

೬.೩ ಸಾಮಾಜಿಕ ಚಿಂತನೆಗಳು

೬.೪ ಕೋ. ಚೆಯವರ ನ್ಯಾಯದ ದೃಷ್ಟಿಕೋನ

೬.೫ ಸಾಹಿತಿಯಾಗಿ ಕೋ. ಚೆನ್ನಬಸಪ್ಪ

## ಅಧ್ಯಾಯ – ೬
## ಸಾಹಿತಿ ಮತ್ತು ಚಿಂತಕರಾಗಿ ಕೋ. ಚೆನ್ನಬಸಪ್ಪನವರು

### ೬.೧ ಸಾಹಿತ್ಯ ರಚನೆಯನ್ನು ಕುರಿತು ಕೋ. ಚೆಯವರ ಚಿಂತನೆ

ಕೋ. ಚೆಯವರು ಒಬ್ಬ ಬರಹಗಾರರಾಗಿ ಅನೇಕ ಕವಿತೆ, ಕಾದಂಬರಿ, ಕಥೆ, ವಿಮರ್ಶೆಗಳಂತಹ ಲೇಖನಗಳನ್ನು ಬರೆದಿರುವರು. ಇವುಗಳ ಆಧಾರ ಮೇಲೆ ತಾವು ಬರೆದಿರುವುದು ಏಕೆ? ಅದರಿಂದ ಏನು ಪ್ರಯೋಜನ? ಮುಂತಾದ ವಿಷಯಗಳನ್ನು ಇಲ್ಲಿ ಆಳವಾಗಿ ವಿವರಿಸಲಾಗಿದೆ. ಇಲ್ಲಿ ಅವರ ಅನುಭವಕ್ಕೆ ಬಂದ ವಿಚಾರಗಳನ್ನು, ಸಾಹಿತ್ಯ ರಚನೆಯನ್ನು ಕುರಿತು ಕೋ. ಚೆಯವರ ಚಿಂತನೆಗಳು ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

ಸಾಹಿತ್ಯ ಅಂದರೆ ಸವಿಯಾದ ಮಾತು ಅಥವಾ ಕಹಿಯಾದರೂ ಕೇಳಿದವರಿಗೆ ಹಿತವೆನಿಸುವಂತಹ ಮಾತು. ಅಂದರೆ ಹಿತ ಸಹಿತವಾದ ಮಾತು ಸಾಹಿತ್ಯ. ಆ ಮಾತು ಕಿವಿಗೆ ಇಂಪಾಗಿದ್ದರೆ ಅದು ಸಾಹಿತ್ಯ, ಇದನ್ನೇ ಶಾಸ್ತ್ರಿಯವಾಗಿ ಹೇಳುವ ಮಾತಿನಿಂದ ಕೇಳುವವರಿಗೆ ರಸಾನುಭವ ಉಂಟಾದರೆ, ನವರಸಗಳಲ್ಲಿ ಯಾವುದಾದರೂ ಅಥವಾ ಎಲ್ಲದರ ಅನುಭವ ಉಂಟಾದರೆ ಅದನ್ನು ಸಾಹಿತ್ಯ ಎಂದು ಹೇಳಲಾಗುತ್ತದೆ.

ಕೋ. ಚೆಯವರು ಇಂತಹ ಸಾಹಿತ್ಯ ನಮಗೇಕೆ ಬೇಕು? ಅದರಿಂದ ಏನು ಪ್ರಯೋಜನ? ಸಾಹಿತ್ಯ ಸವಿಯಾದ ಅಥವಾ ಕಹಿ ಯಾದರೂ ಕೇಳಿದವರಿಗೆ ಹಿಡಿಸುವಂತೆ ಇದ್ದರೆ ಅದನ್ನು ಅಭ್ಯಾಸ ಮಾಡಬೇಕೆ? ಎಂಬುದನ್ನು ಚಿಂತಿಸಿದ್ದಾರೆ? ಕನ್ನಡ ಅದಿ ಕವಿ ಪಂಪ ತನ್ನ ಕಾವ್ಯದ ರಚನೆಯ ಉದ್ದೇಶ ತಿಳಿಸುತ್ತಾ "ಯಾವುದು ಸರಿ, ಯಾವುದು ತಪ್ಪು ಎಂದು ಜನರಿಗೆ ತಿಳಿಸುವುದಾಗಿದೆ" ಎಂದಿದ್ದಾನೆ. ಅಂದರೆ ಜನರಿಗೆ ಸಾಹಿತಿಯು ಯಾವುದು ಸರಿ, ಯಾವುದು ತಪ್ಪು ಅಥವಾ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಎಂದು

ತಿಳಿಸುವುದಾಗಿದೆ. ಹೇಗೆಂದರೆ ಎಲ್ಲರಿಗೂ ಗೊತ್ತಿರುವ ವಿಚಾರವನ್ನು ಸೊಗಸಾದ ಮಾತಿನಲ್ಲಿ ಕೇಳಿದವರು ಪ್ರಶಂಸಿಸುವ ಹಾಗೆ ಹೇಳುವುದು. ಅದು ಜನರ ಮನಸ್ಸನ್ನು ನಾಟಿ ಅವನಿಗೆ ಸತ್ಯದ ದರ್ಶನವಾಗುತ್ತದೆ ಎಂಬುದು ಕೋ. ಚೆಯವರ ಚಿಂತನೆ. ಜನ ಗೋವಿನ ಕತೆ ಕೇಳಿ ಕಣ್ಣೀರು ಇಡುತ್ತಾರೆ. ಹರಿಶ್ಚಂದ್ರನ ಕಥೆ ಕೇಳಿ ವ್ಯಥೆಪಡುತ್ತಾರೆ. ಅದಕ್ಕೆ ಸಾಹಿತಿಗಳು ಹೇಳುವ ಸೊಗಸಾದ ರೀತಿ ಕಾರಣವಾಗಿರುತ್ತದೆ. ಆದರೆ ಇದನ್ನು ಕೇಳಿ ಆಗುವ ಪ್ರಯೋಜನವೇನು? ಎಂಬುದಕ್ಕೆ ರಾಘವಾಂಕ ಹೀಗೆ ಹೇಳುತ್ತಾನೆ, "ಜನ ಬದುಕಬೇಕೆಂದು ಕಾವ್ಯ ಮುಖದಿಂ ಪೇಳ್ಕೆ" ಅನಪೇಕ್ಷೆಯಿಂದ ಅಂದರೆ ಜನ ಬದುಕಲೇಬೇಕೆಂದು ಕಾವ್ಯವನ್ನು ರಚಿಸಿದ್ದೇನೆ ಎನ್ನುತ್ತಾನೆ. ಆದರೆ ಅದು ಹೇಗೆ ಸಾಧ್ಯ? ಕಾವ್ಯ ರಚಿಸಿದವನು ಪುಸ್ತಕಗಳನ್ನು ಪ್ರಕಟಿಸುವುದರಿಂದ ಅವನಿಗೆ ಬದುಕಲು ದಾರಿ ಸಿಗಬಹುದು. ಆದರೆ ಓದುವವನಿಗೆ ಇದೇನು ಅನ್ನ ದೊರೆಕಿಸುತ್ತದೆಯಾ? ಎಂಬುವ ಪ್ರಶ್ನೆಗೆ ಕೋ. ಚೆಯವರ ಅಭಿಪ್ರಾಯ 'ಜನ ಬದುಕುವುದು ಅಂದರೆ ಕೇವಲ ಹೊಟ್ಟೆ ತುಂಬಿಸಿ ಕೊಳ್ಳುವುದಲ್ಲ, ಕೇವಲ ಅನ್ನ ಗಳಿಸುವ ಬದುಕಲ್ಲ', ಮನುಷ್ಯನಿಗೆ ಹೊಟ್ಟೆ ತುಂಬಿದ ಮೇಲೂ ಏನೋ ಒಂದು ಬೇಕೆನಿಸುತ್ತದೆ. ಮನುಷ್ಯನು ತನ್ನ ಮನ ಶಾಂತಿಗಾಗಿ ಏನೇನೋ ಪ್ರಯತ್ನ ಮಾಡುತ್ತಿದ್ದಾನೆ. ಅವನು ಅನ್ನಕ್ಕಾಗಿ ಮಾತ್ರ ಜೀವನ ನಡೆಸುತ್ತಿಲ್ಲ, ಅವನು ಸುಖ ಪಡೆಯುವ ನೆಪದಲ್ಲಿ ಕುಡಿಯುತ್ತಾನೆ, ಲೈಂಗಿಕ ಸಂಪರ್ಕ ಬಯಸುತ್ತಾನೆ, ಧೂಮಪಾನದ ಚಟ ರೂಢಿಸಿಕೊಳ್ಳುತ್ತಾನೆ. ಆದರೆ ಇದೆಲ್ಲಾ ಅಲ್ಪಕಾಲಿಕ ಸುಖ. ಇಷ್ಟಾದರೂ ಅವನ ಮನಸ್ಸು ಸುಖಕ್ಕೆ ತಳಮಳಗೊಳ್ಳುತ್ತಲೆ ಇರುತ್ತದೆ. ಏಕೆಂದರೆ ಮನುಷ್ಯನ ಪ್ರಥಮ ಆಸಕ್ತಿ ಮನಶಾಂತಿ ಮತ್ತು ಸುಖ ಪಡೆಯುವುದಾಗಿರುತ್ತದೆ ಎಂದು ಅರವಿಂದರು ಅಭಿಪ್ರಾಯ ಪಡುತ್ತಾರೆ. ಇದು ನಿಜವೂ ಹೌದು ಅದಕ್ಕೆ ಕೋ. ಚೆಯವರು ಮನುಷ್ಯನನ್ನು ತಣಿಸುವ, ಸಮಾಧಾನ ಪಡಿಸುವ ಬಂದು ಸಾಧನ ಈ ಸಾಹಿತ್ಯ ಎಂದು ಅಭಿಪ್ರಾಯ ಪಡುತ್ತಾರೆ.

ಸಾಹಿತ್ಯದಿಂದಾಗುವ ಕೆಲಸ ಸಂಗೀತ, ನೃತ್ಯ, ಶಿಲ್ಪ ಚಿತ್ರ ಮುಂತಾದ ರಾಗಭಾವಗಳನ್ನು ಸಂಸ್ಕರಿಸುವ ಇತರ ಸಾಧನಗಳಿದ್ದರೂ ಮಾತಿನಿಂದ ಸುಲಭವಾಗಿ ಆಗುವಷ್ಟು ಪರಿಣಾಮಕಾರಿಯಾಗಿ ಇತರ ಸಾಧನಗಳಿಂದ ಆಗಲಾರದು ಎಂಬುದು ಕೋ. ಚೆಯವರ ವಿಚಾರ ಸಾಹಿತ್ಯ ಓದುವುದರಿಂದ ಹೊಟ್ಟೆ ತುಂಬುವುದಿಲ್ಲ ಎಂಬುದು ನಿಜ, ಆದರೆ ಮನುಷ್ಯನ ಹೊಟ್ಟೆಗೆ ಅನ್ನ ಹೇಗೊ, ನೆತ್ತಿಗೆ ಕಾವ್ಯವೂ ಹಾಗೆ ಕೇವಲ ಹೊಟ್ಟೆ ತುಂಬಿಸಿಕೊಂಡು ನೆತ್ತಿ ತುಂಬಿಸಿಕೊಳ್ಳದೆ ಇರುವಂತಹ ಮನುಷ್ಯ ದೈತ್ಯನಂತೆ ಬೆಳೆಯಬಹುದು. ಆದರೆ ಅವನು ಮನುಷ್ಯ ಆಕಾರದ ಮನುಷ್ಯನೇ ಹೊರತು, ಅವನು ನಿಜವಾಗಿ ಮನುಷ್ಯನಲ್ಲ. ಅದಕ್ಕೆ ಸಾಹಿತ್ಯವೆಂಬ ನೀರು ಪ್ರತಿಯೊಬ್ಬರಿಗೂ ನಿಲುಕುವಂತಾಗಬೇಕು. ಅದಕ್ಕೆ ಎಲ್ಲರಿಗೂ ತಿಳಿಯುವಷ್ಟು ಸುಲಭವಾಗಿರಬೇಕು, ಬರೆಯಬೇಕು ಎಂದು ಕೋ. ಚೆ ಹೇಳುತ್ತಾರೆ.

ಆದಿ ಮಾನವನ ಕಾಲದಲ್ಲಿ ನಮಗೆ ಸಾಹಿತ್ಯವಿತ್ತೆ? ಅಂದು ಜನ ಮಾತನಾಡುತ್ತಿದ್ದರೆ? ಅವರಿಗೆ ಬರವಣಿಗೆ ಗೊತ್ತಿತ್ತೆ ? ಎಂಬ ಪ್ರಶ್ನೆಗಳು ಉದ್ಭವಿಸಬಹುದು. ಆದರೆ ಮನುಷ್ಯನಿಗೆ

ಪರಿವರ್ತನೆ ಎಂಬುದು ಸಹಜ ನಿಯಮ. ಅಂದಿನ ಮಾನವನು ತನಗೆ ತಿಳಿದಿದ್ದನ್ನು ಇನ್ನೊಬ್ಬರಿಗೆ ತಿಳಿಸಬೇಕೆಂದು ಭಾಷೆ ಕಲಿತುಕೊಂಡು, ಆ ಭಾಷೆಯ ಬೆಳವಣಿಗೆಯೇ ಸಂಕೇತವಾಗಿ ಆ ಸಂಕೇತವೆ ಬರವಣಿಗೆ ರೂಪತಾಳಿದೆ. ಇಂಥದರಿಂದ ಮಾನವ ತನಗೆ ತಿಳಿದಿರುವುದನ್ನು ಇನೊಬ್ಬರಿಗೆ ತಿಳಿಯಪಡಿಸುವುದು ಮಾನವನ ಉಗಮದಿಂದಲೂ ಬೆಳೆದ ಪ್ರವೃತ್ತಿ. ಆದರೆ ತಿಳಿಸುವ ಕ್ರಮದಲ್ಲಿ ಬದಲಾವಣೆ ಉಂಟಾಗಿ ಅಂತಿಮ ರೂಪಕ್ಕೆ ಬಂದಿದೆ. ಈ ಅಂತಿಮ ರೂಪದಲ್ಲಿರುವ ಎಲ್ಲ ಬರವಣಿಗೆಗಳು ಮನುಷ್ಯನನ್ನು ಬದುಕವಂತೆ ಮಾಡುತ್ತವೆ ಎಂದು ಕೋ. ಚೆ ಚಿಂತಿಸಿದ್ದಾರೆ. ಹಿಂದೊಮ್ಮೆ ಒಂದು ಅಭಿಪ್ರಾಯ ಪ್ರಚಲಿತವಿತ್ತು. ಗಿರ್ವಾಣಿ ಭಾಷೆಯೇ ಕಾವ್ಯವಾಹನವಾಗಬಲ್ಲದು! ದೇಶಭಾಷೆಗಳಲ್ಲಿ ಬರೆಯುವುದು ತಪ್ಪು; ಸ್ತೋತ್ರ ಮಾಡುವುದು ಪಾಪ ಎಂದು, ಆದರೆ ಸಂಸ್ಕೃತ ಭಾಷೆಯನ್ನು ಬ್ರಾಹ್ಮಣ ಶಾಹಿಗಳು ದೇವ ಭಾಷೆಯಾಗಿಸಿಕೊಂಡು ಬ್ರಾಹ್ಮಣರಿಗೆ ಮಾತ್ರ ಕಲಿಸುವ ಪದ್ಧತಿ ಅಂದಿದ್ದಿತು. ಅದಕ್ಕೆ ಮಹಾವೀರ ಗೌತಮಬುದ್ಧ ೧೨ನೇ ಶತಮಾನದ ವಚನಕಾರರು ತಮ್ಮ ಬಹುಸಂಖ್ಯಾತರು ಮಾತನಾಡುವ ಭಾಷೆಯಲ್ಲಿ ಬೋಧಿಸಿದರು. ಹಾಗೆ ಸಾಹಿತ್ಯ ರಚಿಸಿದರು. ಇಲ್ಲಿ ಭಾಷೆ ಮುಖ್ಯವಲ್ಲವಾದರೂ ಎಲ್ಲರಿಗೂ ಅರ್ಥವಾಗುವ ಭಾಷೆಯಲ್ಲಿ ಸಾಹಿತ್ಯ ರಚನೆಯಾಗಬೇಕು, ಅದು ಹೇಗೆ? ಸಮಾಜದಲ್ಲಿ ಬಡವರಿದ್ದಾರೆ ಮತ್ತು ಬಲ್ಲಿದವರು ಇದ್ದಾರೆ. ಇವರನ್ನು ಮಾತ್ರವೇ ಕುರಿತು ಸಾಹಿತ್ಯ ರಚಿಸಬಾರದು. ರಾಘವಾಂಕ 'ಹರಿಶ್ಚಂದ್ರ ಕಾವ್ಯ'ದಲ್ಲಿ ಹರಿಶ್ಚಂದ್ರನನ್ನು ಉಚ್ಚ ವರ್ಗಕ್ಕೆ ಸೇರಿದವನು ಎಂದು ಅವನ ಬಗ್ಗೆ ಸಾಹಿತ್ಯ ರಚಿಸಲಿಲ್ಲ. ಅವನೊಬ್ಬ 'ಮನುಜ' ಅವನು ಘನಸತ್ಯವೇ ಜೀವನ ಎಂದಿದ್ದಕ್ಕಾಗಿ ತಾನು ಎಲ್ಲವನ್ನು ದಾನಮಾಡಿ ಬೇರೆಯವರ ಬಳಿ ಜೀತವಿದ್ದನು. ಅಂದರೆ ಈ ಕಾವ್ಯಗಳಲ್ಲಿ ಕವಿಯು ಕಾವ್ಯರಚಿಸುವಾಗ ಕಾವ್ಯದ ವಸ್ತುವು ಒಂದು ನೀತಿ ಬೋಧನೆಯನ್ನು ಬೋಧಿಸಬೇಕು. ಅದು ಜನರನ್ನು ಬದುಕುವ ಹಾಗೆ ಮಾಡುತ್ತದೆ ಎಂಬುದು ಕೋ. ಚೆಯವರ ಸ್ಪಷ್ಟ ನಿಲುವು.

ಸಾಹಿತ್ಯದ ರಚನೆಯು ವ್ಯಕ್ತಿಯ ಪರಿವರ್ತನೆಗೆ, ಅಂದರೆ ವ್ಯಕ್ತಿ ಅನಕ್ಷರಸ್ಥನಾಗಿದ್ದರೆ, ಅವನು ಬಡವನಾಗಿದ್ದರೆ ಅಥವಾ ಅವನೇನಾದರು ಸಮಾಜ ಘಾತುಕನಾಗಿದ್ದರೆ ಅವನನ್ನು ಪರಿವರ್ತಿಸುವ ಹಾಗೆ ಸಾಹಿತ್ಯ ರಚಿಸಬೇಕು. ಅವನ ಅವಶ್ಯಕತೆಗಳಿಗೆ ಸಾಹಿತ್ಯ ಸ್ಪಂದಿಸುವ ರೀತಿ ರಚಿಸಿದರೆ ಜನ ಬದುಕುವುದನ್ನು ಕಲಿಯುವರು ಎನ್ನುವುದು ಕೋ. ಚೆಯವರ ಅಭಿಪ್ರಾಯ.

ಸಂಪ್ರದಾಯ ಸಾಹಿತಿಗಳು ಬಡತನ, ಹಸಿವು, ಮೂಢ ನಂಬಿಕೆಗಳಂತಹ ವಿಚಾರಗಳನ್ನು ಶೋಷಣೆ, ಅಸ್ಪೃಶ್ಯತೆ ಸಮಸ್ಯೆ, ವೇಶ್ಯಾವಾಟಿಕೆ ಅಥವಾ ಸಮಾಜದಲ್ಲಿರುವ ದುಷ್ಟ ಪದ್ಧತಿಗಳನ್ನು ಕುರಿತು ಅವುಗಳ ನಿವಾರಣೆಗೆಂದು ಸಾಹಿತ್ಯ ರಚಿಸುವುದಿಲ್ಲ. ಬದಲಿಗೆ 'ಮೊದಲ ರಾತ್ರಿಯ ಮುತ್ತು', 'ಶಾನುಭೋಗರ ಮಗಳು' ಮುಂತಾದ ಕವಿತೆಯನ್ನು ರಚಿಸಿ ಬಿಡುತ್ತಾರೆ. ಇಂತವುಗಳ ರಚನೆಯಿಂದ ಜನರ ಬಾಳನ್ನು ಕೂದಲೆಳೆಯಷ್ಟು ಪರಿಣಾಮ ಮಾಡಲಾರರು ಎಂಬುದು ಕೋ. ಚೆಯವರ ಅಭಿಪ್ರಾಯ.

ಜನ ಬದುಕಬೇಕೆಂದು ಸಾಹಿತಿ ಬರೆಯುವುದಾದರೆ, ಅವನು ಜಾತಿ ಮತ್ತು ಭಾಷೆಗಳಿಂದ ಕೂಡಿದ ಈ ಭಾರತೀಯ ಸಮಾಜಕ್ಕೆ ಜಾತ್ಯಾತೀತ ಧೋರಣೆಯಲ್ಲಿ ರಚಿಸಬೇಕು. ಇದರಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಸರಿಸಮಾನತೆ, ಸರ್ವರಿಗೂ ಸಮಬಾಳು, ಸಮಾನ ಸ್ಥಾನಮಾನ ಮತ್ತು ಅವಕಾಶ ದೊರೆಯುವಂತೆ ಮಾಡಲು ಭಾರತದಲ್ಲಿ ವಿವಿಧತೆಯಲ್ಲಿ ಏಕತೆಯನ್ನು ತೋರಿಸುವ ನಾಡು ಎನ್ನುವ ರೀತಿಯಲ್ಲಿ ಸಾಹಿತ್ಯ ರಚಿಸಬೇಕು. ಇದರಿಂದ ಕೋಮುವಾದಕ್ಕೆ ಅವಕಾಶ ದೊರೆಯುವುದಿಲ್ಲ ಎಂದು ಅಭಿಪ್ರಾಯ ಪಟ್ಟಿದ್ದಾರೆ. ಅದರೆ ಸಮಾಜದಲ್ಲಿ ಬಡವರು ಬದುಕು ಕಲಿಯಲಿ ಎಂದು ಮೂಢನಂಬಿಕೆಯ ವಿರೋಧಿ ಧೋರಣೆಯನ್ನು ಬರೆದ 'ಲೋಕಾಯತ ಸಿದ್ದಾಂತ' ವನ್ನೇ ಪುರೋಹಿತ ಶಾಹಿಗಳು ಒಂದು ಕೃತಿ ಇಲ್ಲದ ಹಾಗೆ ಸುಟ್ಟಹಾಕಿದರು. ಈಗಲೂ ಅಂತವರು ಇದ್ದಾರೆ. ಎಂದು ಕೋ ಚೆ ಹೇಳುತ್ತಿದ್ದಾರೆ. ಅದಕ್ಕೆ ಸಾಹಿತಿಗಳು, ವಿಚಾರವಂತರು ತಮ್ಮ ಕರ್ತವ್ಯ ಪಾಲಿಸುವುದನ್ನು ಮಾತ್ರ ಬಿಡಬಾರದು ಎಂಬುದು ಕೋ. ಚೆಯವರು ಸೂಚಿಸುತ್ತಾರೆ.

**೬.೨ ಧಾರ್ಮಿಕ ಚಿಂತನೆಗಳು**

ಕೋ. ಚೆಯವರು ಕಾಲೇಜಿನಲ್ಲಿ ವಿದ್ಯಾಭ್ಯಾಸ ಮಾಡುವ ಸಮಯದಲ್ಲಿ ಕುವೆಂಪು ರಚಿಸಿದ ಸ್ವಾಮಿ ವಿವೇಕಾನಂದರ ಜೀವನ ಚರಿತ್ರೆಯನ್ನು ಓದಿದರು. ಆಗ ಅವರಿಗೆ ವಿವೇಕಾನಂದರ ಆಧ್ಯಾತ್ಮಿಕ ದರ್ಶನವಾಯಿತು. ಇವರ ಆದ್ಯಾತ್ಮಿಕ ವಿಚಾರಗಳಿಗೆ ಮನಸೋತು ವಿವೇಕಾನಂದರ ಗುರುಗಳಾದ ರಾಮಕೃಷ್ಣ ಅವರ ಬಗ್ಗೆ ಅತ್ಯಾಸಕ್ತಿತಾಳಿ ಅವರ ಜೀವನ ಚರಿತ್ರೆಯನ್ನು ಓದಿಕೊಂಡರು. ನಂತರದಲ್ಲಿ ಅರವಿಂದರ ಬಗ್ಗೆ ಒಲವು ಬೆಳೆಸಿಕೊಂಡರು. ಅಲ್ಲದೆ ಇವರು ವೀರಶೈವ ಧರ್ಮದವರಾಗಿದ್ದರಿಂದ ಆರಂಭದಿಂದಲೂ 'ಬಸವತತ್ವ'ದ ವಿಚಾರಧಾರೆಗಳ ದರ್ಶನವಾಗುತ್ತಿತ್ತು. ಈ ರೀತಿ ವಿವಿಧ ಧರ್ಮ ಬೋಧಕರ ವಿಚಾರಗಳನ್ನು ತಿಳಿದುಕೊಂಡು, ತಮ್ಮ ಅಭಿಪ್ರಾಯವನ್ನು ಆಗಾಗ ವ್ಯಕ್ತ ಪಡಿಸುತ್ತಿದ್ದರು. ಅಂತಹ ವಿಚಾರಗಳನ್ನು ಇಲ್ಲಿ 'ಕೋ. ಚೆಯವರ ಧಾರ್ಮಿಕ ಚಿಂತನೆಗಳು' ಎಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಲಾಗಿದೆ.

ಧರ್ಮ ಅಂದರೇನು? ಅದರಿಂದ ಏನು ಪ್ರಯೋಜನ, ಧರ್ಮದ ಅಂತಿಮ ರೂಪವೇನು ಎಂಬ ವಿಚಾರಗಳನ್ನು ಕುರಿತು ಕೋ. ಚೆ ತುಂಬಾ ಆಳವಾಗಿ ಚಿಂತಿಸಿದ್ದಾರೆ. ಕೋ. ಚೆಯವರು 'ಸೈನ್ಸ್' ಎಂಬ ಆಂಗ್ಲ ಪದವನ್ನು 'ವಿಜ್ಞಾನ' ಎಂಬ ಅರ್ಥದಲ್ಲಿ ಅರ್ಥೈಸಲು ಹೋಗಿಲ್ಲ. ಏಕೆಂದರೆ ವಿಜ್ಞಾನ ಎಂಬ ಸಂಸ್ಕೃತ ಪದ ಪ್ರಾಚೀನ ಕಾಲದಿಂದಲೂ ಭಾರತೀಯ ಶಾಸ್ತ್ರಗಳಲ್ಲಿ ಪ್ರಯೋಗಿಸಲಾಗಿದೆ. ಭಗವತ್ ಗೀತೆಯ ಒಂದು ಅಧ್ಯಾಯ, 'ಜ್ಞಾನ ವಿಜ್ಞಾನ ಯೋಗ' ಎಂಬುದು ಇದೆ. ಅದಕ್ಕೆ ಕೋ. ಚೆಯವರು 'ಸೈನ್ಸ್' ಎಂಬುವುದನ್ನು 'ಪದಾರ್ಥವಿಜ್ಞಾನ' ಅಥವಾ 'ಭೌತವಿಜ್ಞಾನ' ಎಂದು ಕರೆಯುವುದು ಸೂಕ್ತ ಎಂದು ಅಭಿಪ್ರಾಯಕ್ಕೆ ಬರುತ್ತಾರೆ.

ಅಂದರೆ ಕಣ್ಣಿಗೆ ಕಾಣುವ ವಸ್ತುಗಳ ವಿಶ್ಲೇಷಣೆ ಮಾಡುವುದು ಈ 'ಪದಾರ್ಥವಿಜ್ಞಾನ' ಅಥವಾ 'ಭೌತವಿಜ್ಞಾನ'. ಇದು ಮನುಷ್ಯನ ಅಥವಾ ಗೋಚರಿಸುವ ವಸ್ತುಗಳ ವಿಶ್ಲೇಷಣೆ

ಮಾಡಿ, ಅದರ ರಚನೆ ಮತ್ತು ಕಾರ್ಯಗಳನ್ನು ಪರೀಕ್ಷೆ ಮಾಡಿ, ಅದರ ಕಾರ್ಯವಿಧಾನವನ್ನು ತಿಳಿಸುತ್ತದೆ. ಆದರೆ ಆ ಮನುಷ್ಯನ ಅಂಗಾಂಗಗಳನ್ನು ಅಥವಾ ಗೋಚರಿಸುವ ವಸ್ತುಗಳಲ್ಲಿ ಚಲಿಸುವಂತೆ ಮಾಡುವುದು ಒಂದು ಇದೆ. ಅದನ್ನು 'ಪಾರಮಾರ್ಥವಿಧಾನ' ಅಥವಾ 'ಆಧ್ಯಾತ್ಮ ಜ್ಞಾನ' ಎಂದು ಕರೆಯಬಹುದೆಂದು ಕೋ. ಚೆಯವರು ಅಭಿಪ್ರಾಯ ಪಡುತ್ತಾರೆ. ಆದರೆ ಪದಾರ್ಥ ವಿಜ್ಞಾನದ ಜ್ಞಾನದ ಸಾಧನಗಳು ಪಂಚೇಂದ್ರಿಯಗಳಾಗಿದ್ದು, ಯಾವುದನ್ನಾದರೂ ತರ್ಕಬದ್ಧವಾಗಿ ಅಭ್ಯಾಸ ಮಾಡಿ ಸತ್ಯವನ್ನು ಮಾತ್ರ ಒಪ್ಪಿಕೊಳ್ಳುತ್ತದೆ ಅಂದಮಾತ್ರಕ್ಕೆ ಅಗೋಚರ ಅಥವಾ ಪಾರಮಾರ್ಥವಿಧಾನವನ್ನು ಚುತೀಕರಿಸಿ, ಅವಹೇಳನ ಮಾಡಬಾರದು ಎಂಬುದು ಕೋ. ಚೆಯವರ ನಿಲುವಾಗಿದೆ. ಏಕೆಂದರೆ ರಾಮಕೃಷ್ಣ ಪರಮ ಹಂಸರು ಹೇಳುವಂತೆ "ರಾತ್ರಿ ಬರಿಗಣ್ಣಿಗೆ ನಕ್ಷತ್ರಗಳು ಕಾಣುತ್ತವೆ. ಹಗಲು ಕಣ್ಣಿಗೆ ನಕ್ಷತ್ರಗಳು ಕಾಣುವುದಿಲ್ಲ." ಅಂದ ಮಾತ್ರಕ್ಕೆ ನಕ್ಷತ್ರಗಳು ಹಗಲಿನಲ್ಲಿ ಇಲ್ಲ ಎನ್ನಬಹುದೇ? ಆದರೆ ಕಣ್ಣಿಗೆ ಕಾಣದ ಬುದ್ಧಿ, ಒಪ್ಪದ ತರ್ಕವನ್ನು ಭೌತವಿಜ್ಞಾನಿಗಳು ಅಂಗೀಕರಿಸುವುದಿಲ್ಲ. ಅವರು ಪಂಚೇಂದ್ರಿಯಗಳಿಗೆ ಅನುಭವ ವೇದ್ಯವಾಗುವುದನ್ನು ಮಾತ್ರ ಸತ್ಯ ಎಂದು ಒಪ್ಪುತ್ತಾರೆ. ಈ ಪಂಚೇಂದ್ರಿಯಗಳಿಗೆ ಆಧಾರವಾದ ಮನಸ್ಸನ್ನು ಒಪ್ಪುತ್ತಾರೆ. ಆದರೆ ಆ ಮನಸ್ಸನ್ನು 'ಆಡಿಸುವ' ಶಕ್ತಿಯನ್ನು ನಂಬುವುದಿಲ್ಲ.! ಇದರಿಂದ ಭೌದ್ಧಿಕ ವಿದ್ಯೆಗೂ ಮತ್ತು ಲೌಕಿಕ ವಿದ್ಯೆಗೂ ಸೆಣಸಾಟ ಆರಂಭವಾಗುತ್ತದೆ ಎಂಬುದು ಕೋ. ಚೆಯವರ ಅಭಿಪ್ರಾಯ.

ನಮ್ಮ ಕಣ್ಣಿಗೆ ಕಾಣುವುದನ್ನು ಅಥವಾ ಪಂಚೇಂದ್ರಿಯಗಳಿಗೆ ಅನುಭವ ಉಂಟಾಗುವುದನ್ನು ಹೇಗೆ 'ಭೌತವಿಜ್ಞಾನಿ'ಗಳು ಒಪ್ಪುತ್ತಾರೆ. ಅವರ ಒಪ್ಪಿಗೆಗೆ ಹೇಗೆ ಪಂಚೇಂದ್ರಿಯಗಳು ಎಂಬ ಸಾಧನವಿದೆ, ಹಾಗೆ ನಮಗೆ ಕಾಣದ್ದನ್ನು ನಾವು ಹುಡುಕಿಕೊಳ್ಳಲು ಒಂದು ಸಾಧನ ಅವಶ್ಯಕವಿದೆ ಎಂದು ಕೋ. ಚೆ ಹೇಳುತ್ತಾರೆ. ಆದರೆ ಪದಾರ್ಥವಿಜ್ಞಾನಿಗಳು ಅಥವಾ ಭೌತವಿಜ್ಞಾನಿಗಳು ಕಂಡುಕೊಂಡ ಸಾಧನ ಪರಮಾರ್ಥವಿಜ್ಞಾನಿಗಳಿಗೆ ಅನ್ವಯಿಸುವುದಿಲ್ಲ. ಏಕೆಂದರೆ ಪದಾರ್ಥವಿಜ್ಞಾನವು ಪಂಚೇಂದ್ರಿಯಗಳಿಂದ ಉಂಟಾಗುವ ಅನುಭವವನ್ನು ಮಾತ್ರ ಸತ್ಯ ಎಂದು ನಂಬುತ್ತಾರೆ. ಅದರಿಂದ ಪಾರಮಾರ್ಥವಿಜ್ಞಾನಕ್ಕೆ ಈ ಸಾಧನ ಉಪಯೋಗವಾಗುವುದಿಲ್ಲ ವಾದ್ದರಿಂದ ಒಂದು ಬೇರೆ ಸಾಧನ ಅವಶ್ಯಕವಿದೆ. ಅದೇ ಸಾಧನ 'ಮನಸ್ಸು' ಎಂದು ಕೋ. ಚೆ ಹೇಳುತ್ತಾರೆ. ಆ ಮನಸ್ಸಿನ ಮೂಲಕ ಮನಸ್ಸಿಗೂ ಆಧಾರವಾಗಿರುವ, ಮನಸ್ಸಿಗೂ ಆಚೆಗಿರುವುದನ್ನು ಅರಿತು ಅನುಭವಿಸಬೇಕೆಂದು ಹೇಳುತ್ತಾರೆ. ಇದನ್ನೇ ಸ್ವಾಮಿ ವಿವೇಕಾನಂದರು "ಮನಸ್ಸೇ ಅದರ ಸಾಧನ, ಇದು ಸೂಕ್ತ ಮಾರ್ಗದಲ್ಲಿ ದಾರಿ ತೋರಿದಾಗ ಮತ್ತು ಆಂತರಿಕ ಜಗತ್ತಿನತ್ತ ಕರೆದೊಯಿದಾಗ ಅನುಭವ ಶಕ್ತಿಯೇ ಮನಸ್ಸನ್ನು ವಿಶ್ಲೇಷಿಸುತ್ತದೆ ಮತ್ತು ನಮಗೆ ಸತ್ಯದರ್ಶನ ಮಾಡಿಸುತ್ತದೆ ಎಂದು ಹೇಳಿದ್ದಾರೆ". ಕೋ. ಚೆಯವರು ಈ ಆತ್ಮ ವಿದ್ಯಾ ಸಾಧನೆ ಅಥವಾ ಪಾರಮಾರ್ಥ ಸಾಧನೆಯನ್ನು ವೈಜ್ಞಾನಿಕ ಪದ್ಧತಿಗೆ ಅಳವಡಿಸಿ ತಿಳಿಯಬೇಕೆಂದು ಅಭಿಪ್ರಯಿಸಿದ್ದಾರೆ. ಹೇಗೆಂದರೆ ಪದಾರ್ಥವಿಜ್ಞಾನ ಸೂತ್ರವನ್ನು ಇಲ್ಲಿ

ಅಳವಡಿಸಿಕೊಂಡು ಅಂದರೆ ಪಂಚೇಂದ್ರಿಗಳ ಮೂಲಕ ಸತ್ಯ ತಿಳಿಯುವ ಹಾಗೆ ಇಲ್ಲಿ ತಿಳಿಯದು. ಇಲ್ಲಿ ಮನಸ್ಸಿನ ಮೂಲಕ ಸ್ವಂತ ಅನುಭವದಿಂದ 'ಆತ್ಮ' 'ಪರಮಾತ್ಮ' 'ಅತೀತ' 'ಪರಾತ್ಪರವಸ್ತು'ಗಳ ಜ್ಞಾನವನ್ನು ಪಡೆಯಬೇಕೆಂದು ಕೋ. ಚೆಯವರು ಹೇಳುತ್ತಾರೆ.

**೬.೩ ಸಾಮಾಜಿಕ ಚಿಂತನೆ**

ಕೋ. ಚೆಯವರು ಒಬ್ಬ ಪ್ರಗತಿಪರ ಚಿಂತಕರು. ಅವರು ಸಮಾಜದಲ್ಲಿ ಕಂಡುಬರುವ ಭಿನ್ನತೆಗಳನ್ನು ಕುರಿತಾಗಿ ಅವುಗಳಲ್ಲಿ ಯಾವ ವ್ಯತ್ಯಾಸಗಳಿವೆ, ಸಮಾಜದಲ್ಲಿ ಭಿನ್ನವಾಗಿ ಕಾಣುವುದನ್ನು ಹೇಗೆ ಸರಿಪಡಿಸಬೇಕು ಎಂಬುದನ್ನು ಕುರಿತು ಕೋ. ಚೆಯವರು ತಮ್ಮ ಬರವಣಿಗೆಯಲ್ಲಿ ಮೂಡಿಸಿದ್ದಾರೆ. ಅವುಗಳನ್ನು ಇಲ್ಲಿ 'ಕೋ. ಚೆಯವರ ಸಮಾಜಿಕ ಚಿಂತನೆಗಳು' ಎಂಬುವ ಶೀರ್ಷಿಕೆಯಡಿಯಲ್ಲಿ ತಿಳಿಸಲಾಗುತ್ತದೆ.

**ಸಾಹಿತ್ಯಕ್ಕೂ ಮತ್ತು ಜನಪದಕ್ಕೂ ಬೇದ ಸಲ್ಲದು**

ಕೋ. ಚೆ ಒಬ್ಬ ಸುಪ್ರಸಿದ್ಧ ಬರಹಗಾರರು. ಸಮಾಜದಲ್ಲಿ ಸಾಹಿತಿಗಳಿಗೆ ಇರುವ ಸ್ಥಾನಮಾನಕ್ಕೂ, ಜನಪದರಿಗಿರುವ ಸ್ಥಾನಮಾನಕ್ಕೂ ವ್ಯತ್ಯಾಸವೇನೂ ಇಲ್ಲವೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸುಪ್ರಸಿದ್ಧ ಆಂಗ್ಲ ಕವಿ 'ಷೆಲ್ಲಿ' ಹೇಳುವಂತೆ 'ಕವಿಗಳು ಈ ಲೋಕದ ಅನಧಿಕೃತ ಶಾಸಕರು' ಎಂದು, ಆದರೆ ಜನಪದಗೀತೆಯ ಕವಿಗಳು ಯಾರು ಎಂಬುದೇ ತಿಳಿದಿಲ್ಲ. 'ಅವರ ಕಾಲ, ಕುಲ, ಗೋತ್ರಗಳೇನು? ಎಂಬುದು ತಿಳಿಯುವುದಿಲ್ಲ. ಅದಕ್ಕೆ ಜನಪದ ಸಾಹಿತ್ಯ ಒಂದು ಸಾಮಾಜಿಕ ಶಕ್ತಿಯೇ ಆಗಿದೆ. ಅವರು ಯಾರ ಕಣ್ಣಿಗೂ ಬೀಳದ, ಬೀಳಲಾರದ ಶಾಸಕರು ಎನ್ನುತ್ತಾರೆ ಕೋ. ಚೆ.

ಸಾಮಾನ್ಯವಾಗಿ ಕುಟ್ಟುವ, ಬೀಸುವ ಸುಗ್ಗಿಯ, ಹಂತಿಯ-ಮುಂತಾದ ಸಮಯದಲ್ಲಿ ಹಾಡಿದ ಪದಗಳೇ ಜನಪದ ಸಾಹಿತ್ಯ ಎಂಬ ಭಾವನೆ ಜನರಲ್ಲಿ ಮೂಡಿದೆ. ಇದು ತಪ್ಪು ಎಂಬುದು ಕೋ. ಚೆಯವರ ಅಭಿಪ್ರಾಯವಾಗಿದೆ. ಏಕೆಂದರೆ ಜನಪದ ಸಾಹಿತ್ಯದ ವ್ಯಾಪ್ತಿ ಇನ್ನೂ ವಿಸ್ತಾರವಾಗಿದೆ. ಅದರಲ್ಲಿ ಗಾದೆಮಾತುಗಳು, ಒಗಟುಗಳು ಸೇರಿ ಕೊಳ್ಳುತ್ತವೆ. 'ಗಾದೆಯ ಮಾತು ವೇದಕ್ಕೆ ಸಮ' ಎಂಬುದು ಎಷ್ಟು ಸತ್ಯ ಜನಪದ ಸಾಹಿತ್ಯಕ್ಕೆ ವೇದಗಳಷ್ಟೇ ಬೆಲೆ, ಸ್ಥಾನ ಉಂಟೆಂದು ಕೋ. ಚೆ ಹೇಳುತ್ತಾರೆ.

'ವೇದ' ಎಂದರೆ 'ನಿತ್ಯಜ್ಞಾನ' ಅದು ಸನಾತನ. ಅದು ಅಪೌರುಷೇಯ. ವೇದಗಳು ಯಾರಿಂದ ಸೃಷ್ಟಿಯಾಗಿವೆ ಎಂದು ಹೇಳಲು ಬರುವುದಿಲ್ಲ. ಆದರೆ ಅವು ಸಾಹಿತ್ಯ ರೂಪದಲ್ಲಿವೆ. ಅಂದಮಾತ್ರಕ್ಕೆ ಮನುಷ್ಯತ್ವ ಹುಟ್ಟುವುದಕ್ಕೆ ಮೊದಲು ವೇದಗಳಿರಲಿಲ್ಲ ಎಂದು ಹೇಳಲುಬಾರದು. ಅವು ಹೇಗೆ ಲೋಕಕ್ಕೆ ಮನುಷ್ಯನಿಂದ ಬಂದಿವೆಯೋ, ಹಾಗೆ ಜನಪದ ಸಾಹಿತ್ಯವೂ ಬಂದಿರುವುದು ಎಂಬುದು ಕೋ. ಚೆಯವರ ಅಭಿಪ್ರಾಯ.

ಸಾಹಿತ್ಯ ರಚನೆಮಾಡಿದ ಮಾತ್ರಕ್ಕೆ, ಸಾಹಿತ್ಯ ರಚನೆಗೆ ಸ್ಪೂರ್ತಿ ಕಲಿಕೆಯಿಂದ ಬಂದಿಲ್ಲ. ಅದು ವೇದದ್ರಷ್ಟಾರಿಗೆ ಇದ್ದಂತೆ ಅದು ಕಾಣಿಕೆಯಾಗಿದೆ ಎಂಬುದು ಕೋ. ಚೆಯವರ

ಚಿಂತನೆ. ಹಾಗಾದರೆ ಕವಿಯ ಲಿಖಿತ ಸಾಹಿತ್ಯಕ್ಕೂ ಮತ್ತು ಜನಪದ ಮೌಖಿಕ ಸಾಹಿತ್ಯಕ್ಕೂ ವ್ಯತ್ಯಾಸವಿಲ್ಲ ಎಂಬುದು ಅರ್ಥವಲ್ಲ. ಇದರಲ್ಲಿ ವ್ಯತ್ಯಾಸ ಕಂಡುಬರುವುದು ಬರವಣಿಗೆ ಮತ್ತು ಕವಿಗಳು ಮಾತ್ರವಾಗಿದ್ದಾರೆ. ಆದರೆ ಈ ಎರಡು ಸಾಹಿತ್ಯದಲ್ಲಿ ಸಾಮ್ಯತೆ ಇರುವುದೇನೆಂದರೆ ಇವುಗಳೆರಡು ಸಾಹಿತ್ಯ ರಚನೆಯಾಗಿರುವುದು ಫಲಾಪೇಕ್ಷೆಯಿಂದಲ್ಲ ಎಂದು ತಿಳಿಯಬಹುದು.

ಒಂದು ವೇಳೆ ರಾಜರ ಆಶ್ರಯದಿಂದ ಅಥವಾ ಇನ್ನು ಯಾವುದೇ ರೀತಿಯಲ್ಲಿ ಸಹಾಯಕರಾಗಿರುವುದು ಅವರನ್ನು ತಮ್ಮ ಸಾಹಿತ್ಯದಲ್ಲಿ ಪ್ರಶಂಶಿಸುತ್ತೇವೆ. ಅಥವಾ ಅವರ ಗುಣಗಾನ ಮಾಡುತ್ತೇವೆ ಹಾಗೆ ಜನಪದರು ತಮಗೆ ನೆರೆಯವರು ಯಾವ ರೀತಿ ಸಹಾಯ ಮಾಡುತ್ತಾರೆ. ಅದಕ್ಕೆ ಜನಪದರು ಕೃತಜ್ಞರಾಗಿರುವ ಬಗೆ ಹೇಗೆಂಬುದನ್ನು ಈ ಕೆಳಗಿನ ಜನಪದ ಸಾಹಿತ್ಯದಲ್ಲಿ ನೋಡಬಹುದು.

"ಕಲ್ಲು ಕೊಟ್ಟಮ್ಮಗೆ ಎಲ್ಲ ಭಾಗ್ಯವು ಬರಲಿ
ಪಲ್ಲಕ್ಕಿ ಮೇಲೆ ಮಗ ಬರಲಿ! ಈ ಮನೆಗೆ
ಮಲ್ಲಿಗೆ ಮುಡಿಯೋ ಸೊಸೆ ಬರಲಿ॥"

ಎಂದು ಹಾಡಿ ತಮ್ಮ ಕೃತಜ್ಞತೆಯನ್ನು ಅರ್ಪಿಸುವುದು ಕಂಡುಬರುತ್ತದೆ. ಈ ದೆಸೆಯಲ್ಲಿ ಕೋ. ಚೆಯವರು ಕವಿ' ರಚಿಸಿದ ಸಾಹಿತ್ಯಕ್ಕೂ ಮತ್ತು ಜನಪದ ಸಾಹಿತ್ಯಕ್ಕೂ ಭೇದ ಬೇಡ ಎಂದು ಹೇಳುತ್ತಾರೆ.

### ೬.೪ ಸಮಾಜದಲ್ಲಿ ಸ್ವೇಚ್ಛಾಚಾರ ಸ್ವಾತಂತ್ರ್ಯ ಸಲ್ಲದು

ಕೋ. ಚೆಯವರು ಸಂವಿಧಾನ ಕೊಡಮಾಡಿದ ಕೆಲವು ಮೂಲಭೂತ ಹಕ್ಕುಗಳನ್ನು ಸಮಾಜದ ಜನ ವಿವಿಧ ರೀತಿಯಲ್ಲಿ ಅರ್ಥೈಸಿಕೊಂಡಿರುವುದು ತಪ್ಪು ಎಂಬುದನ್ನು ಹೇಳ ಬಯಸುತ್ತಾರೆ.

ಸ್ವಾತಂತ್ರ್ಯ ಎಂಬುದು ನಾವು ಹುಟ್ಟಿನಿಂದ ಪಡೆದ 'ಜೀವಿಸುವ ಹಕ್ಕು'. 'ಆಹಾರ ಸೇವಿಸುವ ಹಕ್ಕು' ಇತ್ಯಾದಿಗಳು ನಮ್ಮ ದಿನ ನಿತ್ಯದಲ್ಲಿ ಬಳಸಬಹುದಾದ ಸ್ವಾತಂತ್ರ್ಯವಾಗಿದೆ. ಆದರೆ ಕೆಲವು ವೇಳೆ ಸ್ವಾತಂತ್ರ್ಯದ ಅಪಹರಣವಾಗಿಬಿಡುತ್ತದೆ. ನಮಗೆ ವೃತ್ತಿಯನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿದೆ. ಆದರೆ ನಾವು ಆಯ್ಕೆ ಮಾಡಿಕೊಳ್ಳುವ ವೃತ್ತಿಯು ಸಮಾಜಿಕ ನೆಮ್ಮದಿ ಮತ್ತು ಆರೋಗ್ಯಕ್ಕೆ ದಕ್ಕೆ ತರಬಾರದು ಎಂಬುದನ್ನು ಪಾಲಿಸಬೇಕು. ವೇಶ್ಯವೃತ್ತಿಯಿಂದ ಸಾಮಾಜಿಕ ನೆಮ್ಮದಿ ಮತ್ತು ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುವುದರಿಂದ ಸಂವಿಧಾನದ ಆರ್ಟಿಕಲ್ ೧೯(ಜಿ)ಗೆ ವೃತ್ತಿ ಸ್ವಾತಂತ್ರ್ಯದ ಮೂಲಭೂತ ಹಕ್ಕು ಪ್ರಜೆಗಳಿಗಿದ್ದರೂ ವೇಶ್ಯವೃತಿ ಸಾಮಾಜಿಕ ನೆಮ್ಮದಿ ಮತ್ತು ಆರೋಗ್ಯಕ್ಕೆ ದಕ್ಕೆ ಉಂಟುಮಾಡುವುದರಿಂದ ರಾಜ್ಯಗಳು ಆ ವೃತ್ತಿಯನ್ನು ಆಚರಿಸುವ ನಿರ್ಬಂಧಗಳನ್ನು ಹೇರುವುದು ಸಂವಿಧಾನ ಬಾಹಿರವಲ್ಲ ಎಂದು ತೀರ್ಪು ಕೊಡಲಾಗಿದೆ. ಅಂದರೆ ನಮ್ಮ ಸ್ವಾತಂತ್ರ್ಯ ಸಮಾಜದ ನೆಮ್ಮದಿಯನ್ನು ಆಳುಮಾಡುವಂತಿದ್ದರೆ ಅದಕ್ಕೆ ನಿರ್ಬಂಧ ಹಾಕುವಂತೆ ಇರಬೇಕೆಂದು ಹೇಳಿದಂತೆ ಆಗುತ್ತದೆ.

ಆದರೆ ಜನರಿಂದ ಚುನಾಯಿತರಾದ ಆಡಳಿತದ ವರ್ಗ ಜನರಿಗೆ ಕೊಡಮಾಡಿದ ಹಕ್ಕುಗಳಾದ 'ವಾಕ್ ಸ್ವಾತಂತ್ರ್ಯ', 'ಅಭಿವ್ಯಕ್ತಿ ಸ್ವಾತಂತ್ರ್ಯ', ಸಂಘ-ಸಂಸ್ಥೆಯ ಸ್ಥಾಪನೆಯ ಸ್ವಾತಂತ್ರ್ಯ', 'ಮತ ಧರ್ಮವನ್ನು ಆಚರಿಸುವ ಸ್ವಾತಂತ್ರ್ಯ', 'ಮನುಷ್ಯನ ಆತ್ಮ ಸಾಕ್ಷಿಯಂತೆ ನಡೆದುಕೊಳ್ಳುವ ಸ್ವಾತಂತ್ರ್ಯ' ಇತ್ಯಾದಿಗಳು. ಇವುಗಳು ಸಮಾಜಿಕ ನೆಮ್ಮದಿಯನ್ನು ಕೆಡಿಸುವಂತಿದ್ದರೆ ಅದಕ್ಕೆ ನಿರ್ಬಂಧ ಹೇರುವುದು ನ್ಯಾಯಾಂಗದ ಸ್ವಾತಂತ್ರ್ಯಕ್ಕೆ ಬಿಡಬೇಕೆಂದು ಕೋ. ಚೆಯವರು ಅಭಿಪ್ರಾಯ ಪಡುತ್ತಾರೆ.

ಪ್ರಜೆಗಳು ತಮ್ಮದೇ ಒಂದು ಸಂವಿಧಾನ ರಚಿಸಿಕೊಂಡು ಪ್ರಜೆಗಳ ಸ್ವಾತಂತ್ರ್ಯದ ರಕ್ಷಣೆಗೆ ಸರ್ಕಾರವನ್ನು ರಚಿಸಿರುತ್ತಾರೆ. ಆದರೆ, ಅಧಿಕಾರಕ್ಕೆ ಬಂದ ಪ್ರಜಾಪ್ರತಿನಿಧಿಗಳು ಮಾನವನಿಗೆ ಮೂಲಭೂತವಾಗಿ, ನಿಸರ್ಗದತ್ತ ಬಂದ ಹಕ್ಕುಗಳನ್ನು ಕಸಿದುಕೊಂಡು ಬಿಡುತ್ತಾರೆ. ಈ ಪರಿಸ್ಥಿತಿಯನ್ನು ಭಾರತ ೧೯೭೫ ರಿಂದ ೧೯೭೭ರ ತುರ್ತು ಪರಿಸ್ಥಿತಿ ಸಂದರ್ಭದಲ್ಲಿ ಅನುಭವಿಸಿದೆ. ಇದನ್ನು ತಪ್ಪಿಸಲು ಕೋ. ಚೆಯವರು 'ಹೆರಾಲ್ಡ್ ಜೆ ಲಾಸ್ಕಿರ್' ಅಭಿಪ್ರಾಯವನ್ನು ಸಮರ್ಥಿಸಿಕೊಳ್ಳುತ್ತಾರೆ. ಇವರ ಪ್ರಕಾರ "ಲಿಬರ್ಟ್ ಆಲ್‌ವೇಸ್ ಡಿಮಾಂಡ್ಸ್ ಅ ಲಿಮಿಟೇಷನ್ ಆಫ್ ಪೊಲಿಟಿಕಲ್ ಅಥಾರಿಟಿ" ಇದು ಪ್ರಜೆಗಳ ಸ್ವಾತಂತ್ರ್ಯ ರಕ್ಷಣೆಯ ಕೀಲಿಕೈ. ಅಂದರೆ ಆಳುವವರ ಕೈಗೆ ಅನಿರ್ಬಂಧ, ಅಮಿತ, ಮಿತಿಮೀರಿದ ಅಧಿಕಾರವನ್ನು ಕೊಡಬೇಡಿ ಎಂದು ಅರ್ಥವಾಗುತ್ತದೆ.

ವ್ಯಕ್ತಿಯ ಸ್ವಾತಂತ್ರ್ಯದ ರಕ್ಷಣೆಗೆ ಅಧಿಕಾರಿಗಳನ್ನು ಹದ್ದು ಬಸ್ತಿನಲ್ಲಿಟ್ಟುಕೊಳ್ಳುವುದು ಉತ್ತಮ. ಏಕೆಂದರೆ 'ಅನಿಯಂತ್ರಿತ ಅಧಿಕಾರ ಯಾವಾಗಲೂ ಸ್ವಾತಂತ್ರ್ಯದ ಸಹಜ ಶತ್ರು' ಅದಕ್ಕೆ ಕೋ. ಚೆಯವರು ಆಳುವವರ ಅಧಿಕಾರವನ್ನು ಹದ್ದು ಬಸ್ತಿನಲ್ಲಿಟ್ಟುಕೊಳ್ಳಲು ಕೆಲವು ಉಪಾಯಗಳನ್ನು ತಿಳಿಸಿದ್ದಾರೆ.

* ಮೊದಲನೆಯದಾಗಿ ಸಾರ್ವತ್ರಿಕ ಮತದಾನದ ಹಕ್ಕು ಪ್ರಜೆಗಳಿಗಿರಬೇಕು.

* ಎರಡನೆಯದಾಗಿ ಮತದಾನದಿಂದ ಕಾಲಾನುಕಾಲಕ್ಕೆ ಚುನಾಯಿತ ಪ್ರತಿನಿಧಿಗಳು ಆಯ್ಕೆಯಾಗಬೇಕು. ಅಧಿಕಾರ ಯಾರಲ್ಲೂ ಶಾಶ್ವತವಾಗಿ ಉಳಿಯಬಾರದು. ಅರಸೊತ್ತಿಗೆಯ ಕಾಲದಲ್ಲಿ ಇದ್ದಂತೆ ಅಧಿಕಾರ ವಂಶಪಾರಂಪರ್ಯವಾಗಿ ಸಂಕ್ರಮಿಸಬಾರದು. ಪ್ರಜೆಗಳಿಗೆ ಸರ್ಕಾರವನ್ನು ಬದಲಾಯಿಸುವ ಅವಕಾಶ ಇದ್ದೇ ಇರಬೇಕು.

* ಮೂರನೆಯದಾಗಿ ಚುನಾಯಿತ ಪ್ರತಿನಿಧಿಗಳ ಶಾಸನಸಭೆಯ ಶಾಸನಾಧಿಕಾರಕ್ಕೆ ಮಿತಿ ಹಾಕಬೇಕು. ಚುನಾಯಿತ ಪ್ರತಿನಿಧಿಗಳಿಂದ ಮಾತ್ರ ತಮಗೆ ಬೇಕಾದ ಶಾಸನ ರಚನೆಮಾಡಿ ತಮಗಿಷ್ಟಬಂದಂತೆ ಸಂಪತ್ತನ್ನು ಕೊಳ್ಳೆ ಹೊಡೆಯುವ ಪ್ರಜೆಗಳ ಹಕ್ಕನ್ನು ತೊತ್ತಲು ದುಳಿಯುವ ಸ್ವೇಚ್ಛಾಧಿಕಾರ ಇರಬಾರದು. ಅವರು ಮಾಡುವ ಶಾಸನ ಸಂವಿಧಾನ ಚೌಕಟ್ಟಿನಲ್ಲೆ ಇರಬೇಕಾದುದು ಸ್ವಾತಂತ್ರ್ಯ ರಕ್ಷಣೆಗೆ ಅತ್ಯಗತ್ಯ ಎಂದು ಕೋ. ಚೆ ಪ್ರತಿಪಾದಿಸಿದ್ದಾರೆ.

ಆದರೆ ಮೇಲೆ ತಿಳಿಸಿದ ಹಾಗೆ ಶಾಸನ ತಂದು, ಹಾಗೆ ನಡೆದುಕೊಂಡರೆ ಸಮಾಜ

ನೆಮ್ಮದಿಯಾಗಿರುತ್ತದೆ ಎಂದು ಹೇಳಲು ಬರುವುದಿಲ್ಲ. ಏಕೆಂದರೆ ಭಯೋತ್ಪಾದಕತೆಯ ಇಂದಿನ ಯುಗದಲ್ಲಿ ಭಾರತದ ಸುತ್ತಲೂ ಶತ್ರು ರಾಷ್ಟ್ರಗಳೇ ಸುತ್ತುವರೆದಿರುವುದರಿಂದ ಆಡಳಿತ ವರ್ಗಕ್ಕೆ ಕೆಲವುಬಾರಿಯಾದರೂ ವ್ಯಕ್ತಿ ಸ್ವಾತಂತ್ರ್ಯದ ಮೇಲೆ ನಿರ್ಭಂದ ಹೇರುವ ಅವಶ್ಯಕತೆ ಕಾಣಿಸುತ್ತದೆ ಎಂದು ಹೇಳಬಹುದು.

**ಉತ್ತಮ ವ್ಯಕ್ತಿಗಳಿಗೆ ಎಲ್ಲಾ ಸಮಾಜದಲ್ಲಿ ಸ್ಥಾನವಿರಬೇಕು**

ಉತ್ತಮರು ಎಂದರೆ ಯಾರು? ಅವರು ಯಾವ ಕಾರ್ಯಕ್ಕೆ ಎಲ್ಲಾ ಸಮಾಜಗಳು ಗೌರವಿಸಬೇಕು? ಅವರೆಲ್ಲ ಭಾರತೀಯಲ್ಲದಿದ್ದರೂ, ಭಾರತೀಯ ಸಮಾಜ ಅವರನ್ನು ಸತ್ಕರಿಸಬೇಕೇ? ಎಂಬುವ ಪ್ರಶ್ನೆಗಳಿಗೆ ಕೋ. ಚೆ ಉತ್ತರ ಕಂಡುಕೊಂಡಿದ್ದಾರೆ.

ಉತ್ತಮರು ಎಂದರೆ, "ಶೋಷಣೆಯ ವಿರುದ್ಧವಾಗಿ ಶೋಷಿತ ಜನರ ಪರವಾಗಿ ಅನುಕಂಪ ಉಳ್ಳವರು" ಎಂದು ವ್ಯಾಖ್ಯಾನಿಸಬಹುದು. ಅಥವಾ ಮನುಕುಲದ ಏಳಿಗೆಗಾಗಿ ದುಡಿದವರನ್ನು ಉತ್ತಮರು ಅಥವಾ ಮಹಾತ್ಮರು ಎಂದು ಕೋ. ಚೆಯವರು ಅಭಿಪ್ರಾಯ ಪಡುತ್ತಾರೆ.

ಇಂತಹ ಮಹಾನ್ ವ್ಯಕ್ತಿಗಳ ಕಾರ್ಯಗಳು ಕೇವಲ ಒಂದು ಸಮಾಜಕ್ಕೆ ಸೀಮಿತವಾಗ ಬಾರದು. ಏಕೆಂದರೆ ಗಾಂಧೀಜಿಯ ಅಹಿಂಸಾನೀತಿ ಭಾರತಕ್ಕೆ ಅಷ್ಟೆ ಮಾದರಿಯೇ? ಅಂಬೇಡ್ಕರ ಅಸ್ಪೃಶ್ಯತೆ ವಿರೋಧನೀತಿ ಕೇವಲ ಭಾರತೀಯ ಸಮಾಜಕ್ಕೆ ಸೀಮಿತವಾಗಿದೆಯೇ? ಆಫ್ರಿಕಾದಲ್ಲಿದ್ದ ಕರಿಯರ ಬಿಳಿಯರ ಜನಾಂಗದ ನೀತಿಗೂ ಇದು ಅನ್ವಯವಾಗುವುದಿಲ್ಲವೇ? ಹಾಗೆ 'ರೋಸೋ' ಹೇಳಿದ "ನಿಸರ್ಗಕ್ಕೆ" ಹಿಂದಿರುಗಿರಿ ಎಂಬುವ ನೀತಿ ಕೇವಲ ಫ್ರಾನ್ಸಿಗೆ ಸೀಮಿತವಾಗುತ್ತದೆಯೇ? ಕಾರ್ಲ್‌ಮಾರ್ಕ್ಸ್ ಹೇಳುವ "ವರ್ಗ ಸಂಘರ್ಷ" ಕೇವಲ ಜರ್ಮನಿಗೋ ಅಥವಾ ಯುರೋಪ್ ಖಂಡಕ್ಕೆ ಮಾತ್ರ ಸೀಮಿತವಾಗಿದೆಯೇ? ಇಲ್ಲ. ಗಾಂಧೀಜಿಯವರ ಅಹಿಂಸಾನೀತಿ ಇಡೀ ಪ್ರಪಂಚಕ್ಕೆ ಮಾದರಿ. ರಕ್ತರಹಿತವಾಗಿ ಸ್ವಾತಂತ್ರ್ಯಗಳಿಸಿಕೊಟ್ಟ ನೀತಿ ಎಲ್ಲಾ ಸಮಾಜಕ್ಕೂ ಅನ್ವಯವಾಗುತ್ತದೆ ಹಾಗೆ ಅಂಬೇಡ್ಕರ ಅವರ ಅಸ್ಪೃಶ್ಯತಾ ವಿರೋಧ ನೀತಿ ಕೇವಲ ಭಾರತಿಯ ಸಮಾಜಮಾತ್ರ ಮಾಡಿದರೆ ಸಾಕಾಗುವುದಿಲ್ಲ. ಅದು ಆಫ್ರಿಕಾದಲ್ಲಿರುವ ನೀಗ್ರೋಗಳ ಏಳಿಗೆಗೆ ಕಾರಣವಾಗುತ್ತದೆ. ಕಾರ್ಲ್‌ಮಾರ್ಕ್ಸ್‌ನ ವರ್ಗ 'ಸಂಘರ್ಷ' ನೀತಿ ಕೇವಲ ಯುರೋಪಿನಲ್ಲಿ ಮಾತ್ರ ಸರಿಮಾಡಿದರೆ ಸಾಕಾಗುವುದಿಲ್ಲ. ಭಾರತದಂತ ಭೂಮಾಲೀಕರ ಮೇಲು ಇದು ಆಗಬೇಕು. ಹೀಗಾಗಿ ಮನುಕುಲದ ಹಿತ ಬಯಸುವರು ಕೇವಲ ಒಂದು ಸಮಾಜಕ್ಕೆ ಸೀಮಿತವಲ್ಲ. ಅವರು ಎಲ್ಲ ಸಮಾಜಕ್ಕೂ ಸೀಮಿತ ವ್ಯಕ್ತಿಗಳು ಎಂಬುದು ಕೋ. ಚೆಯವರ ಅಭಿಪ್ರಾಯವಾಗಿದೆ.

**೬.೫ ಕೋ.ಚೆಯವರ ನ್ಯಾಯದ ದೃಷ್ಟಿಕೋನ**

ಕೋ. ಚೆಯವರು ಸುಮಾರು ಆರು ದಶಕಗಳ ಕಾಲ ನ್ಯಾಯಾಲಯುದಲ್ಲಿ ವಕೀಲರಾಗಿ, ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿರುವರು. ಅವರು ನ್ಯಾಯಾಲಯದ ವ್ಯವಸ್ಥೆಗಳನ್ನು ಕುರಿತು ಚಿಂತಿಸಿದವರು. ಅವರು ನ್ಯಾಯ ಪರಿಪಾಲನೆಯ ವಲಯದಲ್ಲಿ ಪ್ರಮುಖ ಪಾತ್ರ ವಹಿಸಿದ್ದು,

ಭಾರತೀಯ ಸಂಸ್ಕೃತಿಗೆ ಅಸಮಂಜಸವಾಗಿ ನ್ಯಾಯದ ಬದಲು ಅನ್ಯಾಯವನ್ನು ಎಡೆಮಾಡಿ ಕೊಡುತ್ತದೆ. ಭಾರತದ ಸಮಾಜದ ವ್ಯವಸ್ಥೆಗೆ ಸ್ಥಳೀಯ ನ್ಯಾಯಾಂಗಗಳು ಹೀಗೆ ಸಹಕಾರಿಯಾಗಿವೆ. ಎಂಬುದನ್ನು ಕೋ. ಚೆಯವರು ಪ್ರತಿಪಾದಿಸಿ ಎತ್ತಿ ಹಿಡಿದಿದ್ದಾರೆ.

**ನ್ಯಾಯ ವಿತರಣೆಯ ವಿಳಂಬ ಸಲ್ಲದು**

ಭಾರತದ ಸರ್ಕಾರದ ಮಾಜಿ ಕಾನೂನು ಮಂತ್ರಿಯಾಗಿದ್ದ 'ಜಗನ್ನಾಥ ಕಾಶಲರು' ದೇಶದಲ್ಲಿರುವ ಉಚ್ಚ ನ್ಯಾಯಾಲಯಗಳಲ್ಲಿ ಇತ್ಯರ್ಥವಾಗದೆ ಕೊಳೆಯುತ್ತಿರುವ ಕೇಸುಗಳ ಸಂಖ್ಯೆ ಎಂಟುಲಕ್ಷ ಎಂಬತ್ತುಸಾವಿರ ಎಂದು ಲೋಕಸಭೆಯಲ್ಲಿ ಹೇಳಿದರು. ಅದರಲ್ಲಿ ಕರ್ನಾಟಕ ಉಚ್ಚ ನ್ಯಾಯಾಲಯ ಒಂದರಲ್ಲೇ ಒಂದು ಲಕ್ಷಕ್ಕಿಂತ ಹೆಚ್ಚು ಕೇಸುಗಳು ಇತ್ಯರ್ಥವಾಗದೆ ಉಳಿದಿವೆ. ಹಾಗೆ ಇದರ ಆಧೀನ ನ್ಯಾಯಾಲಯದಲ್ಲಿ ೯೨ ಲಕ್ಷ ಕೇಸುಗಳು ಇತ್ಯರ್ಥವಾಗದೆ ಹಾಗೆ ಉಳಿದಿವೆ ಎಂಬುದನ್ನು ತಿಳಿಸಿದರು.

ಇದರಲ್ಲಿ ಇನ್ನೊಂದು ಆಶ್ಚರ್ಯ ಪಡಬೇಕಾಗಿರುವ ಅಂಶವೇನೆಂದರೆ ಇದರಲ್ಲಿ ಬಹುತೇಕ ಕೇಸುಗಳು ಐದು ವರ್ಷಗಳಿಗಿಂತ ೨೦-೩೦ ವರ್ಷದ ಇಷ್ಟೊಂದು ಹಳೆಯ ಕೇಸುಗಳು ಬೇಗ ವಿಚಾರಣೆ ಆಗದಿರುವುದಕ್ಕೆ ಕೋ. ಚೆಯವರು ಕಾರಣ ನೀಡುತ್ತಾರೆ.

ವಕೀಲರು ವಿನಾಕಾರಣ ವಾಯಿದೆ ಕೇಳುವುದು, ಎಲ್ಲೊ ಒಂದು ಕಡೆ ವಕೀಲರಿಗೆ ಯಾರಾದರೂ ಅಪಮಾನ ಮಾಡಿದರೆಂದರೆ ಇಡೀ ನ್ಯಾಯಾಲಯದ ಕಲಾಪಗಳನ್ನು ಬಹಿಸ್ಕರಿಸುವುದು, ಒಂದು ನ್ಯಾಯಾಲಯದಲ್ಲಿ ಒಬ್ಬ ಕಕ್ಷಿದಾರನಿಗೆ ಅನ್ಯಾಯವಾಗಿದೆ ಎಂದು ಅವನ್ನು ಮೇಲಿನ ನ್ಯಾಯಾಲಯಕ್ಕೆ ಅಪೀಲು ಸಲ್ಲಿಸುವುದು ಮುಂತಾದ ಕಾರಣಗಳು ನ್ಯಾಯವಿಚಾರಣೆಗೆ ವಿಳಂಬವನ್ನುಂಟುಮಾಡುತ್ತದೆ.

ಇದೆಕ್ಕೆಲ್ಲಾ ಪರಿಹಾರ ಗ್ರಾಮನ್ಯಾಯಾಲಯ ಎಂಬುದು ಕೋ. ಚೆಯವರ ಅಭಿಪ್ರಾಯವಾಗಿದೆ. ಇಂದಿನ ನ್ಯಾಯಾಲಯ ಪದ್ಧತಿಯು ಬ್ರಿಟಿಷರು ಬಿಟ್ಟು ಹೋದ ವ್ಯವಸ್ಥೆಯಾಗಿದ್ದು, ಇದು ಭಾರತದಂತಹ ಸಮಾಜಕ್ಕೆ ಸರಿಹೊಂದುವುದಿಲ್ಲ. ಇಂದು ನ್ಯಾಯಾಲಯಗಳಲ್ಲಿ ಸಾಕ್ಷಿ ಹೇಳುವವರಿಗೆ ನ್ಯಾಯಾಲಯದ ಬಗ್ಗೆ ಗೌರವವಿಲ್ಲ, ಅದೇ ವ್ಯಕ್ತಿ ಊರಿನ ಗುಡಿಮುಂದೆ ಯಾವುದೇ ಕಟ್ಟೆಯ ಮುಂದೆ ಭಯ ಭಕ್ತಿಯಿಂದ ಸರಿಯಾದ ಸಾಕ್ಷಿ ಹೇಳುತ್ತಾನೆ. ಅಲ್ಲದೆ ಅಲ್ಲಿ ನ್ಯಾಯಾಂಗದ ವ್ಯವಸ್ಥೆ ತ್ವರಿತಗತಿಯಲ್ಲಿ ವೆಚ್ಚವಿಲ್ಲದೆ ಬಹುಬೇಗ ನಿರ್ಣಯ ಕೈ ಗೊಳ್ಳುತ್ತಿರುವುದರಿಂದ ಬಡಜನರಿಗೆ ಇದರಿಂದ ತುಂಬಾ ಉಪಕಾರವಾಗುತ್ತದೆ. ಎಂದು ಕೋ. ಚೆ ಅಭಿಪ್ರಾಯ ಪಡುತ್ತಾರೆ.

**ಸಂವಿಧಾನದ ಉದ್ದೇಶ ಜಾರಿಯಾಗಬೇಕು**

ಭಾರತದ ಸಂವಿಧಾನ ಜಾರಿಯಾಗಿ ಇಲ್ಲಿಗೆ ಸರಿಸುಮಾರು ೫೯ವರ್ಷಗಳಾಗಿವೆ. ಆದರೆ ಭಾರತೀಯ ಸಂವಿಧಾನ ಏನು ಹೇಳುತ್ತದೆ ಅದು ಇನ್ನು ಜಾರಿಯಾಗಿಲ್ಲ ಎಂಬುವ ಕೊರಗು ಕೋ. ಚೆಯವರದ್ದು.

ಭಾರತೀಯ ಸಂವಿಧಾನ, ಭಾರತೀಯ ಸ್ವಾತಂತ್ರ್ಯ ಸಂಗ್ರಾಮದ ಉದ್ದೇಶವನ್ನು ಈಡೇರಿಸಲು ರೂಪಿಸಿದ ಶಾಸನರೂಪದ ರಾಜಕೀಯ ಸಿದ್ಧಾಂತ. ಇದು ಕೇವಲ ಶಾಸನವೆ ಮಾತ್ರವಲ್ಲ. ಸ್ವಾತಂತ್ರ್ಯದ ಆಶೋತ್ತರಗಳನ್ನು ಈಡೇರಿಸುವ ರಾಜಕೀಯ ಸಂಕಲ್ಪದ ಧೃಡ ಪ್ರತಿಜ್ಞಾಪತ್ರವೆಂದು ಹೇಳಬಹುದು. ಆದರೆ ಸ್ವತಂತ್ರ್ಯ ಭಾರತದ ಸಂವಿಧಾನ ಏನನ್ನು ಗುರಿಯಾಗಿ ಇಟ್ಟುಕೊಂಡಿದೆ ಎಂಬುದನ್ನು ಸಂವಿಧಾನದ ನಾಲ್ಕನೆಯ ಭಾಗದಲ್ಲಿ ನಿರೂಪಿಸಲಾಗಿದೆ. ರಾಜ್ಯಭಾರ ಕ್ರಮದಲ್ಲಿ ಅನುಸರಿಸಬೇಕಾದ ನಿರ್ದೇಶಕ ತತ್ವಗಳನ್ನು ನಮೂದಿಸಲಾಗಿದೆ.

'ಸಂವಿಧಾನದ ೩೯(ಎ) ವಿಧಿಯ ಪ್ರಕಾರ ಸರ್ವರಿಗೂ ದುಡಿಯುವ ಹಕ್ಕನ್ನು ನೀಡಿದೆ. ಆ ದುಡಿಮೆಗೆ ಬೇಕಾದ ಉತ್ಪಾದಕ ಸಾಮಾಗ್ರಿಯ ಒಡೆತನ ಕೆಲವರ ಕೈಯಲ್ಲೇ ಕೇಂದ್ರಿಕೃತವಾಗದಂತೆ ರಾಜ್ಯಭಾರ ಕ್ರಮದ ಧೋರಣೆ ಆಗಿರಬೇಕೆಂದು ೩೯(ಬಿ) ವಿಧಿ ನಿರ್ದೇಶಿಸುತ್ತದೆ. ಅಂದರೆ ಸಂಪತ್ತಿನ ಉತ್ಪಾದನಾ ಸಾಧನ ಸಲಕರಣೆಗಳು ಶ್ರೀಮಂತರ ಕೈಯಲ್ಲೇ ಕೇಂದ್ರೀಕೃತವಾಗಬಾರದು. ದುಡಿಯಲು ತಲೆಬಲ, ತೋಳ್ಬಲ ಇದ್ದ ಪ್ರತಿಯೊಬ್ಬ ಪ್ರಜೆಗೂ ತನ್ನ ಬುದ್ಧಿ ಮತ್ತು ದೈಹಿಕ ಶಕ್ತಿಯನ್ನು ಉಪಯೋಗಿಸಿ, ಬಾಳಿಗೆ ಬೇಕಾದ ಆರ್ಥಿಕ ಸಂಪತ್ತನ್ನು ಉತ್ಪಾದನೆ ಮಾಡಿ ಗೌರವಯುತವಾಗಿ ಬಾಳುವ ಹಕ್ಕನ್ನು ನಮ್ಮ ಸಂವಿಧಾನ ತನ್ನ ಪ್ರಜೆಗಳಿಗೆ ಕೊಟ್ಟಿದೆ. ೩೯(ಸಿ)ವಿಧಿ. ಹಾಗೆಯೇ ಬಾಲಕ ಬಾಲಕಿಯರನ್ನು ಶೋಷಣೆ ಮಾಡಿ ದುಡಿಸಿಕೊಳ್ಳುವುದನ್ನು ನಿಷಿದ್ಧವೆಂದು ಘೋಷಿಸಲಾಗಿದೆ. ವೇಶ್ಯಾವೃತ್ತಿ, ಭಿಕ್ಷುಕ ವೃತ್ತಿ, ಆರೋಗ್ಯಕ್ಕೆ ಹಾನಿಯುನ್ನುಂಟು ಮಾಡುವಂಥ ವೃತ್ತಿಯನ್ನು ಪ್ರಜೆಗಳು ಆಶ್ರಯಿಸದಂತೆ ರಾಜ್ಯಭಾರ ನೀತಿಯನ್ನು ರೂಪಿಸಬೇಕೆಂದು ವಿಧಿಸಲಾಗಿದೆ. ಹೀಗೆ ದೇಶದ ಅರ್ಥ ಸಂಪತ್ತಿನ ಕೇಂದ್ರೀಕರಣ ಮತ್ತು ಶೋಷಣೆಯ ಬಹಿಷ್ಕಾರವನ್ನು ನಮ್ಮ ಸಂವಿಧಾನದಲ್ಲಿ ಠರಾವು ಮಾಡಲಾಗಿದೆ.

ಆದರೆ ವಾಸ್ತವವಾಗಿ ೫೯ವರ್ಷಗಳಿಂದ ಆಡಳಿತ ನಡೆಸುತ್ತಿರುವ ಸರ್ಕಾರಗಳು ಮೇಲಿನ ಯಾವುದಾದರೊಂದನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿಲ್ಲ. ಎಂಬುದು ಕೋ. ಚೆಯವರ ಅಭಿಪ್ರಾಯ. ಏಕೆಂದರೆ ಇಂದು ರಾಷ್ಟ್ರದ ಸಂಪತ್ತಿನ ಉತ್ಪಾದಕ ಸಾಮಾಗ್ರಿಗಳು ಕೆಲವರ ಕೈಯಲ್ಲೇ ಕೇಂದ್ರೀಕೃತವಾಗಿದೆ. ಶೇಕಡ ೮೫ ರಷ್ಟು ಪ್ರಜೆಗಳು ಬಡತನದ ರೇಖೆಗಿಂತ ಕೆಳಗಿದ್ದಾರೆ. ಅಂದರೆ ಹೊಟ್ಟೆ ಬಟ್ಟೆಗೆ ಗತಿಯಿಲ್ಲದೆ ಬಿಕಾರಿಗಳಾಗಿದ್ದಾರೆ. ತಲೆಯ ಮೇಲೊಂದು ಸರಿಯಾದ ನೆರಳಿಲ್ಲದೆ ಬದುಕುತ್ತಿದ್ದಾರೆ. ಅಕ್ಷರ ವಿದ್ಯೆಯನ್ನು ಕಡ್ಡಾಯವಾಗಿಯೂ ಉಚಿತವಾಗಿಯೂ ಕೊಡಬೇಕೆಂದು ಘೋಷಿಸಿದ ಮೇಲೆ ಅನಕ್ಷರಸ್ಥರ ಸಂಖ್ಯೆ ಇನ್ನು ಅಧಿಕವಾಗಿದೆ. ರೋಗಿಗಳು, ಭಿಕ್ಷುಕರು ಕಣ್ಣು ತಿರುಗಿಸಿದ ಕಡೆ ಕಾಣುತ್ತಿದ್ದಾರೆ. ಹೊಟ್ಟೆಗಾಗಿ ಹೆಣ್ಣು ದೇಹವನ್ನು ಮಾರಿಕೊಳ್ಳುವ ನೀಚ ಜೀವನ ಪದ್ಧತಿ ಇಂದಿಗೂ ನಡೆಯುತ್ತಿದೆ. ಮಕ್ಕಳನ್ನು ಅನಾರೋಗ್ಯಕರವಾದ ಕೆಲಸಕ್ಕೆ ದುಡಿಸಿಕೊಳ್ಳುವ ಕ್ರೌರ್ಯ ಇಂದಿಗೂ ಮಕ್ಕಳ ಕಣ್ಣು ಕೀಳಿಸಿ ಭಿಕ್ಷುಕ ವೃತ್ತಿಗೆ ಹೂಡುವ ಅಮಾನುಷ ಸ್ಥಿತಿ ಇಂದಿಗೂ ಇದೆ ಎಂದು ಅಭಿಪ್ರಾಯ ವ್ಯಕ್ತಪಡಿಸುವ ಕೋ. ಚೆಯವರು ಸಂವಿಧಾನದಲ್ಲಿ ಉಲ್ಲೇಖವಾಗಿರುವ ಅಂಶಗಳನ್ನು ಕುರಿತು ಸಂವಿಧಾನ ಒಳ್ಳೆಯದೇ ಕೆಟ್ಟದ್ದೇ ಎಂಬುದು ಅದನ್ನು ಕಾರ್ಯಗತಗೊಳಿಸುವ ವ್ಯಕ್ತಿಗಳನ್ನೇ ಅವಲಂಬಿಸಿದೆ ಎಂದು ಹೇಳುತ್ತಾರೆ.

**ನ್ಯಾಯಮೂರ್ತಿಗಳಿಗೆ ಅಂಗಿನ ಅರಮನೆ ಬೇಡ**

ಕೋ. ಚೆಯವರು ನ್ಯಾಯಾಧೀಶರಾದ ಮೇಲೆ ಅವರಿಗೆ ಅನೇಕ ಮಂತ್ರಿಗಳ ಒತ್ತಡಗಳು ಬರುತ್ತಿದ್ದವಾದರೂ ಅವುಗಳಿಗೆ ಯಾವ ಬೆಲೆಯನ್ನು ನೀಡುತ್ತಿರಲಿಲ್ಲ. ಅಷ್ಟು ಪ್ರಾಮಾಣಿಕತೆಯಿಂದ ಕಾರ್ಯ ನಿರ್ವಹಿಸಿದರು. ಆದರೆ ಇತ್ತೀಚೆಗೆ ನ್ಯಾಯಾಧೀಶರು ನಡೆದುಕೊಳ್ಳುವ ರೀತಿಯನ್ನು ಕುರಿತು ಅವು ಕೆಲವು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ನ್ಯಾಯಮೂರ್ತಿಗಳಾದವರು ವರ್ಗಾವಣೆಗೆಂದು ಮಂತ್ರಿ ಮನೆಗಳಿಗೆ ಹೋಗಿ ಬರುತ್ತಿರುವುದು ಇಂದು ಸಾಮಾನ್ಯ. ಆದರೆ ನ್ಯಾಯಮೂರ್ತಿಗಳು ಈ ರೀತಿ ಮಾಡುವುದರಿಂದ ಒಂದು ವೇಳೆ ಆ ಮಂತ್ರಿ ಏನಾದರೂ ಅಪರಾಧ ಮಾಡಿ ಕಟಕಟ್ಟೆಯ ಮೇಲೆ ನಿಂತಾಗ ಅವನ ವಿರುದ್ಧ ಸರಿಯಾದ ತೀರ್ಪು ಹೇಳುವುದು ಕಷ್ಟಸಾಧ್ಯ. ಅದಕ್ಕಾಗಿ ನ್ಯಾಯಮೂರ್ತಿಗಳು ಯಾವುದೇ ಕಾರಣಕ್ಕೂ ರಾಜಕೀಯ ವ್ಯಕ್ತಿಯಿಂದಾಗಲಿ ಅಥವಾ ಬೇರೆಯಾವುದೋ ಸಂಘ-ಸಂಸ್ಥೆಗಳಿಂದಾಗಲಿ ತಮ್ಮ ವೈಯಕ್ತಿಕ ಕೆಲಸ ಕಾರ್ಯಗಳನ್ನು ಸಾಧಿಸಿಕೊಳ್ಳದಿರುವುದು ಉತ್ತಮ ಎಂಬುದು ಕೋ. ಚೆಯವರ ಅಭಿಪ್ರಾಯ.

**ನ್ಯಾಯಮೂರ್ತಿಗಳಿಗೆ ಜಾತಿ ಇಲ್ಲ**

ಇತ್ತೀಚಿನ ದಿನಗಳಲ್ಲಿ ಜಾತಿ ರಾಜಕೀಯ, ವರ್ಗ ರಾಜಕೀಯ ಇರುವಂತೆ, ಜಾತಿಯಿಂದ ವರ್ಗದಿಂದ ನ್ಯಾಯಮೂರ್ತಿಗಳನ್ನು ಗುರುತಿಸುವ ಮಟ್ಟಕ್ಕೆ ಹೋಗಿರುವುದು ಕಂಡುಬರುತ್ತದೆ. ಕೆಲವು ನ್ಯಾಯಮೂರ್ತಿಗಳು ಈ ವರ್ಗಕ್ಕೆ ಸೇರಿದವರೆಂದು ಗುರುತಿಸುತ್ತರಾದರೂ ನ್ಯಾಯಮೂರ್ತಿಗಳು ಮಾತ್ರ "ನಿಷ್ಪಕ್ಷಪಾತವಾಗಿ ನ್ಯಾಯದಾನ ಮಾಡುತ್ತಿರುತ್ತಾರೆ" ಅವರನ್ನು ನೇಮಕ ಮಾಡುವಾಗ, ರಾಜಕೀಯ ಪುಡಾರಿಗಳು ಜಾತೀಯತೆಯ ಊರುಗೋಲನ್ನು ಕೊಟ್ಟು ಮುಂದಕ್ಕೆ ತರಬಹುದು. ಆದರೆ ಒಮ್ಮೆ ಅವರು ನ್ಯಾಯಮೂರ್ತಿಗಳಾದರೆ ಅವರಿಗೆ ಯಾವ ಜಾತಿಮತ ಪಂಥಗಳೂ ಉಳಿಯುವುದಿಲ್ಲ. ಸನ್ಯಾಸಿಯಂತೆ ಅವರು ತಮ್ಮ ಪೂರ್ವಾಶ್ರಮಕ್ಕೆ ತಿಲಾಂಜಲಿ ಕೊಟ್ಟು ಶ್ರಾದ್ಧ ಮಾಡಿಕೊಳ್ಳುತ್ತಾರೆ. ಅವರಿಗೆ ಜಾತೀಯತೆ ಇಲ್ಲದ ಮೇಲೆ ಅವರನ್ನು ಜಾತಿಯಿಂದ ಗುರಿತಿಸಬಾರದು ಎಂದು ಕೋ. ಚೆಯವರ ನಿಲುವಾಗಿದೆ.

**ರಾಜ್ಯಕ್ಕೆ ಒಂದಕ್ಕಿಂತ ಹೆಚ್ಚು ಹೈಕೋರ್ಟುಗಳ ಅಗತ್ಯವೇ?**

ಕರ್ನಾಟಕ ರಾಜ್ಯದಲ್ಲಿ ಇಂದು ಎರಡು ಸಂಚಾರೀ ಹೈಕೋರ್ಟ್ ಪೀಠಗಳು ಹೆಚ್ಚುವರಿಯಾಗಿ ಸ್ಥಾಪನೆಯಾಗಿವೆ ನಿಜ, ಆದರೆ ಅದರ ಅಗತ್ಯವೇನು? ಅದರಿಂದ ಬಡವರಿಗೆ ಒಳ್ಳೆಯ ದಾಗುತ್ತದೆಯಾ? ಸಂಚಾರಿ ಹೈಕೋರ್ಟ್ ಪೀಠಗಳ ಸ್ಥಾಪನೆಯಿಂದ ಶೀರ್ಘ ನ್ಯಾಯ ಇತ್ಯರ್ಥವಾಗುತ್ತದೆಯಾ? ಇವುಗಳನ್ನು ಸ್ಥಾಪಿಸಿರುವುದರಿಂದ ಉದ್ಭವಿಸಬಹುದಾದ ಸಮಸ್ಯೆಗಳು ಎಂತದ್ದು ಮುಂತಾದ ವಿಚಾರಗಳಿಗೆ ಕೋ. ಚೆಯವರ ಚಿಂತನೆಗಳು ಉತ್ತರಿಸುತ್ತವೆ.

ಸಂಚಾರಿ ಹೈಕೋರ್ಟ್ ಪೀಠದ ಸ್ಥಾಪನೆಯಿಂದ ಬಡವರ ಹಿತ ಅಡಗಿದೆ ಎಂಬುದು ಬಹುಜನರವಾದ. ಇದು ಸರಿಯಾದ ವಾದವಲ್ಲವೆಂದು ಕೋ. ಚೆ ಹೇಳುತ್ತಿಲ್ಲ. ಏಕೆಂದರೆ ಬಡಪಕ್ಷಗಾರರು ಬೆಂಗಳೂರಿಗೆ ಬಂದು ಹೋಗುವುದು ಬಹು ದುಬಾರಿಯಾಗುತ್ತಿದೆ. ಬಸ್‌ಚಾರ್ಜ್,

ಹೋಟೆಲ್ ಖರ್ಚು, ವಕೀಲರ ಫೀಜುಗಳಲ್ಲದೆ, ಬೆಂಗಳೂರಿನ ಕಳ್ಳರಿಗೂ ಬಡಪಕ್ಷಗಾರ ದುಡಿಯಬೇಕಾಗಿದೆ. ಈ ಸುಲಿಗೆಯನ್ನು ಸ್ವಲ್ಪ ಮಟ್ಟಿಗಾದರೂ ಕಡಿಮೆಮಾಡಬೇಕೆಂಬ ಬಡವರ ಹಿತದೃಷ್ಟಿಯಿಂದ ಈ ವಾದವನ್ನು ಅವರು ಒಪ್ಪಿಕೊಂಡಿದ್ದಾರೆ.

ಆದರೆ ವಾಸ್ತವವಾಗಿ ಬಡಪಕ್ಷಗಾರರಿಗೆ ಇದು ಅನುಕೂಲವಾಗಲಾರದು ಎಂಬುದು ಕೋ. ಚೆಯವರ ವಾದ. ಏಕೆಂದರೆ ಹೈಕೋರ್ಟ್‌ಗಳಲ್ಲಿ ಬಹುತೇಕ ಸರ್ಕಾರವು ಒಂದು ಪಕ್ಷವಾಗಿದ್ದೇ ಇರುತ್ತದೆ. ಈಗಿರುವ ೩೯ ಸಾವಿರ ಕೇಸುಗಳಲ್ಲಿ ಕನಿಷ್ಠ ೨೪ಸಾವಿರ ಭೂ ಸುಧಾರಣಾ ಮತ್ತು ರಿಟ್ ಅರ್ಜಿಗಳಲ್ಲಿ ಸರ್ಕಾರ ಇದ್ದೇ ಇದೆ. ಈ ಕೇಸುಗಳಲ್ಲಿ ಸರ್ಕಾರಕ್ಕೆ ನೋಟೀಸು ಕೊಡದೇ ಯಾವ ಮಧ್ಯಂತರ, ತಾತ್ಕಾಲಿಕ ಪರಿಹಾರವೂ ಸಾಧ್ಯವಿಲ್ಲ. ಹೈಕೋರ್ಟ್ ವಿಧಾನ ಸಭೆಯಿಂದ ಕೇವಲ ಕೂಗಳತೆಯಲ್ಲೇ ಇದ್ದರೂ ಸರ್ಕಾರದ ಕಡತ ಹೈಕೋರ್ಟ್‌ಗೆ ಬರಲು ವಾರಗಳೇ ಉರುಳಿ ಹೋಗುತ್ತವೆ. ಅಂತಹದರಲ್ಲಿ ಧಾರವಾಡ, ಗುಲ್ಬರ್ಗಾದಲ್ಲಿರುವ ಬಡಪಕ್ಷಿದಾರರಿಗೆ ಶೀಘ್ರವಾಗಿ ನ್ಯಾಯ ದೊರೆಯಲು ಸಾಧ್ಯವಿಲ್ಲ ಎಂದು ಕೋ. ಚೆಯವರು ಅಭಿಪ್ರಾಯ.

ಇನ್ನು ಈ ಪೀಠಗಳನ್ನು ಸ್ಥಾಪಿಸುವುದರಿಂದ ಉಂಟಾಗುವ ಸಮಸ್ಯೆಗಳೆಂದರೆ ಈ ವರೆಗೆ ಬೆಂಗಳೂರಿನ ಹೈಕೋರ್ಟ್‌ಗಳಲ್ಲಿರುವ ಕಡತಗಳು ಈಗ ಧಾರವಾಡ ಮತ್ತು ಗುಲ್ಬರ್ಗಾ ಸಂಚಾರಿ ಪೀಠಗಳಿಗೆ ವರ್ಗವಾಗುವುದರಿಂದ ಮತ್ತೇ ಕಕ್ಷಿದಾರರು ಒಬ್ಬ ವಕೀಲರನ್ನು ನೇಮಿಸಿಕೊಳ್ಳಬೇಕು ಅಥವಾ ಹೈಕೋರ್ಟಿನಲ್ಲಿ ವಾದಿಸಿದ ವಕೀಲರನ್ನು ಕರೆತಂದು ತಮ್ಮ ಕೇಸು ಮುನ್ನಡೆಸುವಂತಾದರೂ ವಕೀಲರು ಬಂದು ಹೋಗುವ ಖರ್ಚು, ವೆಚ್ಚ ಮತ್ತೆ ಬಡ ಕಕ್ಷಿದಾರರ ಮೇಲೆ ಬೀಳುತ್ತದೆ. ಅಲ್ಲದೇ ಹೈಕೋರ್ಟಿನಿಂದ ಕಡತಗಳು ಸಂಚಾರಿ ಪೀಠಗಳಿಗೆ ವರ್ಗಾಯಿಸುವುದು ಬಹುದಿನಗಳಾಗುವುದರಿಂದ ಶೀಘ್ರನ್ಯಾಯ ನಿರ್ಣಯಿಸುವುದು ಕಷ್ಟ ಈ ಸಮಸ್ಯೆ ಈ ಸದ್ಯವಿದ್ದರೂ ಮುಂದೆ ಬಗೆಹರಿಯಬಹುದಾದರೂ ಹೈಕೋರ್ಟ್ ಇರುವ ಕಡೆ ವಿಧಾನ ಸಭೆ ಇದ್ದರೆ ಮಾತ್ರ ಶೀಘ್ರ ನ್ಯಾಯ ನಿರ್ಣಯಕ್ಕೆ ಅನುಕೂಲವಾಗುತ್ತದೆ. ಆದರೆ ಒಂದು ರಾಜ್ಯವನ್ನು ೩ ಭಾಗ ಮಾಡಿದರೆ ಅದು ಏಕೀಕರಣ ಕರ್ನಾಟಕ ಅಂತ ಆಗುವುದಿಲ್ಲ. ಮತ್ತೆ ಭಾಷಾವಾರು ಅಲ್ಪಸಂಖ್ಯಾತರಾಗಿ ಅದು ಕನ್ನಡ ಭಾಷೆಯ ಉಳಿವಿಗೆ ಕಷ್ಟವಾಗಬಹುದು. ಹಾಗಾಗಿ 'ಲಾ ಕಮಿಷನ್' ರೂಪಿಸಿದಂತೆ ಒಂದು ರಾಜ್ಯ-ಒಂದು ಹೈಕೋರ್ಟ್ ಎಂಬ ಅಭಿಪ್ರಾಯ ರೂಪಿಸಿಕೊಳ್ಳುವುದು ಉತ್ತಮ ಎಂದು ಕೋ. ಚೆವರು ಅಭಿಪ್ರಾಯ ಪಟ್ಟಿದ್ದಾರೆ.

### ೬.೫ ಸಾಹಿತಿಯಾಗಿ ಕೋ. ಚೆನ್ನಬಸಪ್ಪ

ಕೋ. ಚೆಯವರು ಕರ್ನಾಟಕದ ಅನೇಕ ಸಾಹಿತಿಗಳಲ್ಲಿ ಒಬ್ಬರಾಗಿದ್ದವರು. ಇವರ ಬರವಣಿಗೆ ಪ್ರಗತಿಶೀಲವಾಗಿದ್ದು ಅಷ್ಟೆ ತೀಕ್ಷ್ಣ ಮತ್ತು ನಿಷ್ಠುರತೆಯಿಂದ ಕೂಡಿದೆ. ಇನ್ನೊಂದು ಮುಖ್ಯ ಅಂಶವೇನೆಂದರೆ ಇವರ ಬಹುತೇಕ ಎಲ್ಲಾ ಸಾಹಿತ್ಯ ಕೃತಿಗಳಲ್ಲಿ ವಸ್ತು ನಿಷ್ಠತೆಯ ಜೊತೆಗೆ ವಾಸ್ತವಿಕ ಜನ ಜೀವನದ ಚಿತ್ರಣವಿದೆ.

ಕೋ. ಚೆಯವರು ಒಬ್ಬ ಪ್ರಗತಿ ಶೀಲ ಬರಹಗಾರರಾಗಿ ಕವನ, ಕಥೆ, ಕಾದಂಬರಿಗಳು,

ಜೀವನ ಚರಿತ್ರೆಗಳು, ವಿಮರ್ಶೆಗಳು, ನಾಟಕಗಳು, ಪ್ರಬಂಧಗಳು, ಕನ್ನಡ ಅನುವಾದಗಳು, ಸಂಪಾದಿತ ಕೃತಿಗಳು ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದಂತೆ ಸಾಹಿತ್ಯ ಕೃಷಿಗೈದಿದ್ದಾರೆ. (ಅನುಬಂಧದಲ್ಲಿ ನೀಡಲಾಗಿದೆ.)

**ಕೋ. ಚೆ ಸಾಹಿತ್ಯ ಕ್ಷೇತ್ರಕ್ಕೆ ಕಾಲಿರಿಸಿದ್ದು ಹೇಗೆ?**

ಕೋ. ಚೆನ್ನಬಸಪ್ಪನವರು ಅನಂತಪುರ ಡಿ.ಸಿ. ಕಾಲೇಜಿನಲ್ಲಿದ್ದಾಗ ತಮ್ಮ ಸಾಹಿತ್ಯದ ರಚನೆಗೆ ತೊಡಗಿದರು. ಆರಂಭದಲ್ಲಿ ಸಣ್ಣ ಕವನಗಳನ್ನು ಮತ್ತು ವಿಮರ್ಶಾ ಲೇಖನಗಳನ್ನು ಬರೆಯುತ್ತಿದ್ದರು. ಅವುಗಳನ್ನು ಮೊದಲು ಗೆಳೆಯ ಶಿವಲಿಂಗಪ್ಪನಿಗೆ ತೋರಿಸಿ, ಅವರೇನಾದರು ಚೆನ್ನಾಗಿದೆ ಎಂದು ಹೇಳಿದರೆ ಅವುಗಳನ್ನು ಕರ್ಮವೀರ ಮತ್ತು ಶರಣ ಸಂದೇಶಕ್ಕೆ ಕಳಿಸಿಕೊಡುತ್ತಿದ್ದರು. ತಮ್ಮ ಸಾಹಿತ್ಯಗಳನ್ನು ಕನ್ನಡ ಪಂಡಿತರಾದ ದಿ. 'ಪಾಣ್ಯಂ ಸುಂದಂಶಾಸ್ತ್ರಿ' ಎಂಬುವವರಿಗೆ ತೋರಿಸಿದಾಗ ಅವರು ಕೋ. ಚೆಯವರ ಸಾಹಿತ್ಯಗಳನ್ನು ಅಲ್ಲಗಳೆದು ಮನ ನೋಯಿಸಿದರು. ಅಂದಿನಿಂದ ಕೋ. ಚೆ ಸುಮಾರು ಎರಡು ವರ್ಷಗಳ ಕಾಲ ಸಾಹಿತ್ಯ ರಚನೆಯನ್ನು ಮಾಡಲಿಲ್ಲ. ಆದರೆ ಸಾಹಿತ್ಯದ ಸೃಷ್ಟಿಯನ್ನು ಕೈ ಬಿಟ್ಟಿದ್ದ ಕೋ. ಚೆಯವರಿಗೆ ಜಿ.ಪಿ. ರಾಜರತ್ನಂ ರಚಿಸಿದ 'ಹತ್ತುವರುಷ' ಎಂಬ ಪುಸ್ತಕವು ಕೋ. ಚೆಯವರ ಸಾಹಿತ್ಯ ರಚನೆಗೆ ಮರುಜೀವ ನೀಡಿತು. ಕೋ. ಚೆಯವರಿಗೆ "ಬರಹಗಾರನಿಗೆ ಪ್ರಾಚೀನ ಆರ್ವಾಚೀನ ಕಾವ್ಯಾಭ್ಯಾಸ ಅತ್ಯಗತ್ಯವಾಗಿ ಬೇಕೆ ಬೇಕು ಎಂಬುದಾಗಿ" ಅರಿತು ಹರಿಶ್ಚಂದ್ರ ಕಾವ್ಯ ಸಂಗ್ರಹ, ರನ್ನನ ಗದಾಯುದ್ಧ ಮುಂತಾದ ಸಾಹಿತ್ಯ ಕೃತಿಯನ್ನು ಅಭ್ಯಾಸಿಸಿದರು. ಕೋ. ಚೆ. ಬಿ.ಎ. ಸೀನಿಯರ್ ಕ್ಲಾಸಿನಲ್ಲಿದ್ದಾಗ 'ಹರಿಶ್ಚಂದ್ರ ಕಾವ್ಯವನ್ನು ಕುರಿತು' ಒಂದು ಸಣ್ಣ ವಿಮರ್ಶಾಗ್ರಂಥ ಬರೆದರು. ಆದರೆ ಓದಲು ತೆಗೆದುಕೊಂಡ ಸ್ನೇಹಿತರು ಅದನ್ನು ಕಳೆದು ಹಾಕಿದರು.

ಕೋ. ಚೆಯವರ ಮೇಲೆ ಪರಿಣಾಮಕಾರಿಯಾಗಿ ಪ್ರಭಾವ ಬೀರಿದ ಕವಿ ರಾಘವಾಂಕ. ಏಕೆಂದರೆ ಅವನ ಸಾಹಿತ್ಯದ ರಚನೆ ಜನ ಬದುಕಲಿ ಎಂದು ಬರೆದಿದ್ದು, ತರುವಾಯ ರನ್ನ, ಪಂಪ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ, ಬಸಪ್ಪಶಾಸ್ತ್ರಿ, ಮುದ್ದಣ್ಣ ಮುಂತಾದ ಕವಿಗಳ ಸಾಹಿತ್ಯವು ಕೋ. ಚೆಯವರ ಮೇಲೆ ಪ್ರಭಾವವನ್ನುಂಟುಮಾಡಿದವು.

ಈ ಮಧ್ಯೆ ೧೯೪೨ರ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿ ಸೆರೆಮನೆಗೆ ಸೇರಿದಾಗ ಕೋ. ಚೆ ಸ್ವಾಮಿ ವಿವೇಕಾನಂದರ ಪತ್ರಗಳನ್ನು ಕನ್ನಡಕ್ಕೆ ಅನುವಾದಿಸಿದರು. ಅದನ್ನು ೧೯೪೪ರಲ್ಲಿ 'ಎಸ್.ಎಸ್.ಎನ್. ಬುಕ್ ಡಿಪೋ' ಅವರು ಪ್ರಕಟಿಸಿದರು. ಇದು ಕೋ. ಚೆಯವರ ಪ್ರಪ್ರಥಮ ಪ್ರಕಟಿತ ಪುಸ್ತಕ.

ಇನ್ನು ಬೆಳಗಾವಿಯಲ್ಲಿ ಕಾನೂನು ಪದವಿ ಕಲಿಯಲು ಹೋದಾಗ ಅಲ್ಲಿ ಪಾಟೀಲ ಪುಟ್ಟಪ್ಪನವರ ಪರಿಚಯವಾಯಿತು. ಅಲ್ಲಿ ಕಿರಿಯರ ಬಳಗದಿಂದ ಒಂದು ಕಥಾ-ಸಂಕಲನವನ್ನು ಪ್ರಕಟಿಸಲು ನಿಶ್ಚಯಿಸಿದರು. ಅದರಲ್ಲಿ ಗೆಳೆಯ ಪಾಟೀಲ ಪುಟ್ಟಪ್ಪನವರದೂ ಒಂದು ಕಥೆ ಪ್ರಕಟವಾಗುವುದಿತ್ತು. ಒಂದು ದಿನ ಪಾಟೀಲ ಪುಟ್ಟಪ್ಪನವರು "ನೀವು ಒಂದು ಕಥೆ ಬರೆಯಬೇಕು" ಎಂದು ಸಲಹೆ ಮಾಡಿದರು! ಆದರೆ ಕೋ. ಚೆಯವರು ಎಂದು ಕಥೆ

ಬರೆದವರಲ್ಲ ಅವರದು ಏನಿದ್ದರೂ ಕವನ ರಚನೆಯ ರೂಢಿ ಇತ್ತು. ಅದಕ್ಕೆ ಅವರು ಪಾಟೀಲ ಪುಟ್ಟಪ್ಪನವರ ಸಲಹೆಯನ್ನು ಒಪ್ಪಿಕೊಳ್ಳಲಿಲ್ಲ. ಆದರೆ ಪುಟ್ಟಪ್ಪನವರು ನೀವು ಪ್ರಯತ್ನಿಸಿ ನೋಡಿ ಎಂದು ಧೈರ್ಯ ತುಂಬಿದರು ಅವರ ಬಲವಂತಕ್ಕೆ ಕೋ. ಚೆಯವರು 'ಯಾರಿಗಾಗಿ' ಎಂಬ ಶಿರೋನಾಮದಲ್ಲಿ ಪ್ರಪ್ರಥಮ ಕಥೆ ಬರೆದರು. ಆದರೆ ಅದು 'ಕಿರಿಯರ ಬಳಗ' ಪ್ರಕಟಿಸಿದ ಕಥಾ ಸಂಕಲನದಲ್ಲಿ ಪ್ರಕಟವಾಗಲಿಲ್ಲ. ಆದರೆ 'ಯಾರಿಗಾಗಿ' ಕಥೆ ಪುಟ್ಟಪ್ಪನವರಿಂದ ಪ್ರಶಂಸೆಗೆ ಒಳಗಾಯಿತು. ಅಂದಿನಿಂದ ಕೋ. ಚೆಯವರಿಗೆ ಸುಮಾರು ೫೦ಕ್ಕಿಂತ ಹೆಚ್ಚು ಕಥೆಗಳನ್ನು ಸೃಷ್ಟಿಸಿದರು. ತಮ್ಮ ಗದ್ಯ ಶೈಲಿಯ ರಚನೆಯನ್ನು ರೂಢಿಸಿಕೊಂಡು ಕಾದಂಬರಿಗಳನ್ನು ಬರೆಯತೊಡಗಿದರು ಅಂದು ಹೀಗೆ ಕೋ. ಚೆಯವರು ಸಾಹಿತ್ಯ ರಚನೆಗೆ ಕಾಲಿರಿಸಿದರು.

**ಕವನ ರಚನಾಕಾರನಾಗಿ ಕೋ. ಚೆ**

ಕೋ. ಚೆಯವರು ಇದುವರೆಗೂ ೪ ಕವನ ಸಂಕಲನಗಳನ್ನು ಪ್ರಕಟಿಸಿದ್ದಾರೆ. ಅವುಗಳಲ್ಲಿ 'ಸ್ವಾತಂತ್ರ್ಯ ಮಹೋತ್ಸವ', 'ಪ್ರಾಣಿ ಪಕ್ಷಿ', 'ಜೀವ ತೀರ್ಥ', 'ಹೃದಯ ನೈವೇದ್ಯ' ಎಂಬ ತಲೆ ಬರಹದಲ್ಲಿ ಮುದ್ರಣಗೊಂಡಿವೆ.

ಕೋ. ಚೆಯವರು ರಚಿಸಿದ ಹೃದಯ ನೈವೇದ್ಯದಲ್ಲಿ ಬರುವ ಕವನಗಳಲ್ಲಿ ಕೆಲವು ವಾಸ್ತವಿಕ ಅಂಶಗಳು ಸೇರಿಕೊಂಡಿವೆ. ಉದಾಹರಣೆಗೆ 'ಮರಣದಂಡನೆ ಪೆನ್ನಿನ ಹೊಣೆ' ಎಂಬುವ ಕವನದಲ್ಲಿ ಕೋ. ಚೆಯವರು ಒಬ್ಬ ಕೊಲೆಗಾರನಿಗೆ ಮರಣದಂಡನೆಯ ಶಿಕ್ಷೆಯನ್ನು ನೀಡುತ್ತಾರೆ. ಅದೇ ರೀತಿ ತಮ್ಮ ನ್ಯಾಯಾಧೀಶನ ಅವಧಿಯಲ್ಲೂ ಒಬ್ಬನಿಗೆ ಮರಣದಂಡನೆ ಶಿಕ್ಷೆ ನೀಡಿದ್ದರು. ಆದರೆ ಅದು ಸರ್ವೋಚ್ಚ ನ್ಯಾಯಾಲಯ ಜೀವಾವಧಿ ಶಿಕ್ಷೆಗೆ ಇಳಿಸಿತು. ಅದೇನೆ ಇದ್ದರು ಇಲ್ಲಿ ಕೋ. ಚೆಯವರ ಜೀವನದ ಕೆಲವು ಅಂಶಗಳು ಈ ಕವನ ಸಂಕಲನದಲ್ಲಿ ಸೇರಿಕೊಂಡಿವೆ. ಹಾಗೆ ಒಂದು ಅನುವಾದಿತ ಕವನವು ಅದರಲ್ಲಿ ಸೇರಿದೆ. ಜೊತೆಗೆ ಕೋ. ಚೆಯವರ ಮೇಲೆ ಪ್ರಭಾವ ಬೀರಿದ ಅರವಿಂದರ ಮೇಲೆ 'ಅರವಿಂದರ ಜನನ' ಎಂಬ ಕವನ ಸಂಕಲನವು ಇದೆ. ಹೀಗೆ ವಿವಿಧ ವಸ್ತುಗಳನ್ನು ಆಯ್ದುಕೊಂಡು ವಿಭಿನ್ನವಾಗಿ ರಚಿಸಿದ್ದಾರೆ ಎಂದು ಹೇಳಬಹುದು.

**ಕಥಾ ರಚನೆಕಾರನಾಗಿ ಕೋ. ಚೆ**

ಕೋ. ಚೆಯವರು ಈವರೆಗೆ ೭೦ಕ್ಕಿಂತ ಹೆಚ್ಚು ಕಥೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ದಾಸರಯ್ಯನ ಪಟ್ಟ', 'ಮುಕ್ಕಣ್ಣನ ಮುಕ್ತಿ' ಎಂಬ ಕಥೆಗಳಲ್ಲಿ ಶೋಷಣೆಗೆ ಒಳಗಾದವರ ಚಿತ್ರಣ, ಅವರ ಪ್ರತಿಭಟನೆಗಳನ್ನು ಚಿತ್ರಿಸಿದ್ದಾರೆ. 'ನಮ್ಮೂರ ದೀಪ' ಎಂಬ ಕಥೆಯಲ್ಲಿ ನಿರಪರಾಧಿ ಬಡ ಹುಡುಗ ಸಂಗಯ್ಯ, ಸಾಹುಕಾರರ ಸಂಶಯ ದೃಷ್ಟಿಯಿಂದ ಉರುಳಿಗೆ ಸಿಲುಕಿ ಸಾವನ್ನಪ್ಪಿಕೊಂಡ ಘೋರ ಸನ್ನಿವೇಶದ ಚಿತ್ರಣವಿದೆ.

'ಒಬ್ಬನೇ ಮಗ' ಎಂಬ ಕಥೆಯಲ್ಲಿ ಬೆವರು ಸುರಿಸಿ ದುಡಿದ ಶ್ರಮ ಜೀವಿಯೊಡನೆ ಸಾಹುಕಾರರು ಅಮಾನುಷ ರೀತಿಯಲ್ಲಿ ನಡೆದುಕೊಂಡು ಅವನನ್ನು ದೇಶಾಂತರ ಹೊರಡಿಸಿದ

ಕಥೆ ಇದೆ. ಕೋ. ಚೆಯವರ ಕಥೆಗಳಲ್ಲಿ ಹೆಚ್ಚಾಗಿ ಶೋಷಿತರ ಬಗ್ಗೆ ಚಿತ್ರಿಸಿರುವುದು ಕಂಡುಬರುವುದು. ಅವರು ಅದರಲ್ಲಿ ಬಳಸಿರುವ ಸಾಮಾಜಿಕ ಪ್ರಜ್ಞೆಯಿಂದ ಗೊತ್ತಾಗುತ್ತದೆ.

ಕೋ. ಚೆಯವರ ಕಥೆಗಳಲ್ಲಿ 'ನ್ಯಾಯಾಲಯದ ಸತ್ಯಕಥೆಗಳು' ಕನ್ನಡ ಸಾಹಿತ್ಯಕ್ಕೆ ಒಂದು ವಿಶಿಷ್ಠ ಕೊಡುಗೆ ಎಂದು ಹಾ.ಮಾ. ನಾಯಕರು ಅಭಿಪ್ರಾಯ ಪಡುತ್ತಾರೆ. ಈ ನ್ಯಾಯಾಲಯದ ಸತ್ಯಕಥೆಗಳನ್ನು ಕೋ. ಚೆ ನ್ಯಾಯವಾದಿಯಾಗಿ ಮತ್ತು ನ್ಯಾಯಾಧೀಶರಾಗಿದ್ದ ಸಂದರ್ಭಗಳನ್ನು ಸಾಹಿತ್ಯದ ಲೇಪನ ಹಚ್ಚುವ ಮೂಲಕ ವಾಸ್ತವಿಕ ಮತ್ತು ನೈಜ ಕಥೆಗಳನ್ನು ಸೃಷ್ಟಿಸಿದ್ದಾರೆ. ಇದು ಕನ್ನಡದಲ್ಲಿ ಈ ರೀತಿಯ ಸಾಹಿತ್ಯ ಸೃಷ್ಟಿಯನ್ನು ಮೊದಲು ಬಳಕೆಗೆ ತಂದವರೇ ಕೋ. ಚೆನ್ನಬಸಪ್ಪನವರು.

**ಕಾದಂಬರಿಕಾರರಾಗಿ ಕೋ. ಚೆ**

ಕೋ. ಚೆಯವರು ಇದುವರೆಗೆ ೮ ಕಾದಂಬರಿಗಳನ್ನು ರಚಿಸಿದ್ದಾರೆ. ಇವರ ಕಾದಂಬರಿ ರಚನೆ ಆರಂಭಿಸಿದ್ದು, ೧೯೫೮ರಿಂದ. ಇವರ ಮೊದಲ ಕಾದಂಬರಿ 'ಹಿಂದಿರುಗಿ ಬರಲಿಲ್ಲ'. ಈ ಕಾದಂಬರಿಯು ಕನ್ನಡದ ರಾಜಕೀಯ ಕಾದಂಬರಿಗಳಲ್ಲಿ ಅಗ್ರಸ್ಥಾನದಲ್ಲಿರುವ ಕೆಲವೇ ಕಾದಂಬರಿಗಳಲ್ಲಿ ಇದು ಒಂದು. ಇದರಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಯುವಕನೊಬ್ಬ ಸ್ವಾತಂತ್ರ್ಯ ನಂತರವೂ ಹೋರಾಟಕ್ಕೆ ಇಳಿಯುತ್ತಾನೆ. ಅವನನ್ನು ಪೊಲೀಸರು ಬಂಧಿಸಿ ಕರೆದುಕೊಂಡು ಹೋಗುತ್ತಾರೆ. ಆದರೆ, ಅವನು ಮಾತ್ರ 'ಹಿಂದಿರುಗುವುದಿಲ್ಲ' ಇದು ಒಂದು ವಿಶಿಷ್ಟ ಕಾದಂಬರಿಯಾಗಿದೆ. ಏಕೆಂದರೆ ೧೯೭೫-೭೭ರ ತುರ್ತು ಪರಿಸ್ಥಿತಿಯ ಸಂದರ್ಭದಲ್ಲಿ ಸರ್ಕಾರವು ಅನೇಕರನ್ನು ಕೈದಿಗಳನ್ನಾಗಿ ಬಂಧಿಸಿ ಜೈಲಿಗೆ ತಳ್ಳಿತ್ತು. ಅದರಲ್ಲಿ ಅನೇಕರು ಹಿಂದಿರುಗಲಿಲ್ಲ ಎಂಬುದನ್ನು ನೆನಸಿಕೊಂಡಾಗ ಕೋ. ಚೆ ೧೯೫೮ರಲ್ಲೇ ತುರ್ತುಪರಿಸ್ಥಿತಿಯ ಸ್ಥಿತಿಗತಿಗಳನ್ನು ಕುರಿತು ಬರೆದಂತೆ ಕಾಣುತ್ತದೆ.

ಇನ್ನು 'ಬೆಳಕು ಹರಿಯಿತು' ಕಾದಂಬರಿಯಲ್ಲಿಯೂ ಇಂತಹ ಸನ್ನಿವೇಶವೇ ಇದ್ದು ಇದು ೧೯೭೮ರಲ್ಲಿ ಪ್ರಕಟವಾಗಿತ್ತು. ಈ ಕಾದಂಬರಿಯಲ್ಲಿ ತಾಯಿ ಮಗನನ್ನು ಕಳೆದುಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದು, ಒಂದು ಪ್ರೇತಾತ್ಮವಾಗಿ ರಾತ್ರಿ ಚೀರುತ್ತಾ 'ನನ್ನ ಮಗನನ್ನು ಕೊಂದವಳ ಮಗನಿಗೂ ಹೀಗೆ ಆಗಲಿ' ಎಂದು ಶಪಿಸಿದ್ದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ಇಂದು ನಿಜ ಜೀವನದಲ್ಲಿ ಇಂದಿರಾನ ಮಗ ಸಂಜಯ ಗಾಂಧಿ ಸತ್ತಿದಕ್ಕೆ ಕೆಲವು ಸಾಹಿತಿಗಳು ಹೋಲಿಸಿರುವುದು ಉಂಟು.

"ರಕ್ತ ತರ್ಪಣ" ಎಂಬ ಕಾದಂಬರಿ ೧೯೬೯ರಲ್ಲಿ ಪ್ರಕಟವಾಗಿದ್ದು ಇದರಲ್ಲಿ ಸ್ವಾತಂತ್ರ್ಯ ಚಳವಳಿಯ ಚಿತ್ರಣ ದೊರೆಯುತ್ತದೆ. ಸ್ವಾತಂತ್ರ್ಯ ಚಳವಳಿಯ ಸಂದರ್ಭದಲ್ಲಿ ಒಂದು ಸೈನ್ಯ ಕಟ್ಟಿ ಅದನ್ನು ಮುನ್ನೆಡೆಸಿದ ಸುಭಾಶ್ಚಂದ್ರಭೋಸರ ಚಿತ್ರಣ ದೊರೆಯುತ್ತದೆ.

ಹೀಗೆ ಇವರ ಕಾದಂಬರಿಯಲ್ಲಿ ಬಳ್ಳಾರಿ ಜಿಲ್ಲೆಯ ಪರಿಸರ ಸ್ವಾತಂತ್ರ್ಯ ಹೋರಾಟದ ವಸ್ತು, ರಾಜಕೀಯ ಚಿಂತನೆಗಳು, ಮುಂತಾದ ಗಮನಾರ್ಹ ವಿಚಾರಗಳನ್ನು ಇಟ್ಟುಕೊಂಡು ಕಾದಂಬರಿಗಳನ್ನು ರಚಿಸಿದ್ದಾರೆ.

**ಅನುವಾದಕರಾಗಿ ಕೋ. ಚೆ**

ಕೋ. ಚೆಯವರು ಕನ್ನಡದಲ್ಲಿಲ್ಲದ ಅನ್ಯ ಭಾಷೆಗಳ ಉತ್ತಮ ಗ್ರಂಥಗಳನ್ನು ಕನ್ನಡ ನಾಡಿಗೆ ತಂದು ಕನ್ನಡಿಗರಿಗೆ ಅಮೂಲ್ಯ ಕೃತಿಗಳನ್ನು ಅನುವಾದಿಸಿಕೊಟ್ಟಿದ್ದಾರೆ. ಇದುವರೆಗೆ ೧೬ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದು, ಅವರೊಬ್ಬ ಉತ್ತಮ ಅನುವಾದಕರು ಎಂದು ಗುರುತಿಸಿಕೊಂಡಿದ್ದಾರೆ. ಅವರು ಅನುವಾದಿಸಿದ ಕೃತಿಗಳೆಂದರೆ 'ದಿವ್ಯ ಜೀವನ' (ಶ್ರೀ ಅರವಿಂದರ ಲೈಫ್ ಡಿವೈನ್ ಗ್ರಂಥದ ಭಾಷಾಂತರ) 'ಸಾವಿತ್ರಿ' (ಶ್ರೀ ಅರವಿಂದರ ಮಹಾಕಾವ್ಯದ ಕನ್ನಡಾನುವಾದ), 'ಕೃತಿಸಾರ ಸಂಗ್ರಹ' (ವಿವೇಕಾನಂದರ ಸಮಗ್ರ ಕೃತಿಯ ಸಂಗ್ರಹಾನುವಾದ) 'ಸಾವಿತ್ರಿ–ಮಹಾಕಾವ್ಯ ಪರಿಚಯ ಪ್ರಬಂಧ ಸಂಕಲನ', ಸ್ವಾಮೀಜಿಯ ಪತ್ರಗಳು' (ವಿವೇಕಾನಂದರ ಪತ್ರಗಳ ಕನ್ನಡ ಅನುವಾದ ೧೯೪೨ರಲ್ಲಿ ಇದು ೧೯೪೭ರಲ್ಲಿ ಪ್ರಕಟಗೊಂಡಿತ್ತು. ಇದು ಕೋ. ಚೆಯವರ ಪ್ರಥಮ ಪ್ರಕಟಣೆ ಪುಸ್ತಕ), 'ಕಡಲತಡಿಯಿಂದ ಹೈಮಾಚಲವೆಡೆಗೆ', 'ಸ್ವಾಮೀಜಿಯ ಸಿಂಹಾಮಣಿ', 'ಶ್ರೀ ರಾಮಕೃಷ್ಣರ ದೃಷ್ಟಾಂತ', 'ಹಿಂದೂ ಧರ್ಮ' (ಮೂಲ: ಡಾ. ರಾಧಾಕೃಷ್ಣನ್) 'ಸಂಸಾರ ಯೋಗ', (ಶ್ರೀ ರಾಮಕೃಷ್ಣರು ಗೃಹಸ್ಥರಿಗಾಗಿ ಮಾಡಿದ ಉಪದೇಶ), 'ಆದರ್ಶನಾಗರಿಕ', (ಮೂಲ: ಸ್ವಾಮಿ ರಂಗನಾಥಾನಂದಜೀ), 'ಜಗಜ್ಜನನಿ ಭಾರತಿ', 'ಅಶೋಕನ ಶಿಲಾ ಶಾಸನಗಳು', 'ಭಾರತೀಯ ಘಟನೆ', (ಪ್ರಶ್ನೋತ್ತರ ರೂಪದಲ್ಲಿ), 'ಆಂಧ್ರ ಕಥಾ ಮಂಜೂಷ', 'ಧರ್ಮವರಂ ರಾಮಕೃಷ್ಣಮಾಚಾರ್ಯ' ಇವುಗಳೆಲ್ಲವನ್ನು ಕನ್ನಡಕ್ಕೆ ಅನುವಾದಿಸಿ ಕನ್ನಡ ಪುಸ್ತಕ ಭಂಡಾರವನ್ನು ಹೆಚ್ಚಿಸಿದ್ದಾರೆ.

ಇವರು ಅನುವಾದಿಸಿದ ಅರವಿಂದರ 'ಡಿವೈನ್ ಲೈಫ್' ಕೃತಿಯನ್ನು ಅನುವಾದಿಸುವುದು ಬಹು ಕಷ್ಟದ ಕೆಲಸ. ಇದನ್ನು ಮೊದಲು 'ದ. ರಾ. ಬೇಂದ್ರೆ ಅವರು ಅನುವಾದ ಮಾಡಲು ಪ್ರಯತ್ನಿಸಿದ್ದರು', ಆದರೆ ಬೇಂದ್ರೆಯವರು ಕೆಲವು ಭಾಗವನ್ನು ಅನುವಾದ ಮಾಡಿ, ಆಮೇಲೆ ಸಾಧ್ಯವಿಲ್ಲವೆಂದು ಕೈಬಿಟ್ಟರು. ಅಂತಹ ಕಷ್ಟಕರವಾದ ಕೃತಿಯನ್ನು ಕೋ. ಚೆಯವರು ಅನುವಾದಿಸಿದ್ದು, ಸಾಹಿತಿಗಳ ಲೋಕದಲ್ಲಿ ತುಂಬಾ ದೊಡ್ಡ ಹೆಸರನ್ನು ಗಳಿಸುವಂತೆ ಮಾಡಿದೆ.

**'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಸಮೀಕ್ಷಕರಾಗಿ**

'ಶ್ರೀ ರಾಮಾಯಣ ದರ್ಶನಂ' ಕೃತಿ ಪ್ರಕಟವಾದ ನಂತರ ಅದನ್ನು ಕುರಿತು ಕೆಲವು ವ್ಯಾಖ್ಯಾನ, ವಿಮರ್ಶೆಗಳು ಹೊರಬಂದಿವೆ. ಅಂತಹ ಸಮೀಕ್ಷೆಗಳಲ್ಲಿ ಕೋ. ಚೆಯವರ 'ಶ್ರೀ ರಾಮಾಯಣ ದರ್ಶನಂ' ಮಹಾಕಾವ್ಯದ ಸಮೀಕ್ಷೆ ಗುಣ–ಪ್ರಮಾಣಗಳೆರಡರಲ್ಲಿಯೂ ಹಿರಿದಾದದ್ದು. ಈ ಕಾರ್ಯದಲ್ಲಿ ಅವರಂತೆ ಯೋಗ್ಯತೆ ಪಡೆದವರು ವಿರಳ. ಶ್ರೀ ರಾಮಾಯಣ ದರ್ಶನಂ ದಲ್ಲಿ, ಶ್ರೀ ಅರವಿಂದ ದರ್ಶನ ಹೇಗೆ ಅರಳು ಅರಳಾಗಿ ಮುಷ್ಟಿಗ್ರಾಹ್ಯವಾಗಿ ಹೊರಹೊಮ್ಮಿದೆ ಎನ್ನುವುದನ್ನು ಕೋ. ಚೆಯವರು ಹೆಜ್ಜೆ ಹೆಜ್ಜೆಗೂ ತೋರಿಸಿಕೊಟ್ಟಿದ್ದಾರೆ. ಇಲ್ಲಿ ಬರುವ ತಾತ್ವಿಕ ಹಿನ್ನಲೆಯನ್ನು ಚರ್ಚಿಸುವುದಲ್ಲದೆ, ರಾಮಚರಿತ್ರೆಯಲ್ಲಿ ಪ್ರಮುಖಪಾತ್ರ ವಹಿಸಿದ್ದಾರೆ. ರಾಮಾಯಣವು 'ಪುರಾತ್ಪರನ ಪುರುಷೋತ್ತಮನ ಲೋಕಲೀಲಾ ದರ್ಶನವನ್ನು ಪ್ರತಿಬಿಂಬಿಸುವ ಅಲೌಕಿಕ ನಿತ್ಯ ಸತ್ಯದ ಕಥೆ' ಎಂದು ಹೇಳಿದ್ದಾರೆ. ರಾಮಾಯಣ ದರ್ಶನದ ಕಾವ್ಯ

ಸೌಂದರ್ಯ, ದಾರ್ಶನಿಕ ಸತ್ಯ ಮತ್ತು ಪಾರಮಾರ್ಥಿಕ ಸಾಧನೆ ಇವುಗಳನ್ನು ಅರ್ಥಪೂರ್ಣವಾಗಿ ಪ್ರದರ್ಶಿಸಿದ್ದಾರೆ. ಇದು ಕನ್ನಡ ತಾತ್ವಿಕ ಮತ್ತು ವಿಮರ್ಶಾ ಸಾಹಿತ್ಯಕ್ಕೆ ಇದೊಂದು ಉತ್ತಮ ಸಮೀಕ್ಷೆಯ ಕೊಡುಗೆಯಾಗಿದೆ ಎಂದು ಹೇಳಬಹುದು.

**ಕೋ. ಚೆಯವರಿಗೆ ಬಂದ ಪ್ರಶಸ್ತಿಗಳು**

ಕೋ. ಚೆಯವರ ಸಾಹಿತ್ಯ ಕೃಷಿಗೆ ಅನೇಕ ಪ್ರಶಸ್ತಿಗಳು ಬಂದಿವೆ. ಅವುಗಳೆಂದರೆ ೧೯೫೩ರಲ್ಲಿ 'ಖಜಾನೆ' ನವಸಾಕ್ಷರಸ್ಥರಿಗಾಗಿ ಬರೆದ ಪುಸ್ತಕಕ್ಕೆ ಕೇಂದ್ರ ಸರಕಾರದ ಬಹುಮಾನ ದೊರೆತಿದೆ. ೧೯೫೩ರಲ್ಲಿ ಶ್ರೀ ರಾಮಾಯಣಂ ಮಹಾಕಾವ್ಯ ಸಮೀಕ್ಷೆಗೆ ಶ್ರೀ ಕುವೆಂಪು ಟ್ರಸ್ಟ್‌ನಿಂದ ಪುರಸ್ಕಾರ ಲಭಿಸಿದೆ. ೧೯೭೬ರಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ದೊರೆತಿದೆ. ಈ ಪ್ರಶಸ್ತಿಯನ್ನು ಪಡೆದ ಕುವೆಂಪು, ಮಾಸ್ತಿ ವೆಂಕಟೇಶ ಅಯ್ಯಂಗಾರ್ ಜೊತೆ ಪ್ರಶಸ್ತಿಯನ್ನು ಕೋ. ಚೆಯವರು ಪಡೆದದ್ದು ಒಂದು ವಿಶೇಷ. ೧೯೮೧ರಲ್ಲಿ ಪ್ರೊ ಸ.ಸ. ಮಾಳವಡ ದತ್ತಿ ಪ್ರಶಸ್ತಿ ಕರ್ನಾಟಕ ವಿ.ವಿ. ಧಾರವಾಡ ನೀಡಿ ಗೌರವಿಸಿದೆ.೧೯೯೫ರಲ್ಲಿ ರಾಜ್ಯೋತ್ಸವ ಪ್ರಶಸ್ತಿ ಪ್ರಧಾನ ಮಾಡಲಾಗಿದೆ. ೧೯೯೭ರಲ್ಲಿ ಚಿಂತನಶ್ರೀ ಪ್ರಶಸ್ತಿಯನ್ನು ನ್ಯಾಯವಾದಿಗಳ ಸಾಹಿತ್ಯ ವೇದಿಕೆ ನೀಡಿದೆ. ೨೦೦೨ರಲ್ಲಿ ಸಮಾಜಸೇವಾ ಪ್ರಶಸ್ತಿ-ಸಂದೇಶ ಯುವಜನ ವೇದಿಕೆ ನೀಡಿದೆ. ೨೦೦೩ರಲ್ಲಿ ವಿಶ್ವ ಮಾನವ ಪ್ರಶಸ್ತಿ ದೇ. ಜ. ಗೌ ಟ್ರಸ್ಟ್ ನೀಡಿದೆ. ೨೦೦೩ರಲ್ಲಿ ಉಗ್ರಾಣ ಪ್ರಶಸ್ತಿ 'ಬೇಡಿ ಕಳಚಿತು ದೇಶ ಒಡೆಯಿತು' ಕಾದಂಬರಿಗೆ ದೊರೆತಿದೆ. ೨೦೦೫ರಲ್ಲಿ ಪ್ರೊ. ಸ. ಶಿ. ಭೂಸನೂರ ಮಠ ಪ್ರಶಸ್ತಿ ದೊರೆತಿದೆ. ೨೦೦೬ ನವೆಂಬರ್ ೧ರಂದು ಸುವರ್ಣ ಕರ್ನಾಟಕ ಪ್ರಶಸ್ತಿ ನೀಡಲಾಗಿದೆ. ಇವುಗಳ ಜೊತೆಗೆ ಸಂಘ-ಸಂಸ್ಥೆಗಳು ಅನೇಕ ಪ್ರಶಸ್ತಿಗಳನ್ನು ನೀಡಿ ಗೌರವಿಸಿವೆ.

**ಆಕರಗ್ರಂಥಗಳು**


೧. ಕೋ. ಚೆ ಸಾಹಿತ್ಯ ಸಮಾಜ ಧರ್ಮದೃಷ್ಟಿ
೨. ಕೋ. ಚೆಯವರ ನ್ಯಾಯಿಕ ದೃಷ್ಟಿ
೩. ನ್ಯಾಯ ನಿಷ್ಠುರಿ : ನ್ಯಾಯಮೂರ್ತಿ ಕೂ.ಬ. ನಾವದಗಿ (ಅಭಿನಂದನಾ ಗ್ರಂಥದ ಲೇಖನ)
೪. ಎಂಟನೇ ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನ – ೧೯೯೩ ಕೋ. ಚೆಯವರ ಅಧ್ಯಕ್ಷೀಯ ಭಾಷಣ
೫. ಮೂವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನ ಮೈಸೂರು, ಕೋ. ಚೆ ಸ್ವಾಗತ ಸಮಿತಿಯ ಅಧ್ಯಕ್ಷೀಯ ಭಾಷಣ
೬. ಕೋ. ಚೆ ಯಾರು ಏನು ಎಂತು?
೭. ನನ್ನ ಮನಸ್ಸು ನನ್ನ ನಂಬಿಗೆ (ಉತ್ತರಾರ್ಧ)
೮. ನಾನು ಓದಿದ ಶಾಲೆ
೯. ಸಂದರ್ಶನ

## ಅಧ್ಯಾಯ – ೭
## ಸಮಾಜಮುಖಿ ಕಾರ್ಯಗಳಲ್ಲಿ ಕೋ. ಚೆನ್ನಬಸಪ್ಪನವರು

**ಕೋ**.ಚೆಯವರ ಸೇವಾಕ್ಷೇತ್ರ ಬಹು ವಿಶಾಲವಾದದ್ದು. ಅವರ ಶೈಕ್ಷಣಿಕ ಜೀವನವು ವಿವಿಧ ಪ್ರದೇಶಗಳಲ್ಲಿ ನಡೆದಿದ್ದು, ಶಿಕ್ಷಣ ಪಡೆಯುವಲ್ಲಿನ ಸಮಸ್ಯೆಗಳು ಅವರಿಗೆ ಮನದಟ್ಟಾಗಿತ್ತು ಇದರೊಂದಿಗೆ ಅವರ ಸ್ಪಂದಿಸುವ ಹೃದಯ ವಿವಿಧ ಕ್ಷೇತ್ರಗಳಲ್ಲಿ ಕೈಜೋಡಿಸುವಂತೆ ಮಾಡಿತ್ತು. ಅಂತಹ ಹಲವು ಕ್ಷೇತ್ರಗಳಲ್ಲಿ ಒಂದು ಸಮಾಜ ಮುಖಿ ಕಾರ್ಯಗಳನ್ನು ಕೋ.ಚೆಯವರು ಕೈಗೊಂಡಿದ್ದು ಅವರು ಕೈಗೊಂಡಿದ್ದ ಸಮಾಜಮುಖಿ ಕಾರ್ಯಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ವಿದ್ಯಾದಾನಕ್ಕೊಂದು ಕಟ್ಟಡ**

೧೯೩೯-೪೫ರ ವರೆಗೆ ಪ್ರಪಂಚದಲ್ಲಿ ಆರ್ಥಿಕ ಬಿಕ್ಕಟ್ಟಿನ ಪರಿಸ್ಥಿತಿ ನಿರ್ಮಾಣವಾಗಿತ್ತು. ಅದರ ಒಂದು ಒಡೆತನ ಪ್ರತಿಯೊಂದು ಕ್ಷೇತ್ರಕ್ಕೂ ವ್ಯಾಪಿಸಿತ್ತು. ಆಗ 'ಸರ್ಕಾರದ ಆದಾಯದ ಪ್ರತಿಯೊಂದು ಕಾಸು ಯುದ್ಧ ನಿಧಿ' ಯುದ್ಧ ಸರಬರಾಜಿಗಾಗಿ ಮುಡುಪಾಗಿ ಹೋಗಿತ್ತು.[೧] ಆಗ ಸರ್ಕಾರವು ಒಂದು ರಸ್ತೆಯನಾಗಲಿ, ಶಾಲೆಯ ಸ್ಥಾಪನೆಯನಾಗಲಿ, ಕುಡಿಯುವ ನೀರಿನ ವ್ಯವಸ್ಥೆಯನಾಗಲಿ, ಅಥವಾ ಯಾವುದೇ ಲೋಕೋಪಯೋಗಿ ಕಾರ್ಯಗಳನಾಗಲಿ ಕೈಗೊಂಡಿರಲಿಲ್ಲ. ಆದರೂ ಮದ್ರಾಸ್ ಸರ್ಕಾರ ಕಾನಾಮಡುಗಿನ ಶ್ರೀ ಶರಣಬಸವೇಶ್ವರ ಹೈಯರ್ ಎಲಿಮೆಂಟರಿ ಶಾಲೆಯ ಕಟ್ಟಡಕ್ಕಾಗಿ ಒಟ್ಟು ವೆಚ್ಚದ ಅರ್ಧಭಾಗವನ್ನು ಸರ್ಕಾರ ಮಂಜುರು ಮಾಡಿತ್ತು. ಆದರೆ ಆದನ್ನು ಉಪಯೋಗಿಸುವಲ್ಲಿ ಅಂದಿನ ಶಾಲಾ ಮೇನೆಜರ್ ಆಗಿದ್ದ ಗುರಣ್ಣನವರಿಗೆ ಸಾಧ್ಯವಾಲಿಲ್ಲ. ಏಕೆಂದರೆ ಸರ್ಕಾರ ಶಾಲೆಯ ಕಟ್ಟಡಕ್ಕೆ ಅರ್ಧದಷ್ಟು ಹಣ ನೀಡುತ್ತಿತ್ತು. ಆದರೆ ಉಳಿದ ಅರ್ಧದಷ್ಟು ಹಣ ಮ್ಯಾನೇಜ್ ಮೆಂಟ್ ಭರಿಸಬೇಕಾಗಿತ್ತು. ಇದು ಆ ಸಂದರ್ಭದಲ್ಲಿ ಶಾಲೆಯ ಮ್ಯಾನೇಜ್ ಮೆಂಟಿಗೆ ಭರಿಸಲಾರದ ಹಣವಾಗಿತ್ತು.

ಅದಕ್ಕೆ ಇಲ್ಲದ ಸಬೂಬು ಹೇಳಿ ೪ ವರ್ಷಗಳ ಕಾಲ ಸರ್ಕಾರಕ್ಕೆ ಪತ್ರ ಬರೆದು ಕಟ್ಟಡ ನಿರ್ಮಾಣಕ್ಕೆ ನೀಡುವ ಹಣವನ್ನು ಹಿಂದೆ ಪಡೆಯದ ಹಾಗೆ ವಿನಂತಿಸಿಕೊಳ್ಳುತ್ತಿದ್ದರು.

ಒಮ್ಮೆ ಕೋ. ಚೆಯವರ ಮುಂದೆ ಗುರಣ್ಣನವರು ಶಾಲಾ ಕಟ್ಟಡ ವಿಚಾರವನ್ನು ಪ್ರಸ್ತಾಪಿಸಿದಾಗ, ಕೋ. ಚೆಯವರು ಬಳ್ಳಾರಿಯ ಜಿಲ್ಲಾ ಕಲೆಕ್ಟರ್ ಶ್ರೀ. ಈ. ರಾಮರೆಡ್ಡಿಯವರನ್ನು ಭೇಟಿಯಾಗಿ ಕಟ್ಟಡ ನಿಧಿ ಸಂಗ್ರಹದ ವಿಚಾರವಾಗಿ ಪ್ರಸ್ತಾಪಿಸಿದರು. ಆಗ ಶ್ರೀ. ಈ. ರಾಮರೆಡ್ಡಿ "ಮ್ಯಾನೇಜ್‌ಮೆಂಟಿನ ಪಾಲಿನ ಕಟ್ಟಡ ನಿಧಿಯನ್ನು ನೀವು ಧನರೂಪದಲ್ಲಿಯೇ ಸರ್ಕಾರಿ ಖಜಾನೆಯಲ್ಲಿ ಅಥವಾ ಬ್ಯಾಂಕಿನಲ್ಲಿ ಠೇವಣಿ ಇಡಬೇಕಾಗಿಲ್ಲ. ಕಟ್ಟಡಕ್ಕೆ ಬೇಕಾದ ಸಾಮಾಗ್ರಿ ಕಲ್ಲು, ಇಟ್ಟಿಗೆ, ಮರದ ಮುಟ್ಟು, ಕಡಪಾ ಬಂಡೆ ಇತ್ಯಾದಿ ರೂಪದಲ್ಲಿ ಸಂಗ್ರಹಿಸಿ ಇಂತಿಷ್ಟು ಬೆಲೆ ಬಾಳುವ ಸಾಮಾಗ್ರಿ , ಸಿದ್ಧವಿದೆ. ಎಂದು ತೋರಿಸಬಹುದು. ಶಾಲಾ ಕಟ್ಟಡದ ನಿವೇಶನದ ಬೆಲೆಯನ್ನು ನಿಮ್ಮ ವಂತಿಗೆಯಲ್ಲಿ ಕೂಡಿಸಬಹುದು.[೨] ಎಂದು ಸಲಹೆ ನೀಡಿದರು.

### ದಾನವಾಗಿ ಬಂದ ಭೂಮಿ

ಕೋ. ಚೆಯವರು ಜಿಲ್ಲಾ ಕಲೆಕ್ಟರ್ ಶ್ರೀ ಜಿ. ರಾಮರೆಡ್ಡಿಯವರ ಸಲಹೆಯಂತೆ ಕಟ್ಟಡ ಕಟ್ಟಲು ಒಂದು ನಿವೇಶನವನ್ನು ಯಾರಿಂದಲಾದರೂ ದಾನ ಪಡೆಯುವ ಯೋಚನೆ ಮಾಡಿದರು. ಆ ಸಂದರ್ಭದಲ್ಲಿ ಕಾನಾ ಮಡುಗಿನಲ್ಲಿ ದೊಡ್ಡ 'ರೈತ'ರಾಗಿದ್ದ ಬೆನಕಶೆಟ್ಟಿ ಅಯ್ಯಪ್ಪನವರಿಂದ (ಕೋ. ಚೆಯವರ ಸೋದರಮಾವನಿಂದ) ಐದಾರು ಎಕರೆ ಭೂಮಿಯಲ್ಲಿ ದಾನ ಪಡೆಯಲು ಯೋಚಿಸಿದರು. ಈ ಕುರಿತು ಗುರಣ್ಣನವರ ಮುಂದೆ ಪ್ರಸ್ತಾಪಿಸಿದಾಗ, ಗುರಣ್ಣ 'ಇದು ಒಳ್ಳೆ ಯೋಚನೆ' ಒಂದು ಬಾರಿ ನೀನು ಸೂಕ್ಷ್ಮವಾಗಿ ಕೇಳು ಎಂದರು. ಆಗ ಕೋ. ಚೆಯವರು ತಮ್ಮ ಸೋದರ ಮಾವನಲ್ಲಿಗೆ ಬಂದು ನೀವು ಶಾಲಾಭಿವೃದ್ಧಿಗೆ ಎಷ್ಟು ಪ್ರಯತ್ನಿಸಿರುವಿರಿ? ಶಿಕ್ಷಕರ ಸಂಬಳಕ್ಕೆ ನಾಟಕವಾಡಿ ಹಣ ಹೊಂದಿಸಿಕೊಟ್ಟಿದ್ದೀರಿ. ಈಗ ಅಮ್ಮಯ್ಯನ (ಕೋ. ಚೆಯವರ ಅಜ್ಜಿ) ಚೆನ್ನಬಸಮ್ಮ) ಹೆಸರಿನಲ್ಲಿ ಐದಾರು ಎಕರೆ ಶಾಲಾ ಕಟ್ಟಡಕ್ಕೆ ಭೂಮಿಯನ್ನು ದಾನ ಮಾಡಿರಿ ಎಂದು ವಿನಂತಿಸಿಕೊಂಡರು. ಇದಕ್ಕೆ ಅಯ್ಯಪ್ಪನವರಿಂದ ಸಕಾರಾತ್ಮಕ ಪ್ರತಿಕ್ರಿಯೆ ಬಂದು ತಮ್ಮ ಐದು ಎಕರೆಯನ್ನು ತಮ್ಮ ತಾಯಿ ಚೆನ್ನಬಸಮ್ಮನವರ ಹೆಸರಿನಲ್ಲಿ ದಾನ ಮಾಡಿದರು.

### ಶಾಲಾ ಕಟ್ಟಡದ ನಿರ್ಮಾಣ

ಶಾಲಾ ಕಟ್ಟಡಕ್ಕೆ ಒಂದು ನಿವೇಶನ ದೊರೆತಕೂಡಲೇ ಕೋ. ಚೆಯವರು ಕಟ್ಟಡ ನಿರ್ಮಾಣದ ಕಾರ್ಯಕ್ಕೆ ಕೈಹಾಕಬೇಕೆಂದು ಯೋಚಿಸಿ, ಪ್ರತಿ ಸೋಮವಾರ ರೈತರು ತಮ್ಮ ವ್ಯವಸಾಯಕ್ಕೆ ಎತ್ತುಗಳನ್ನು ಬಳಸುವುದಿಲ್ಲ. ಆ ಸಮಯದಲ್ಲಿ ಕಟ್ಟಡಕ್ಕೆ ಬೇಕಾಗುವ ಕಲ್ಲು, ಜಲ್ಲಿ, ಇಟ್ಟಿಗೆ, ಮರ ಮುಟ್ಟು ಇತ್ಯಾದಿ ಸಾಮಾಗ್ರಿಗಳನ್ನು ಸಂಗ್ರಹಿಸಿ, ಕಟ್ಟಡ ನಿರ್ಮಾಣ ಮಾಡಲು ತೀರ್ಮಾನಿಸಿದರು. ಈ ಕುರಿತು ಆಲೂರು, ಹುಲಿಕೆರೆ, ಕಾನಾಮಡುಗು, ಅಣಬೂರು ಗ್ರಾಮದ ರೈತರನ್ನು ಉರಿದುಂಬಿಸಿ ಕೆಲಸವನ್ನು ಸುಗಮಗೊಳಿಸಿದರು. ಆ ಒಂದು ಶ್ರಮಕಾರ್ಯಕ್ಕೆ

ಕೋ. ಚೆಯವರೊಂದಿಗೆ, ಹಳೆಯ ಶಾಲಾ ವಿದ್ಯಾರ್ಥಿಗಳು, "ಬಿ.ಎಸ್. ವೀರಭದ್ರಪ್ಪ, ವೃಷಬೇಂದ್ರ ಸ್ವಾಮಿ, ಮುದ್ದು ಬಸಯ್ಯ, ಕಾನಾಮಡುವಿನ ಮೇಷ್ಟ್ರು ಸಣ್ಣ ಬಸಪ್ಪ, ಅವರ ಅಳಿಯಂದಿರು ಮುಂತಾದವರು" ಬಂಡಿಯಿಂದ ತಂದ ಕಲ್ಲುಗಳನ್ನು ಎತ್ತಿ ಕೆಳಗೆ ಹಾಕುತ್ತಿದ್ದರು. ಮಣ್ಣನ್ನು ಗಾಡಿಗಳಿಂದ ಸಲಾಕೆಯಲ್ಲಿ ಕೆಳಗೆ ಎಳೆದು ಹಾಕುತ್ತಿದ್ದರು. ಹೀಗೆ ಎತ್ತು-ಬಂಡಿಗಳ ಉಚಿತ ಸೇವೆಯಿಂದ ಕಲ್ಲು, ಮಣ್ಣು, ಕಟ್ಟಿಗೆಗಳನ್ನು ತಂದು ಹಾಕುತ್ತಿದ್ದರು. ಇದಕ್ಕೆಲ್ಲ ಆಗ ತಾನೇ ಬಂದ ಸ್ವಾತಂತ್ರ್ಯ ಜನಸಾಮಾನ್ಯರನ್ನು ದೇಶಸೇವೆಗೆ, ದೇಶಾಭಿವೃದ್ಧಿಗೆ ಸಿದ್ಧಮಾಡಿತು. ಎಂಬುದು ಕೋ. ಚೆಯವರ ಅಭಿಪ್ರಾಯ.

ಇನ್ನು ಕಟ್ಟಡ ನಿರ್ಮಾಣಕ್ಕೆ ದೈಹಿಕ ಶ್ರಮದ ಅವಶ್ಯಕತೆ ಉಂಟಾಗಿ ಕೋ. ಚೆ ಒಂದು ಶಿಬಿರವನ್ನು ಆರಂಭಿಸಿದರು. ಇದರಲ್ಲಿ ಹಳೆಯ ವಿದ್ಯಾರ್ಥಿಗಳು ಸೇರಿಕೊಂಡರು. ಅವರಿಗೆಲ್ಲಾ ಮೂಲ ಶರಣಾರ್ಯರ ದಾಸೋಹ ಮಠದಿಂದ ದಿನನಿತ್ಯ ಊಟದ ವ್ಯವಸ್ಥೆ ದೊರೆಯಿತು. ಶಾಲಾ ಕಟ್ಟಡದ ಶಂಕುಸ್ಥಾಪನಾ ಸಮಾರಂಭವನ್ನು ಬಳ್ಳಾರಿ ಜಿಲ್ಲಾ ಕಲೆಕ್ಟರ್ ರಾಮರೆಡ್ಡಿ ಅವರು ದಿನಾಂಕ ೮-೧೦-೧೯೫೧ರಂದು ನೆರವೇರಿಸುವುದರೊಂದಿಗೆ ಕಟ್ಟಡದ ಕೆಲಸವನ್ನು ಆರಂಭಿಸಲಾಗಿತ್ತು.

ಕೋ. ಚೆಯವರು ಹಳೆಯ ವಿದ್ಯಾರ್ಥಿಗಳೊಂದಿಗೆ ಕೈಗೆ ಗುದ್ದಲಿ ಹಿಡಿದು ಕೆಲಸಮಾಡಿದರು. ಈ ಕಟ್ಟಡ ನಿರ್ಮಾಣಕ್ಕೆ ಅಂದು ಎಲ್ಲಿಲ್ಲದ ಸ್ಫೂರ್ತಿಯನ್ನು ಜನ ಹೊಂದಿದ್ದರು. ಅಲ್ಲಿ ಕೆಲಸ ಮಾಡಲು ಬಂದವರು ಕಾನಾಮಡುಗಿನ ಸಣ್ಣಬಸಪ್ಪ ಮೇಷ್ಟ್ರು, ಕೋ. ಚೆಯವರ ಸಂಬಂಧಿಗಳು, ಹೆಣ್ಣುಮಕ್ಕಳು ಊರಿನ ಸ್ತ್ರೀಯರು, ಪುರುಷರು ಹೀಗೆ ಎಲ್ಲರೂ ಸೇರಿಕೊಂಡು ಯಾವುದೇ ಜಾತಿ ಭೇದ-ಭಾವ ವಿಲ್ಲದೆ ಹಳ್ಳಿಯಲ್ಲಿ ಶಾಲೆ ನಿರ್ಮಿಸಲು ಕೈಗೆ (ಕೋ. ಚೆಯವರೊಂದಿಗೆ) ಕೈ ಜೋಡಿಸಿದರು. ಅಂದು ಒಗ್ಗಟ್ಟಿನಲ್ಲಿಂದ ನಿರ್ಮಿಸಿದ ಶ್ರಮಶಾಲೆಯ ಕಟ್ಟಡ ಇಂದು ಹಾಗೇ ಇದೆ. ಇಂದು ಸ್ವಲ್ಪ ಕಿಟಕಿ, ಬಾಗಿಲುಗಳ ಚೌಕಟ್ಟುಗಳು ಅಲ್ಪ ಶಿಥಿಲವಾಗಿವೆಯಾದರೂ, ಕಟ್ಟಡ ಮಾತ್ರ ಹಾಗೇ ಇದೆ. ಅಂದು ಕಟ್ಟಡದ ಜೊತೆ-ಜೊತೆಗೆ ಗಿಡ ನೆಡುವ ಕಾರ್ಯದಲ್ಲಿ ಮುಂದಾಗಿದ್ದ ಕೋ. ಚೆ. ಶಾಲೆಯ ಆವರಣವನ್ನು ಮಕ್ಕಳಿಗೆ ಓದಲು ಅನುಕೂಲವಾಗುವ ರೀತಿಯ ವಾತಾವರಣ ಕಲ್ಪಿಸಿದರು. ಇಂದು ಮರಗಳು ಬೆಳೆದು ದೊಡ್ಡವಾಗಿ ಶಾಲೆಯ ಆವರಣವನ್ನು ತಣ್ಣಗೆ ಇಟ್ಟಿವೆ.

ಈ ಒಂದು ಶಾಲೆಯಲ್ಲಿ ಹೈಸ್ಕೂಲು ೧೯೬೧ರಲ್ಲಿ ಆರಂಭವಾಗಿದ್ದು ಅದನ್ನು ತೆಗೆಯಲು ಅನುಮತಿ ನೀಡುವಲ್ಲಿ ಕೋ. ಚೆಯವರು ಪ್ರಮುಖ ಕಾರಣರಾಗಿದ್ದರು. ಇಂದು ಶ್ರೀ ಶರಣಬಸವೇಶ್ವರ ವಿದ್ಯಾ ಸಂಘ, ಒಂದು ಹೈಸ್ಕೂಲ್, ಎರಡು ಐ.ಟಿ.ಐ(ದೊರೆಹಳ್ಳಿಯಲ್ಲಿ ಒಂದನ್ನು ಹೊಸದಾಗಿ ಆರಂಭಿಸಿದೆ) ಪದವಿ ಪೂರ್ವ ಕಾಲೇಜು ಮತ್ತು ಪಾಲಿಟೆಕ್ನಿಕಲ್ ಕಾಲೇಜುಗಳನ್ನು ಆರಂಭಿಸುವುದರೊಂದಿಗೆ ಸಂಸ್ಥೆಯ ಹೆಸರು ದೊಡ್ಡದಾಗಿ ಬೆಳೆಯುವಂತಾಗಿದೆ.

ಹೀಗೆ ಹಡಗಲಿ ತಾಲೂಕು ಹೊಳಲಿನ ಶ್ರೀ ಸ್ವಾಮಿ ವಿವೇಕಾನಂದ ಪ್ರೌಢಶಾಲೆಯನ್ನು ಡಿ. ಜ್ಯೋತಿ ಶಿವಲಿಂಗಪ್ಪನವರ ನೇತೃತ್ವದಲ್ಲಿ ಸ್ಥಾಪನೆಯಾಗಿದ್ದು, ಅದರಲ್ಲಿ ಕೋ. ಚೆಯವರು

ಸಂಸ್ಥೆಯ ಆಡಳಿತದಲ್ಲಿ 'ಕರೆಸ್ಪಾಂಡೆಂಟ್' ಸ್ಥಾನದಲ್ಲಿದ್ದರು. ಈ ಎರಡು ಶಾಲೆಗಳ ಆಡಳಿತ ಮಂಡಳಿಯಲ್ಲಿ ಕಾರ್ಯನಿರ್ವಹಿಸಿ, ಅವುಗಳು ಭದ್ರವಾದ ಸ್ಥಾನ ತಲುಪುವಂತೆ ಮಾಡಿರುವುದರಲ್ಲಿ ಕೋ. ಚೆಯವರ ಶ್ರಮ ತುಂಬಾ ಅಗಾಧವಾದದ್ದು.

**ಬಳ್ಳಾರಿ ವೀರಶೈವ ಕಾಲೇಜಿನ ಅಧ್ಯಕ್ಷರಾಗಿ ಕೋ. ಚೆ**

ಜನರಿಗಾಗಲೇ ಸ್ವಾತಂತ್ರ್ಯ ಹೋರಾಟ ಮತ್ತು ಏಕೀಕರಣ ಚಳವಳಿಯಲ್ಲಿ ಭಾಗವಹಿಸುವುದ ರೊಂದಿಗೆ ಕೋ. ಚೆ ಚಿರಪರಿಚಿತರಾಗಿದ್ದರು. ಇದರ ಜೊತೆಗೆ ಸಂಘಟನೆ ಮೂಲಕ ಹಳ್ಳಿಜನರನ್ನು ಒಟ್ಟುಗೂಡಿಸಿ ಒಂದು ಶಾಲೆಯ ಕಟ್ಟಡ ನಿರ್ಮಿಸಿದ್ದು, ಬಳ್ಳಾರಿ ವೀರಶೈವ ವಿದ್ಯಾವರ್ಧಕ ಸಂಘಕ್ಕೆ ಮುಟ್ಟಿದ್ದರಲ್ಲಿ ಆಶ್ಚರ್ಯವೇನು ಇರಲಿಲ್ಲ. ಆದ್ದರಿಂದ ಕೋ. ಚೆಯವರನ್ನು ಮೊದಲು ವೀರಶೈವ ಗವರ್ನಿಂಗ್ ಬಾಡಿ (ಆಡಳಿತ ಸಭೆ)ಯ ಸದಸ್ಯರನ್ನಾಗಿ ನೇಮಿಸಿಕೊಂಡರು. ಆ ಆಡಳಿತ ಸಭೆಯ ಸದಸ್ಯರೆಲ್ಲೆಲ್ಲ ಕೋ. ಚೆಯವರು ವಯಸ್ಸಿನಲ್ಲಿ ಚಿಕ್ಕವರು ಆದರೂ ಅವರ ಮಾತುಗಳಿಗೆ ಅಲ್ಲಿ ಬೆಲೆ ಇರುತ್ತಿತ್ತು.

ಡಾ. ವಿ.ಕೆ. ಪುಟ್ಟಪ್ಪನವರು, ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿಗಳಾಗಿದ್ದಾಗ, ಕೋ. ಚೆಯವರನ್ನು ವಿಶ್ವವಿದ್ಯಾನಿಲಯದ ಸೆನೆಟ್‌ಗೆ ನಾಮಕರಣ ಮಾಡಿದರು. ಆಗ ಬಳ್ಳಾರಿ ಜಿಲ್ಲೆ ಮೈಸೂರು ವಿಶ್ವವಿದ್ಯಾನಿಲಯದ ವ್ಯಾಪ್ತಿಯಲ್ಲಿತ್ತು. ಆ ಕಾರಣದಿಂದ ೧೯೫೮ರಲ್ಲಿ ಕೋ.ಚೆಯವರನ್ನು ವೀರಶೈವ ಕಾಲೇಜ್‌ನ ಮ್ಯಾನೇಜರ್ (ಅಧ್ಯಕ್ಷ) ಆಗಿ ಚುನಾಯಿಸಲಾಯಿತು.

ಕೋ. ಚೆಯವರು ವೀರಶೈವ ಕಾಲೇಜಿನ ಅಧ್ಯಕ್ಷರಾದಾಗ ವಿಶ್ವವಿದ್ಯಾನಿಲಯದ ಧನ ಸಹಾಯ ಆಯೋಗವು ಕಾಲೇಜಿನ ಅಧ್ಯಾಪಕರಿಗೆ ಸಂಬಳವನ್ನು ಹೆಚ್ಚಿಸುವ ತೀರ್ಮಾನವನ್ನು ಅಂಗೀಕರಿಸಿ, ೧೯೫೬ರಿಂದ ಇದು ಅನ್ವಯಿಸುವಂತೆ ಮಾಡಿತ್ತು. ಆದರೆ ಇಡೀ ರಾಜ್ಯದಲ್ಲಿ ಇದನ್ನು ಜಾರಿಗೊಳಿಸುವಲ್ಲಿ ಬಳ್ಳಾರಿಯ ವೀರಶೈವ ಕಾಲೇಜ್ ಮೊದಲನೆಯದು, ಅದಕ್ಕೆ ಕಾರಣರಾದವರು ಕೋ. ಚೆಯವರು ಏಕೆಂದರೆ ರಾಜ್ಯದ ಇತರೇ ಯಾವದೇ ಕಾಲೇಜು, ಇದನ್ನು ಜಾರಿಗೆ ತರಲು ಹಿಂದೇಟು ಹಾಕುತ್ತಿರುವಾಗ ಕೋ. ಚೆಯವರು ಮೊದಲ ಬಾರಿಗೆ ಅದನ್ನು ಜಾರಿಗೆ ತಂದರು. ಇದರಿಂದ 'ಕಾಲೇಜು ಅಧ್ಯಾಪಕರಿಗೆ ಇಪ್ಪತ್ತುನಾಲ್ಕು ಸಾವಿರ ರೂಪಾಯಿಗಳ ಹಿಂದಿನ ಬಾಕಿ ಸಂಬಳ ಏಕಕಾಲಕ್ಕೆ ಸಿಕ್ಕಿತು. ಆದರೆ ಕಾಲೇಜಿನ ಆಡಳಿತ ಮಂಡಳಿ ಈ ಕಾಲೇಜು ಅಧ್ಯಾಪಕರಿಗೆ ಬಂದ ಬಾಕಿ ಹಣವನ್ನು ಕಾಲೇಜಿನ ಅಭಿವೃದ್ಧಿಗೆ ಕೊಡಬೇಕು ಎಂದಾಗ. ಕೋ. ಚೆಯವರು ಆಡಳಿತವಾದವನ್ನು ಒಪ್ಪಲಿಲ್ಲ.

ಇನ್ನು ವೀರಶೈವ ಕಾಲೇಜಿನ ಆಡಿಟೋರಿಯಂ ಕಟ್ಟಡ ಕಟ್ಟಲು ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದಿಂದ ನಲವತ್ತು ಸಾವಿರ ರೂಪಾಯಿಗಳನ್ನು ಪಡೆಯುವಲ್ಲಿ ಕೋ. ಚೆಯವರು ಯಶಸ್ವಿಯಾದರು. ಅಲ್ಲದೇ ಕಾಲೇಜ್ ಕಟ್ಟಡಕ್ಕಾಗಿ ಕೇವಲ ಒಂದೇ ವರ್ಷದಲ್ಲಿ ಎರಡು ಲಕ್ಷವನ್ನು ಧನಸಹಾಯ ಬರುವಂತೆ ಕೋ. ಚೆ ವ್ಯವಸ್ಥೆ ಮಾಡಿಸಿದ್ದರು. ಈ ರೀತಿಯಾಗಿ ಸೆನೆಟ್ ಸಭೆಗಳಲ್ಲಿ ಭಾಗವಹಿಸುವ ಮೂಲಕ ಕಾಲೇಜಿನ ಅಭಿವೃದ್ಧಿಗೆ ಶ್ರಮಿಸಿದರೆಂದು ಹೇಳಬಹುದು.

**ಜಾತ್ಯಾತೀತವಾಗಿ ನೇಮಕಾತಿ**

ಕೋ. ಚೆಯವರು ವೀರಶೈವ ಕಾಲೇಜಿನ ಅಧ್ಯಕ್ಷರಾದಾಗ ಕೆಲವು ಉಪಾಧ್ಯಾಯರ ಹುದ್ದೆಗಳನ್ನು ತುಂಬಬೇಕಾಗಿ ಬಂದಿತ್ತು. ಈ ಹುದ್ದೆಯನ್ನು ಪ್ರಿನ್ಸಿಪಾಲ್ ಮತ್ತು ಆಡಳಿತ ಮಂಡಳಿಯ ಅಧ್ಯಕ್ಷರು ತುಂಬಿಕೊಳ್ಳುತ್ತಿದ್ದರಿಂದ ಅಲ್ಲಿ ಅಂಕಗಳನ್ನು ಪರಿಗಣಿಸಿ ಹುದ್ದೆ ನೀಡುವ ತೀರ್ಮಾನಕ್ಕೆ ಬರಲಾಗುತ್ತಿತ್ತು. ಪ್ರಿನ್ಸಿಪಾಲರು ಕಾಲಿ ಇರುವ ಹುದ್ದೆಗಳಿಗೆ ಅರ್ಜಿ ಆಹ್ವಾನಿಸಿದರು. ಬಂದ ಅರ್ಜಿಗಳನ್ನು ಪರಿಶೀಲಿಸಿ ಸೂಕ್ತ ಅಭ್ಯಾರ್ಥಿಯನ್ನು ನೇಮಿಸಲಾಗುತ್ತಿತ್ತು. ಆದರೆ ಚರಿತ್ರೆಯ ಉಪನ್ಯಾಸಕರನ್ನು ನೇಮಿಸುವಲ್ಲಿ, ಕಾಲೇಜಿನ ಆಡಳಿತ ಮಂಡಳಿಗೂ ಮತ್ತು ಕೋ. ಚೆಯವರಿಗೂ ಒಂದು ಸಣ್ಣ ಭಿನ್ನಾಭಿಪ್ರಾಯ ಉಂಟಾಗಿತ್ತು. ಏಕೆಂದರೆ ಯಳಂದೂರಿನಿಂದ ಒಬ್ಬ ವೀರಶೈವ ಅಭ್ಯರ್ಥಿ ಅರ್ಜಿ ಹಾಕಿದ್ದು, ಅವನಿಗೆ ನೀಡದೆ ಬ್ರಾಹ್ಮಣರಾಗಿದ್ದ ಬದರೀನಾರಾಯಣರನ್ನು ನೇಮಿಸಿದ್ದಕ್ಕೆ ಕಾಲೇಜಿನ ವಾರ್ಷಿಕ ವರದಿ ಒಪ್ಪಿಸುವ ಸಮಯದಲ್ಲಿ ಬಹು ಬಿರುಸಿನ ಚರ್ಚೆಗೆ ಕಾರಣವಾಯಿತು. ಏಕೆಂದರೆ ಧಾರವಾಡದಲ್ಲಿರುವ ಬ್ರಾಹ್ಮಣರ ಕಾಲೇಜಿನಲ್ಲಿ ಯಾವ ಒಬ್ಬ ಲಿಂಗಾಯಿತರನ್ನು ನೇಮಿಸಿಕೊಂಡಿರಲಿಲ್ಲ. ಅಂತದರಲ್ಲಿ ವೀರಶೈವರ ಕಾಲೇಜಿನಲ್ಲಿ ಒಬ್ಬ ಬ್ರಾಹ್ಮಣನಿಗೆ ಸ್ಥಾನ ನೀಡಿದ್ದು ಸೂಕ್ತವಲ್ಲ, ಎಂಬುದು ಆಡಳಿತ ಮಂಡಳಿಯ ಸದಸ್ಯರ ಅಭಿಪ್ರಾಯ ಇದಕ್ಕೆ ಕೋ. ಚೆಯುವರು ನೀವು ಧಾರವಾಡದಲ್ಲಿರುವ ಕಾಲೇಜಿನವರು ನೇಮಿಸಿಕೊಂಡಿರುವ ಪದ್ಧತಿ ಸರಿಯೇ? ಎಂದು ಪ್ರಶ್ನಿಸಿದರು. ಆಗ ಆಡಳಿತ ಮಂಡಳಿಯ ಸದಸ್ಯರು ಅದು ತಪ್ಪು, ಅದಕ್ಕೆ ನಾವು ನೇಮಿಸಿಕೊಳ್ಳುವುದ ಬೇಡ ಎಂದು ತೀರ್ಮಾನಿಸಿದ್ದು ಎಂದರು. ಆಗ ಕೋ. ಚೆಯವರು ಅವರು ಮಾಡಿದ ತಪ್ಪು ನಾವು ಮಾಡಿದರೆ ಹೇಗೆ ಅವರಿಗೆ ಈ ನೇಮಕಾತಿ ಮಾದರಿ ಆಗುತ್ತದೆ ಬಿಡಿ ಎಂದರು.

ಕೋ. ಚೆಯವರು ಆ ನೇಮಕಾತಿಗೆ ಬಳಸಿದ ಜಾತಿಯ ಆಧಾರವನ್ನಲ್ಲ, ಅಂಕ, ಅಂಕಗಳ ಸ್ಥಾನ ಮತ್ತು ಅಭ್ಯಾರ್ಥಿಯ ಯೋಗ್ಯಗೆ ಮಾತ್ರ, ಈ ರೀತಿಯಾಗಿ ಅದೆಷ್ಟೋ ಜಾತ್ಯತೀತವಾದ ನಿಲುವುಗಳನ್ನು ಕೋ. ಚೆ ಅಳವಡಿಸಿಕೊಂಡಿದ್ದರು.

ಕೋ. ಚೆಯವರು ಒಂದು ಶಿಕ್ಷಣ ತರಬೇತಿ ಕಾಲೇಜನ್ನು ಆರಂಭಿಸಬೇಕೆಂದು ವೀರಶೈವ ಕಾಲೇಜಿನ ಅಧ್ಯಕ್ಷರಾಗಿದ್ದಾಗ ಬಯಸಿದರು. ಆದರೆ ತರಬೇತಿ ಕಾಲೇಜು ತುಂಬಾ ನಷ್ಟದ ಬಾಬು ಎಂದು ಕೆಲವರು ವಾದಿಸಿ ಆರಂಭಿಸಲು ಅನುಕೂಲವಾಗದಂತೆ ತಡೆದರು. ಆದರೆ ಅವರು ಅಧ್ಯಕ್ಷತೆಯಿಂದ ಕೆಳಗಿಳಿದ ನಂತರ ಮತ್ತೆ ಶಿಕ್ಷಣ ತರಬೇತಿ ಕಾಲೇಜು ಆರಂಭಿಸಲು ತೀರ್ಮಾನ ಕೈಗೊಂಡದ್ದು ಒಂದು ಆರೋಗ್ಯಕಾರಿ ಬೆಳವಣಿಗೆಯಾಗಿತ್ತು. ಆದರೆ ಹಿಂದುಳಿದ ವರ್ಗಗಳಿಗೆ ನೀಡಲಾಗುತ್ತಿದ್ದ. ಧನಸಹಾಯವನ್ನು ಆಡಳಿತ ಮಂಡಳಿಯ ಕೆಲವು ಸದಸ್ಯರು ತಮಗೆ ಬೇಕಾದವರಿಗೆ ನೀಡುವಂತೆ ಶಿಫಾರಸ್ಸು ಮಾಡುತ್ತಿದ್ದರು. ಆ ಕಾರ್ಯ ಕಾನೂನಿಗೆ ವಿರುದ್ಧವಾಗಿತ್ತು. ಯಾರಿಗೆ ನಿಜವಾಗಿ ಧನ ಸಹಾಯ ದೊರೆಯಬೇಕಾಗಿತ್ತು. ಅವರಿಗೆ ಮಾತ್ರ ಸಹಾಯ ಮಾಡಬೇಕೆಂದು ಕೋ. ಚೆ. ವಾದಿಸಿದರು. ಆದರೆ ಕೋ. ಚೆಯವರ ಮಾತಿಗೆ

ಬೆಲೆಸಿಗದೆ ವೀರಶೈವ ಕಾಲೇಜಿನ ಆಡಳಿತ ಸಭೆಯ ಸದಸ್ಯತ್ವಕ್ಕೆ ರಾಜೀನಾಮೆ ನೀಡಿ ಹೊರಬಂದರು. ಇದರಿಂದ ೧೫ವರ್ಷಗಳ ಕಾಲ ಬೆಸೆದಿದ್ದ ಕೊಂಡಿ ಕಳಚಿದಂತೆ ಆಗಿತ್ತು. ಆದರೆ ಇವರ ಆಡಳಿತಾವಧಿಯಲ್ಲಿ ಮಾಡಲಾದ ಕಾರ್ಯಗಳು ಇಂದೂ ಹಾಗೇ ಉಳಿದಿವೆ. ಕೋ. ಚೆಯವರು ಮಾತ್ರ ಆ ಕಾಲೇಜಿನ ಆಡಳಿತ ವರ್ಗದ ಸದಸ್ಯರಾಗಿಲ್ಲ.

**ವಯಸ್ಕರ ಶಿಕ್ಷಣ ಸಮಿತಿಯಲ್ಲಿ ಕೋ. ಚೆ**

೧೯೫೩ರಲ್ಲಿ ಬಳ್ಳಾರಿಯನ್ನು ಮೈಸೂರು ರಾಜ್ಯದೊಳಗೆ ವಿಲೀನಮಾಡಲಾಯಿತು. ಆಗ ಮೈಸೂರಿನ ವಯಸ್ಕರ ಶಿಕ್ಷಣ ಸಮಿತಿ, ಬಳ್ಳಾರಿ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯನ್ನು ಪ್ರಾರಂಭಿಸಿದರು. ಅದಕ್ಕೆ ಅಂದಿನ ಬಳ್ಳಾರಿ ಜಿಲ್ಲಾಧಿಕಾರಿಯಾಗಿದ್ದ ಕೆ. ಶೇಷಗಿರಿರಾಯರು ಅಧ್ಯಕ್ಷರಾಗಿದ್ದರು. ಕೋ. ಚೆಯವರನ್ನು ಕಾರ್ಯದರ್ಶಿಯಾಗಿ ನೇಮಿಸಿಕೊಳ್ಳಲಾಗಿತ್ತು.

ಕೋ. ಚೆಯವರು ಈ ಸಮಿತಿಯಲ್ಲಿ ಇದ್ದುಕೊಂಡು ತಾಲೂಕು ಸಮಿತಿಯನ್ನು ರಚಿಸಿದರು. ಅಲ್ಲದೆ ಪ್ರತಿ ತಾಲೂಕಿನಲ್ಲೂ ಪ್ರಸಕ್ತ ಭಂಡಾರಗಳನ್ನು ಸ್ಥಾಪಿಸಲು ನೆರವಾದರು. ಈ ಕೆಲಸದಿಂದ ೧೯೬೫ರ ಸುಮಾರಿಗೆ ತಾಲೂಕಿನಾದ್ಯಾಂತ ೨೦೦ಕ್ಕಿಂತ ಹೆಚ್ಚು ಪ್ರಸಕ್ತ ಭಂಡಾರಗಳು ಉತ್ತಮವಾಗಿ ಕಾರ್ಯ ನಿರ್ವಹಿಸಿದವು.

ಇದೆಲ್ಲದಕ್ಕೂ ಹೆಚ್ಚಾಗಿ ಪಂಪಾ ವಿದ್ಯಾಪೀಠದ ಸ್ಥಾಪನೆಯನ್ನು ಮಾಡಿದ್ದು ಹೇಗೆಂದರೆ ಹಂಪೆಗೆ ಏಳು ಮೈಲು ದೂರದಲ್ಲಿರುವ, "ರಾಮಸಾಗರ ಹತ್ತಿರ ಪಾಳು ಬಿದ್ದ ತುಂಗಭದ್ರಾ ಯೋಜನೆಗೆ ಸೇರಿದ ಕಾಲೋನಿಯನ್ನು ತುಂಗಭದ್ರಾ ಆಣೆಕಟ್ಟಿನ ಆಡಳಿತ ಮಂಡಳಿಯಿಂದ (Tunga Bhadhra board) ೧೨ ಸಾವಿರ ರೂಪಾಯಿಗಳಿಗೆ ಜಾಗ ಖರೀದಿಸಿ ಪಂಪಾ ವಿದ್ಯಾಪೀಠವನ್ನು ೧೯೬೨ರಲ್ಲಿ ಸ್ಥಾಪಿಸಿದರು.[೩] ಒಂದು ಅದ್ಭುತವಾದ ಉಪಯುಕ್ತ ಸಂಸ್ಥೆಯಾಗಿದ್ದು, ಇಂದಿಗೂ ಇದು ಕೋ. ಚೆಯವರ ರಿಜಿಸ್ಟರಿನಲ್ಲಿದೆ.

**ಕೋ. ಚೆ ಪ್ರಸಾದ ನಿಲಯ ಸ್ಥಾಪನೆ**

೨೦೦೫ ಜೂನ್ ೨೯ರಂದು ಕಾರಣಾಂತರದಿಂದ ಕೋ. ಚೆಯವರು ತಮ್ಮ ಹುಟ್ಟೂರಾದ ಆಲೂರಿಗೆ ತಮ್ಮ ಮಗ ಪ್ರಭುದೇವರೊಂದಿಗೆ ಬಂದಿದ್ದರು. (ಕೋ. ಚೆಯವರ ಮಗ ಪ್ರಭುದೇವರು ಅಮೇರಿಕದಲ್ಲಿ ನೆಲಸಿದ್ದಾರೆ) ಆಗ ಪ್ರಭುದೇವರು ನೀವು ಓದಿದ ಶಾಲೆ ಎಲ್ಲಿದೆ ಅದನ್ನು ತೋರಿಸಿ ಎಂದು ಕೇಳಿಕೊಂಡರು. ಆಗ ಕೋ. ಚೆಯವರು ತಾವು ಓದಿದ ಶಾಲೆ, ತಾವು ಕಟ್ಟಿಸಿದ, ಶ್ರಮದಾನದ ಕಟ್ಟಡ, ಬೆನಕಶೆಟ್ಟಿ ಚೆನ್ನಬಸಮ್ಮ (ಕೋ. ಚೆಯವರ ಅಜ್ಜಿ) ನವರು ದಾನ ಮಾಡಿದ ಭೂಮಿ ಮತ್ತು ದಾನಮಾಡಿದ ನೆನಪಿಗೆಂದು ಕೋ. ಚೆಯವರು ಮಾಡಿಸಿಕೊಂಡು ತಂದಿದ್ದ ಅಮೃತ ಶಿಲಾಫಲಕಗಳನ್ನು ತೋರಿಸಿದರು. ಆಗ ಪ್ರಭುದೇವರು ಈ ಹಳ್ಳಿಗಾಡಿನಲ್ಲಿ ಈ ಶಾಲೆ ವಿದ್ಯಾಭ್ಯಾಸಕ್ಕೆ ಬಹಳ ಚೆನ್ನಾಗಿದೆ. ಇದನ್ನು ಇನ್ನು ಅಭಿವೃದ್ಧಿ ಪಡಿಸಲು ನೀವು ಏನಾದರೂ ಮಾಡಬೇಕು.೪ ಎಂದು ಹೇಳಿದರು. ನಂತರ ೨೯-೬-೨೦೦೫ರಂದು ಪ್ರಭುದೇವರು ಅಮೇರಕಾಕ್ಕೆ ತೆರಳುವಾಗಲೂ ನೀವು ಓದಿದ ಶಾಲೆಯ ಅಭಿವೃದ್ಧಿಗೆ ಏನಾದರೂ ಮಾಡಿ. ಅದಕ್ಕೆ ನನ್ನಿಂದ ಎಷ್ಟು ಸಾಧ್ಯವೋ ಅಷ್ಟು ಸಹಾಯ ಮಾಡುವುದಾಗಿ ಹೇಳಿದರು. ಈ

ಕುರಿತು ಕೋ. ಚೆಯವರು ನಾನು ಓದಿದ ಶಾಲೆಯ ಋಣವನ್ನು ಹೇಗೆ ತೀರಿಸಲಿ? ಈ ಒಂದು ಹಳ್ಳಿಗಾಡಿನಲ್ಲಿ ಅಂದು ಗುರಣ್ಣನವರು ಶಾಲೆಯನ್ನು ತೆರೆಯದಿದ್ದರೆ, ಅವರ ಬೆಂಬಲ ನನಗೆ ಇಲ್ಲದಿದ್ದರೆ, ಈ ಸಮಯದಲ್ಲಿ ನಾನು ರೈತನಾಗಿಯೇ ಅಥವಾ ವ್ಯಾಪಾರಿಯಾಗಿಯೇ ಇರುತ್ತಿದ್ದೆ. ಈ ಶಾಲೆಯಿಂದಲೇ ನಾನು ಕಲಿತು ಮುಂದೆ ಬರಲು ಸಾಧ್ಯವಾಗುತ್ತಿರಲಿಲ್ಲ, ಮುಂದೆ ಒಂದು ದೃಢಮನಸ್ಸಿನಿಂದ ಸಲಹೆಯಂತೆ ಶಾಲೆಯ ಅಭಿವೃದ್ಧಿಗೆ ಒಂದು ಹಾಸ್ಟಲ್ ಕಟ್ಟಿಸುವುದು ಸೂಕ್ತವೆಂದು ಯೋಚಿಸಿದರು. ಈ ವಿಷಯ ಕುರಿತು ಇಂದಿನ ಶರಣ ಬಸವೇಶ್ವರ ವಿದ್ಯಾವರ್ಧಕ ಸಂಘದ ಒಡೆಯರಾದ ಬಿ.ಎಸ್ ವೀರಭದ್ರಪ್ಪ ಅಧ್ಯಕ್ಷರಾದ ಚಿದಾನಂದಪ್ಪ ಕಾರ್ಯದರ್ಶಿಗಳಾದ ಕೆ. ತಿಪ್ಪೇಸ್ವಾಮಿ, ಆಡಳಿತಾಧಿಕಾರಿಗಳಾದ ಎ. ನಾಗೇಂದ್ರಪ್ಪ ಮುಂತಾದ ಆಡಳಿತವರ್ಗದ ಸದಸ್ಯರೊಡನೆ ಸಮಾಲೋಚಿಸಿ, ಹಾಸ್ಟಲ್ ಕಟ್ಟಡದ ಶಂಕು ಸ್ಥಾಪನೆಯನ್ನು ಮೇ. ೮ ೨೦೦೮ರಂದು ಬಸವ ಜಯಂತಿಯಂದು ಮಾಡಲಾಗಿತ್ತು. ಇಂದು ಹಾಸ್ಟಲ್‌ನ ಕಟ್ಟಡ ಹಂತಿಮ ಹಂತ ತಲುಪಿದ್ದು. ಅಕ್ಟೋಬರ್ ೨೦೦೯ರ ಒಳಗಾಗಿ ಉದ್ಘಾಟನೆಯನ್ನು ಮಾಡುವ ಯೋಚನೆ ಆಡಳಿತವರ್ಗದವರಲ್ಲಿದೆ. ಇನ್ನು ಹಾಸ್ಟೆಲ್ ಆರಂಭವಾಗುವುದಕ್ಕಿಂತ ಮುಂಚಿತವಾಗಿ 'ಕೋ. ಚೆ. ಶೈಕ್ಷಣಿಕ ಮತ್ತು ಸಾಹಿತ್ಯ ಟ್ರಸ್ಟ್' ನಿಂದ ವಿದ್ಯಾರ್ಥಿಗಳಿಗೆ ಉಚಿತ ಊಟದ ವ್ಯವಸ್ಥೆಯನ್ನು ಕಲ್ಪಿಸಿಕೊಡಲು ತೀರ್ಮಾನಗಳು ನಡೆದಿವೆ.' ಈ ಒಂದು ಹಾಸ್ಟಲಿನ ಸ್ಥಾಪನೆ ಸುತ್ತಮುತ್ತಲಿನ ಊರಿನವರ ಜ್ಞಾನಾರ್ಜನೆಗೆ ಸಹಕಾರಿಯಾಗುವುರಲ್ಲಿ ಸಂದೇಹವಿಲ್ಲ ಎನ್ನುತ್ತಾರೆ. ಶ್ರೀ ಶರಣಬಸವೇಶ್ವರ ವಿದ್ಯಾವರ್ಧಕ ಸಂಘದ ಇಂದಿನ ಕಾರ್ಯದರ್ಶಿಗಳಾದ ಎ. ನಾಗೇಂದ್ರಪ್ಪ ಹಾಗು ಬಿ.ಎಸ್. ವೀರಭದ್ರಪ್ಪನವರು'

ಸಂಸ್ಥೆಯ ಅಧ್ಯಕ್ಷರ ಮಾತಿನಲ್ಲಿ ಹೇಳುವುದಾದರೆ ಕೋ. ಚೆಯವರು ಈ ಹಾಸ್ಟಲ್ ಆರಂಭಿಸಲು ತುಂಬಾ ಸಹಾಯಕರಾಗಿದ್ದಾರೆ. ಅವರ ಸಹಾಯದಿಂದ ಸಂಸ್ಥೆಗೆ ಒಂದು ಆಸ್ತಿ ಲಭಿಸಿದೆ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

**ವಿದ್ಯಾರ್ಥಿಗಳಿಗೆ ಸಹಾಯಧನ**

ಕೋ. ಚೆಯವರು ಸ್ವಾತಂತ್ರ್ಯ ಹೋರಾಟಗಾರರಾಗಿ ಸೇವೆ ಸಲ್ಲಿಸಿದರು. ಆದರೆ ಸರ್ಕಾರ ನೀಡುವ ಪಿಂಚಣಿಗೆ ಅವರು ಆಸೆ ಪಡಲಿಲ್ಲ. ಆದರೆ ೧೯೯೩ರಲ್ಲಿ ರಾಮಕೃಷ್ಣ ಹೆಗಡೆಯವರು ಕೋ. ಚೆಯವರ ಜೀವನ ವೃತ್ತಾಂತವನ್ನು ತರಿಸಿಕೊಂಡು ಕೇಂದ್ರ ಸರ್ಕಾರ್ ಗೃಹ ಇಲಾಖೆಗೆ ಒಂದು ಪತ್ರ ಬರೆದು ಕೋ. ಚೆಯವರಿಗೆ ಸ್ವಾತಂತ್ರ್ಯಯೋಧರ ಪಿಂಚಣಿ ಮಂಜೂರು ಮಾಡಲು ಸಲಹೆ ಮಾಡಿದ್ದರು. ಹಾಗೆಯೇ ಕೇಂದ್ರ ಸರ್ಕಾರದ ಗೃಹ ಇಲಾಖೆಯ ಉಪಮಂತ್ರಿ ಸುಭೋಧ ಸಹಾಯ್ ಅವರು ಕೋ. ಚೆಯವರಿಗೆ ಒಂದು ಪಿಂಚಣಿ ಅರ್ಜಿ ಸಲ್ಲಿಸಿ ಅದನ್ನು ಭರ್ತಿಮಾಡಿ ಕಳಿಸುವಂತೆ ಸೂಚಿಸಿದರು. ಆದರೆ ೧೯೯೩ರಲ್ಲಿ ತುಂಬಿ ಕಳಿಸಿದ ಅರ್ಜಿ ೨೦೦೩ರವರೆಗೆ ವಿಧಾನಸೌಧದ ಕೇಂದ್ರ ಗೃಹ ಇಲಾಖೆಯಲ್ಲಿತ್ತು. ಈ ಕುರಿತು ಕೋ. ಚೆ ಪತ್ರ ಬರೆದು ವಿವರಣೆ ಕೇಳಿದರು. ಆದರೆ ಉತ್ತರ ಬರಲಿಲ್ಲದದ ಕಾರಣ ಕೋರ್ಟಿನಲ್ಲಿ ಒಂದು ರಿಟ್ ಅರ್ಜಿದಾಖಲಿಸಿ ಪಿಂಚಣಿ ಹಣವನ್ನು ಪಡೆದರು. ಆದರೆ,

ಪಿಂಚಣಿ ಹಣವನ್ನು ಅವರು ತಮ್ಮ ಸವಂತ ವ್ಯವಹಾರಕ್ಕೆ ಉಪಯೋಗಿಸಕೊಳ್ಳದೆ 'ಕೋ. ಚೆ. ಶಿಕ್ಷಣ ಮತ್ತು ಸಾಹಿತ್ಯ ಟ್ರಸ್ಟ್ (ರಿ)' ಸ್ಥಾಪಿಸಿ ಅದಕ್ಕೆ ೧೯೯೩ರಿಂದ ಬಂದ ಪಿಂಚಣಿ ಹಣವನ್ನು ಜಮೆ ಮಾಡಿಸಿದರು. ಈ ಟ್ರಸ್ಟಿಗೆ ಕೋ. ಚೆಯವರ ಮಕ್ಕಳು ಸಹ ಧನ ಸಹಾಯ ಮಾಡುವ ಮೂಲಕ ಟ್ರಸ್ಟ್ ಬೆಳೆಸಿದ್ದಾರೆ. ಈ ಟ್ರಸ್ಟ್ ಮೂಲಕ ಅರ್ಹ ವಿದ್ಯಾರ್ಥಿಗಳಿಗೆ, ವಿದ್ಯಾ ಸಂಸ್ಥೆಗಳಿಗೆ ಧನ ಸಹಾಯವನ್ನು ಮಾಡುತ್ತಿದ್ದಾರೆ. ಈ ಟ್ರಸ್ಟಿನ ವತಿಯಿಂದ ಪ್ರಭುದೇವ ಅವರು ಬಿ.ಟೆಕ್, ಪದವಿ ಪಡೆದ ಸುರತ್ಕಲ್ ಇಂಜಿನಿಯರಿಂಗ್ ಕಾಲೇಜಿನಲ್ಲಿ ಕೆಮಿಕಲ್ ಎಂಜಿನಿಯರಿಂಗ್ ಕ್ಲಾಸಿಗೆ ಸೇರುವ ಅತ್ಯಧಿಕ ಅಂಕ ಪಡೆದ ಒಬ್ಬ ವಿದ್ಯಾರ್ಥಿಗಳಿಗೆ ಐದು ಸಾವಿರ ಶಿಷ್ಯವೇತನ ನೀಡುತ್ತಿದ್ದಾರೆ. ಇದೇ ಟ್ರಸ್ಟ್‌ನಿಂದ ಕೋ. ಚೆ. ವಿದ್ಯಾರ್ಥಿನಿಲಯ ಸ್ಥಾಪನೆಯಾಗಿರುವುದನ್ನು ಇಲ್ಲಿ ಸ್ಮರಿಸಬಹುದು.

ಕೋ. ಚೆಯವರು ತುಂಬಾ ಕಷ್ಟದ ದಿನಗಳಲ್ಲಿ ಉತ್ತಮ ಹಂತಕ್ಕೆ ತಲುಪಿದವರು. ಆ ಹಳ್ಳಿಗಾಡಿನ ಜನರು ತಮ್ಮ ಮಕ್ಕಳಿಗೆ ಶಿಕ್ಷಣ ಕೊಡಿಸಲು ಮುಂದೆ ಬಾರದೇ ಇದ್ದಾಗಲೆಲ್ಲಾ ಕೋ. ಚೆಯವರು ವಿದ್ಯಾರ್ಥಿಗಳ ತಂದೆ, ತಾಯಿಯ ಮನವೊಲಿಸಿ ಶಾಲೆಗೆ ಸೇರಿಸುವಂತೆ ಮಾಡುತ್ತಿದ್ದರು. ಇದು ಅವರಲ್ಲಿರುವ ಶೈಕ್ಷಣಿಕ ಪ್ರೇಮದಿಂದ ಶೈಕ್ಷಣಿಕ ರಂಗಕ್ಕೆ ಸಹಾಯಕರನ್ನಾಗಿ ಮಾಡುತ್ತಿದೆ. ಇಂತಹ ಇನ್ನಷ್ಟು ಸಹಾಯವನ್ನು ಅವರಿಂದ 'ಶ್ರೀ ಶರಣಬಸವೇಶ್ವರ ಶಿಕ್ಷಣ ಸಂಸ್ಥೆ, ಕಾನಾಮಡುಗು' ಬಯಸಿದ್ದು ಅವುಗಳನ್ನು ನೆರವೇರಿಸುವ ಭರವಸೆಯನ್ನು ಕೋ. ಚೆಯವರು ನೀಡಿದ್ದು, ಅವುಗಳನ್ನು ಪೂರ್ಣಗೊಳಿಸುವ ನಿಟ್ಟಿನಲ್ಲಿ ಕಾರ್ಯೋನ್ಮುಖರಾಗಿದ್ದಾರೆಂದು ಹೇಳಬಹುದು.

**ರಾಮಕೃಷ್ಣ ವಿವೇಕಾನಂದ ಕೇಂದ್ರದ ಸ್ಥಾಪನೆ-೧೯೫೮**

ಕೋ. ಚೆಯವರು ರಾಮಕೃಷ್ಣ ಮತ್ತು ವಿವೇಕಾನಂದರ ಭಕ್ತರಾಗಿದ್ದು, ಅವರು ಒಂದು ಕೇಂದ್ರವನ್ನು ಬಳ್ಳಾರಿಯಲ್ಲಿ ತೆರೆಯುವ ಇಂಗಿತವನ್ನು ಹೊಂದಿದ್ದರು. ಅದಕ್ಕಾಗಿ ಬಳ್ಳಾರಿಯ ಗಾಂಧೀನಗರದಲ್ಲಿ ಒಂದು ಎಕರೆಗಿಂತ ಹೆಚ್ಚು ನಿವೇಶನವನ್ನು ಪಡೆಯುವಲ್ಲಿ ಸಫಲರಾದರು. ಕೋ. ಚೆಯವರ ಜೊತೆಗೆ ಅವರ ಹಿರಿಯ ವಕೀಲರಾಗಿದ್ದ, ವೇಣುಗೋಪಾಲಾಚಾರ್ಯರು ಬೆಂಬಲವಾಗಿ ನಿಂತರು. ಅಲ್ಲದೆ ಹೆಚ್. ಸೀತಾರಾಮ ರೆಡ್ಡಿಯವರಿಂದ ೫೨ ಸೆಂಟ್ಸ್ ನಿವೇಶನವನ್ನು ದಾನವಾಗಿ ಕೊಡಿಸುವಲ್ಲಿ ತುಂಬಾ ಪ್ರಯತ್ನ ಪಟ್ಟರು. ಹಾಗೇ ಆ ಜಾಗದ ಪಕ್ಕದಲ್ಲಿದ್ದ ೫೨ಸೆಂಟ್ಸ್ ನಿವೇಶನವನ್ನು ದಿವಂಗತ ರಾಘವಾಚಾರ್ಯರ (ಕೋ. ಚೆಯವರು ೧೯೪೨ರಲ್ಲಿ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿ, ಜೈಲು ಸೇರಿದಾಗ ವಕಾಲತ್ತು ವಹಿಸಿದ್ದ ಬಳ್ಳಾರಿಯ ರಾಘವ) ತಮ್ಮಂದಿರಾದ ನರಸಿಂಹಾಚಾರ್ಯರ ಮಗಳ ಕಡೆಯಿಂದ ಅಲ್ಲಂ ಸುಮಂಗಳಮ್ಮನವರು ಖರೀದಿಸಿ ನಿವೇಶನವನ್ನು ದಾನಮಾಡಿದರು. ಈ ರೀತಿ ರಾಮಕೃಷ್ಣ ಮತ್ತು ವಿವೇಕಾನಂದರ ಕೇಂದ್ರ ಸ್ಥಾಪಿಸಲು ಭೂಮಿಯನ್ನು ದಾನವಾಗಿ ಪಡೆಯುವಲ್ಲಿ ಕೋ. ಚೆ. ಯಶಸ್ವಿಯಾದರು.

ಇನ್ನು ಕಟ್ಟಡ ಕಟ್ಟಲು ಬೇಕಾದ ಧನ ಸಂಗ್ರಹಕ್ಕೆ ಕೋ. ಚೆ ಮುಂದಾದರು. ಅಂದು

"ಬಳ್ಳಾರಿಗೆ ಬರುವ ನಾಟಕ ಕಂಪನಿಗಳಿಂದ ನಾಟಕಗಳನ್ನು ಆಡಿಸಿ, ಅದರಿಂದ ಹಣ ಸಂಗ್ರಹಿಸಿದರು. ಹೀಗೆ ದಾನಿಗಳಿಂದಲೂ ಮತ್ತು ಸ್ವಂತ ಹಣವನ್ನೂ ಹಾಕಿ ೧೯೬೪ರ ಯುಗಾದಿಯ ದಿನ ಶ್ರೀ ಸ್ವಾಮಿ ಆದಿದೇವಾನಂದರಿಂದ ಕಟ್ಟಡದ ಬುನಾದಿಯ ಕಲ್ಲನ್ನು ಹಾಕಿಸಿದರು. ಮುಂದೆ ಕಟ್ಟಡವನ್ನೂ ನಿರ್ಮಿಸಲಾಯಿತು. ಹೀಗೆ ಸ್ಥಾಪನೆಯಾದ ವಿವೇಕಾನಂದರ ಕೇಂದ್ರ ಈಗ ಬಳ್ಳಾರಿಯಲ್ಲಿ ಒಂದು ಒಳ್ಳೆಯ ಸಾಮಾಜಿಕ, ಧಾರ್ಮಿಕ ಕೇಂದ್ರವಾಗಿ ನಿಂತಿದೆ ಎಂದು ಹೇಳಬಹುದು.

**ಅಡಿ ಟಿಪ್ಪಣಿ**

೧. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೧), ಸುರುಚಿ ಪ್ರಕಾಶನ, ಮೈಸೂರು, ೧೯೭೩ ಪುಟ-೨೦೪

೨. ಚೆನ್ನಬಸಪ್ಪ ಕೋ. ನಾನು ಓದಿದ ಶಾಲೆ, ಸಂವಹನ ಪ್ರಕಾಶನ, ಮೈಸೂರು, ೨೦೦೮, ಪುಟ-೫೧

೩. ಚೆನ್ನಬಸಪ್ಪ ಕೋ. ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೧), ಸುರುಚಿ ಪ್ರಕಾಶನ, ಮೈಸೂರು, ೧೯೭೩ ಪುಟ-೨೧೩

೪. ಚೆನ್ನಬಸಪ್ಪ ಕೋ. ನಾನು ಓದಿದ ಶಾಲೆ, ಸಂವಹನ ಪ್ರಕಾಶನ, ಮೈಸೂರು, ೨೦೦೮, ಪುಟ-೬೨

## ಅಧ್ಯಾಯ – ೮
## ಉಪಸಂಹಾರ

ಪ್ರಸ್ತುತ ಅಧ್ಯಯನವು ಕೋ. ಚೆಯವರ ಜೀವನ ಮತ್ತು ಸಾಧನೆಗಳನ್ನು ಕುರಿತದ್ದಾಗಿದೆ. ಅಂದರೆ ಕೋ. ಚೆಯವರ ವೈಯಕ್ತಿಕ ಬದುಕು, ರಾಜಕೀಯ ಮತ್ತು ಸಾರ್ವತ್ರಿಕ ಜೀವನದಲ್ಲಿ ಅವರನ್ನು ಗುರುತಿಸಲಾಗುತ್ತಿದೆ. ಅವರು ಲಿಂಗಾಯತ ವಂಶಸ್ಥರಾಗಿ ಸಾಮಾನ್ಯ ಮಧ್ಯಮ ಕುಟುಂಬದಲ್ಲಿ ಜನಿಸಿದರೂ ತಮ್ಮ ವೈಯಕ್ತಿಕ ವರ್ಚಸ್ಸಿನಿಂದ ಮೇಲೇರಿದ ಬದುಕನ್ನು ಇಲ್ಲಿ ಕಟ್ಟಿಕೊಡಲಾಗಿದೆ.

ಕೋ. ಚೆಯವರು ಹಳ್ಳಿಗಾಡಿನಲ್ಲಿ ಹುಟ್ಟಿ ಅಲ್ಲಿಯೇ ಪ್ರಾಥಮಿಕ ಶಿಕ್ಷಣ ಪಡೆದು ಉನ್ನತ ವ್ಯಾಸಾಂಗಕ್ಕೆ ಹೋದ ಬಗ್ಗೆ ವಿವರಿಸುತ್ತಾ ಅವರಿಗೆ ಕುವೆಂಪುರವರ ಕೃತಿಗಳಿಂದ ಸಾಹಿತ್ಯ ಲೋಕವೇ ಪರಿಚಯವಾಗಿತ್ತೆಂದು ಹೇಳಬಹುದು. ಕುವೆಂಪು ರಚಿಸಿದ, ಸ್ವಾಮಿ ವಿವೇಕಾನಂದ ಮತ್ತು ರಾಮಕೃಷ್ಣ ಪರಮಹಂಸರ ಜೀವನ ಚರಿತ್ರೆಗಳು ಕೋ. ಚೆಯವರಿಗೆ ಅಧ್ಯಾತ್ಮಿಕ ಜ್ಞಾನ ನೀಡುವಲ್ಲಿ ಸಹಕಾರಿಯಾಗಿದ್ದವು. ಈ ರೀತಿಯಾಗಿ ಬಸವಣ್ಣ, ವಿವೇಕಾನಂದ, ರಾಮಕೃಷ್ಣ ಪರಮಹಂಸ, ಗಾಂಧೀಜಿ, ಕುವೆಂಪು ಅವರ ಮೇಲೆ ಒಲವಿರಿಸಿಕೊಂಡ ಕೋ. ಚೆ ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ಜೈಲು ಶಿಕ್ಷೆ ಅನುಭವಿಸಿದ ಪ್ರಸಂಗವನ್ನು ಇಲ್ಲಿ ಚರ್ಚಿಸಲಾಗಿದೆ. ಅಲ್ಲದೆ ಚಳವಳಿಯಲ್ಲಿ ಭಾಗವಹಿಸಿದ ನಂತರದ ಜೀವನವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

ಕೋ. ಚೆಯವರ ಏಕೀಕರಣ ಚಳವಳಿಯಲ್ಲಿನ ಪಾತ್ರವನ್ನು ಕುರಿತು ಚರ್ಚಿಸುವುದು ಇಂದು ಅಗತ್ಯವಾಗಿದೆ. ಇದಕ್ಕೂ ಪೂರ್ವದಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಗಳನ್ನು ಕುರಿತು ಚರ್ಚಿಸಲಾಗಿದೆ. ಅಲ್ಲದೆ, ಏಕೀಕರಣದ ನಂತರದಲ್ಲಿ ಆಂಧ್ರ ಮತ್ತು ಕನ್ನಡಿಗರ

ಮನಸ್ಸುಗಳನ್ನು ಬೆಸೆಯುವಲ್ಲಿ ಸಾಹಿತ್ಯ ಸಮ್ಮೇಳನವನ್ನು ನಡೆಸುವುದರೊಂದಿಗೆ, ಇಂದಿಗೂ 'ಬೆಳಗಾವಿ' ಯಲ್ಲಿನ ಗಲಭೆಗಳಂತಹ ಘಟನೆಗಳನ್ನು ಬಳ್ಳಾರಿಯಲ್ಲಿ ನಡೆಯದ ಹಾಗೆ ಕೋ. ಚೆಯವರು ವಹಿಸಿದ ಪಾತ್ರವನ್ನು ಆ ಮೂಲಕ ನಡೆದ ಎಲ್ಲ ವಿದ್ಯಾಮಾನಗಳನ್ನು ಪ್ರಸ್ತುತ ಅಧ್ಯಯನದಲ್ಲಿ ತೆರೆದಿಡಲಾಗಿದೆ.

ಕೋ. ಚೆಯವರು ಕಾನೂನು ಪದವಿ ಪಡೆಯುವುದರಿಂದ ಹಿಡಿದು ಅವರು ವಕೀಲರಾಗಿ, ಜಿಲ್ಲಾ ನ್ಯಾಯಾಧೀಶರಾಗಿ ಮತ್ತು ವೃತ್ತಿಯ ನಂತರ ಕರ್ನಾಟಕದ ಉಚ್ಛನ್ಯಾಯಾಲಯದಲ್ಲಿ ನ್ಯಾಯಾಧೀಶರಾಗಿ ನಿರ್ವಹಿಸಿದ ಪ್ರಮುಖ ಕೇಸುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ. ಈ ಅಧ್ಯಾಯವು ಚರಿತ್ರೆಯಲ್ಲಿ ಒಂದು ಹೊಸ ರೀತಿಯ ಅಧ್ಯಯನವಾಗಿ ಸೇರ್ಪಡೆ ಮಾಡಲಾಗಿದೆ.

ಕೋ. ಚೆಯವರನ್ನು ಒಬ್ಬ ಚಿಂತಕರಾಗಿ, ಸಾಹಿತಿಗಳಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ, ಅವರ ಸಾಹಿತ್ಯ ರಚನೆಯ ಕುರಿತು ಚಿಂತನೆಗಳು, ಸಮಾಜ ಕುರಿತು, ಧರ್ಮ ಕುರಿತು, ನ್ಯಾಯ ಕುರಿತಾದ ಚಿಂತನೆಗಳನ್ನು ವಿಶ್ಲೇಷಿಸಲಾಗಿದೆ. ಅಲ್ಲದೆ ಕನ್ನಡ ಸಾಹಿತ್ಯಕ್ಕೆ 'ನವ್ಯ' ಸಂಪ್ರದಾಯ ರಚಿಸಿದ ಕೃತಿಗಳನ್ನು ಪರಿಚಯಿಸಿಕೊಡಲಾಗಿದೆ.

ಕೋ. ಚೆಯವರು ಸಾಹಿತಿಗಳಾಗಿ ಬರವಣಿಗೆಯನ್ನು ಆರಂಭಿಸಿದ ಕಾಲಮಾನವನ್ನು ತಿಳಿಸುವುದರೊಂದಿಗೆ ಇನ್ನೊಬ್ಬ ಬರಹಗಾರರಾಗಿ ಪಾಟೀಲ ಪುಟ್ಟಪ್ಪನವರು ಕೋ. ಚೆಯವರ ಮೇಲೆ ಕಥೆ ಬರೆಯಲು ಹಾಕಿದ ಒತ್ತಡವನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ. ಅಲ್ಲದೆ ಇವರ ಆರಂಭಿಕ ಬರವಣಿಗೆಗಳು ಕೇವಲ ಕವನ ರಚನೆಗೆ ಸೀಮಿತವಾಗಿರುವಾಗ ಅವಮಾನಿತರಾದ ಪ್ರಸಂಗವನ್ನು ಇಲ್ಲಿ ತಿಳಿಸಲಾಗಿದೆ. ಇಷ್ಟೆಲ್ಲಾ ಸಾಧನೆಮಾಡಿದರೂ ಕೋ. ಚೆಯವರ ಬಗ್ಗೆ ಸಾಕಷ್ಟು ಟೀಕೆ, ವಿಮರ್ಶೆಗಳಿವೆ. ಅವರ ವಿಷಯ ಪ್ರತಿಪಾದನೆ, ಕಠೋರತನ, ಸತ್ಯ ಪ್ರಾಮಾಣಿಕತೆ ಹೇಳಿದರೂ ಬಲ ಪಂಥೀಯರನ್ನು ಸಮರ್ಥಗೊಳಿಸಿವೆ.

ಇನ್ನು ಕೋ. ಚೆಯವರ ಬರಹಗಳನ್ನು ಕವನ ರಚನೆಕಾರನಾಗಿ, ಕಾದಂಬರಿಗಾರನಾಗಿ, ಅನುವಾದಕರಾಗಿ, ಕಥೆಗಾರನಾಗಿ ನೋಡುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಾಗೆ ಅವರಿಗೆ ಸಾಹಿತ್ಯ ರಚನೆಯಿಂದ ದೊರೆತಿರುವ ಪ್ರಶಸ್ತಿಗಳನ್ನು ತಿಳಿಸಲಾಗಿದೆ.

ಕೋ. ಚೆಯವರ ಸಮಾಜಮುಖಿ ಕಾರ್ಯಗಳನ್ನು ತಿಳಿಸಲಾಗಿದೆ. ಅವರು ಹೇಗೆ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿದ್ದಾರೆ ಮತ್ತು ರಾಮಕೃಷ್ಣ ವಿವೇಕಾನಂದ ಆಶ್ರಮ ಕೇಂದ್ರ ಸ್ಥಾಪನೆಯಲ್ಲಿ ಅವರ ಸಂಘಟನೆಯ ಕಾರ್ಯಗಳು ಹೇಗೆ ಫಲಶೃತಿ ನೀಡಿದವು ಎಂಬುದನ್ನು ಇಲ್ಲಿ ತಿಳಿಸಲಾಗಿದೆ. ಅಧ್ಯನವು ವ್ಯಕ್ತಿಯನ್ನು ಕುರಿತಾಗಿದ್ದರೂ ವಾಸ್ತವಿಕ ನೆಲೆಯಿಂದ ಸಂಶೋಧನೆಯನ್ನು ಕೈಗೊಳ್ಳಲಾಗಿದೆ. ಇಲ್ಲಿ ಯಾವುದೇ ಪೂರ್ವಗ್ರಹ, ಜಾತಿ, ಭಾಷೆ, ಪ್ರದೇಶದ ಅಭಿಮಾನ ನುಸುಳಿಲ್ಲ. ಅವರು ಇನ್ನು ಜೀವಂತವಾಗಿದ್ದರೂ ಅನೇಕ ಹೊಸ ಸಂಗತಿಗಳು ಹೊರಬರಬೇಕಾಗಿತ್ತು. ಮುಂದಿನ ಅಧ್ಯಯನಕಾರರಿಗೆ ಈ ವಿಷಯವನ್ನು ಬಿಡಲಾಗಿದೆ.

ಕರ್ನಾಟಕವನ್ನು ಕಟ್ಟಿದವರಲ್ಲಿ ಕೋ. ಚೆ ಒಬ್ಬರು. ಭಾಷೆ, ನಾಡು, ನುಡಿ, ಜಲ,

ಸ್ವಾತಂತ್ರ್ಯ, ಏಕೀಕರಣ ಚಳವಳಿಯಲ್ಲಿ ಭಾಗವಹಿಸಿ ಸಾಂಸ್ಕೃತಿಕ ಚರಿತ್ರೆಯಲ್ಲಿ ಶಾಶ್ವತ ಸ್ಥಾನ ಸ್ಥಾಪಿಸಿಕೊಂಡಿದ್ದಾರೆ. ಅವರ ಹೋರಾಟದ ಫಲವಾಗಿ ಮದ್ರಾಸ್ ಕರ್ನಾಟಕದಿಂದ ಮೈಸೂರು ರಾಜ್ಯದಲ್ಲಿ ಲೀನವಾಯಿತು. ಹೀಗೆ ಹತ್ತು ಹಲವು ಮಹಾನ್ ಕಾರ್ಯಗಳನ್ನು ಮಾಡಿದ ಕೋ. ಚೆ. ಚರಿತ್ರೆಯಲ್ಲಿ ದಾಖಲಾಗಿಲ್ಲವಾದರೂ ಜನಮನದಲ್ಲಿ ನೆಲೆಸಿದ್ದಾರೆ. ಹಾಗಾಗಿ ಅವರ ಬಗ್ಗೆ ಅಧ್ಯಯನ ಕೈಗೊಂಡು ಅವಶ್ಯಕವಿರುವ ಅನುಬಂಧಗಳನ್ನು ನೀಡುವುದರೊಂದಿಗೆ ಸೂಕ್ತ ಛಾಯಾಚಿತ್ರಗಳನ್ನು ಕೊಟ್ಟಿದೆ. ಕೊನೆಯದಾಗಿ ಈ ಸಂಶೋಧನೆಗೆ ಬಳಸಿಕೊಂಡ ಅಧ್ಯಯನದ ಸಾಮಗ್ರಿಗಳನ್ನು ಗ್ರಂಥಋಣಿಯಲ್ಲಿ ನೀಡಲಾಗಿದೆ.

ಒಟ್ಟಾರೆಯಾಗಿ ಈ ಅಧ್ಯಯನವು ಎಂಟು ಅಧ್ಯಾಯಗಳನ್ನು ಒಳಗೊಂಡಿದ್ದು ಕೋ. ಚೆಯವರ ಸಮಗ್ರ ಪರಿಚಯವನ್ನು ಮಾಡುವ ಪ್ರಾಮಾಣಿಕ ಪ್ರಯತ್ನ ಮಾಡಲಾಗಿದೆಯಾದರೂ ಈ ಸಂಶೋಧನೆಯೇ ಅಂತಿಮ ಎಂದು ಹೇಳಲಾಗುವುದಿಲ್ಲ. ಹಾಗಾಗಿ ಕೋ. ಚೆಯವರ ಮೇಲೆ ಇನ್ನೂ ಸಂಶೋಧನೆಗಳು ನಡೆಯುವ ಅವಶ್ಯಕತೆ ಇದ್ದು, ಆಸಕ್ತಿಯುಳ್ಳವರು ಈ ಮಹಾನ್ ವ್ಯಕ್ತಿಯ ಇನ್ನಷ್ಟು ಸಮಗ್ರ ಮಾಹಿತಿ ಕುರಿತ ಅಧ್ಯಯನವನ್ನು ಮುಂದುವರೆಸಬಹುದಾಗಿದೆ.

## ಅನುಬಂಧ - ೧

ಕಾವಲು ಸಮಿತಿಯ ಅಧ್ಯಕ್ಷರಿಗೆ ಕೋಪ ತರಿಸಿದ ಕೋ. ಚೆ ಪತ್ರ

### ನೂರಕ್ಕೆ ೯೮ರಷ್ಟು ಕನ್ನಡ ಯಾವೂರಲ್ಲಿ?

ಕನ್ನಡ ಕಾವಲು ಸಮಿತಿಯ ಅಧ್ಯಕ್ಷರು, ಆಡಳಿತದಲ್ಲಿ ಕನ್ನಡ ಜಾರಿಗೆ ತರಲು ಸರಕಾರ ನಿರ್ಧಾರ ಕೈಕೊಂಡಂದಿನಿಂದ ಪ್ರತಿಶತ ೯೫ರಿಂದ ೯೮ರ ಮುನ್ನಡೆದಿದೆ ಎಂದು ಕೊಟ್ಟ ಹೇಳಿಕೆಯ ಬಗ್ಗೆ ಪ್ರತಿಕ್ರಿಯೆ ವ್ಯಕ್ತಪಡಿಸುವುದೇ, ಬೇಡವೆ ಎಂದು ದೀರ್ಘಾಲೋಚನೆ ಮಾಡಿ ನಾಲ್ಕು ಮಾತು ಬರೆಯುತ್ತಿದ್ದೇನೆ.

೨೫ ವರ್ಷಗಳಲ್ಲಿ ಆಗದ ಕೆಲಸ ೩೨ವಾರಗಳಲ್ಲಿ ಆಗಿದೆ ಎಂಬುದು ನಿಜವಾಗಿದ್ದ ಪಕ್ಷದಲ್ಲಿ ಸಂತೋಷಕರ ಸಂಗತಿಯೇ. ಈ ಪವಾಡಸದೃಶ ಪ್ರಗತಿಯನ್ನು ಸಾಧಿಸಿದ ಕಾವಲು ಸಮಿತಿಯ ಅಧ್ಯಕ್ಷರು ಮತ್ತು ಅದರ ಸದಸ್ಯರು ಅಭಿನಂದನಾರ್ಹರೆ. ಕಾವಲು ಸಮಿತಿಯ ಸದಸ್ಯನಾದ ನನಗೆ ಸಂತೋಷವಾಗಬೇಕು. ಚಿಕ್ಕಮಗಳೂರು ಜಿಲ್ಲೆಯಲ್ಲಿ ಆ ಜಿಲ್ಲಾಧಿಕಾರಿಗಳು ಸಾಧಿಸಿರುವ ಪ್ರಗತಿಯನ್ನು ಮಾತ್ರ ದೃಷ್ಟಿಯಲ್ಲಿಟ್ಟುಕೊಂಡರೆ ಅವರ ಶಾಖೆ, ಅವರ ಜಿಲ್ಲೆಯ ವಿಚಾರದಲ್ಲಿ ಅಧ್ಯಕ್ಷರ ಮಾತು ಸತ್ಯವಾಗಬಹುದೇನೋ? ಅದೇ ಜಿಲ್ಲೆಯ ಇತರ ಶಾಖೆಗಳಲ್ಲಿ ಹೇಗಿದೆಯೋ ತಿಳಿಯದು.

ನನಗೆ ತಿಳಿದ ಮಟ್ಟಿಗೆ ಆಡಳಿತದಲ್ಲಿ ಕನ್ನಡ ಇನ್ನೂ ಪರಿಣಾಮಕಾರಿಯಾಗಿ ನೂರಕ್ಕೆ ೯೫ರಿಂದ ೯೮ರಷ್ಟು ಬಳಕೆಗೆ ಬಂದಿಲ್ಲ. ೨೧-೩-೮೫ರಂದು ಶಿರಾ ತಾಲೂಕು ಕಾರ್ಯಾಲಯ ಮತ್ತು ಚಳ್ಳಕೆರೆ ತಾಲೂಕು ಅಭಿವೃದ್ಧಿ ಮಂಡಳಿ ಕಾರ್ಯಾಲಯಕ್ಕೆ ಭೇಟಿಕೊಟ್ಟಿದ್ದೆ. ಶಿರಾ ತಾಲೂಕು ಕಾರ್ಯಾಲಯದಲ್ಲಿರುವ ಕನ್ನಡ ಬೆರಳಚ್ಚು ಯಂತ್ರ ಕೆಟ್ಟುಹೋಗಿ ಮೂರು ನಾಲ್ಕು ತಿಂಗಳಾಗಿದೆ ಎಂದು ತಿಳಿಯಿತು. ದುರಸ್ತಿಯಾಗಿಲ್ಲ. ಶಾಶ್ವತ ಬೆರಳಚ್ಚುಗಾರರಿಲ್ಲ. ಚಳ್ಳಕೆರೆಯ ಕಾರ್ಯಾಲಯದಲ್ಲಿ ಸೊಗಸಾದ ಬೆರಳಚ್ಚು ಯಂತ್ರ ಇದೆ. ಬೆರಳಚ್ಚುಗಾರರಿಲ್ಲ. ದಿನಗೂಲಿಯ ಮೇಲೆ ಓರ್ವ ಮಹಿಳೆ ಮೂರು ವರ್ಷಗಳಿಂದ ಕೆಲಸ ಮಾಡುತ್ತಿದ್ದಾರೆ.

೨೩-೩-೮೬ರಂದು ಜಿಲ್ಲೆ ಪೊಲೀಸ್ ಅಧಿಕಾರಿ ಭೇಟಿಯಾಗಿದ್ದರು. ಅವರ ಕಾರ್ಯಾಲಯ ದಲ್ಲಿ ಮೂರು ಇಂಗ್ಲಿಷ್ ಬೆರಳಚ್ಚು ಯಂತ್ರಗಳಿವೆ. ಒಂದು ಕನ್ನಡದ್ದು, ಬೆರಳಚ್ಚುಗಾರರಿಲ್ಲ. ಕೂಡ್ಲಿಗಿ ತಾಲೂಕು ಕಾರ್ಯಾಲಯದಲ್ಲಿಯೂ ಹೀಗೆಯೇ.

ಎಲ್ಲಕಡೆಯಲ್ಲು ಕಂಡು ಬಂದ ತೊಂದರೆ ಬೆರಳಚ್ಚುಗಾರರ ಕೊರತೆ, ಆದರೂ ಆಡಳಿತ ಕುಂಟುತ್ತ ಒಂಟೆತ್ತಿನ ಬೇಸಾಯದಂತೆ ಸಾಗಿದೆ. ಈ ಬಗ್ಗೆ ನೇಮಕ ನಿಯಮಗಳ ತಿದ್ದುಪಡಿ ಆಗಿದೆ. ಆದರೂ ಹಿಂದೆ ಇದ್ದವರನ್ನು ಕಡಿಮೆ ಮಾಡುವಂತಿಲ್ಲ. ಹೊಸಬರನ್ನು ನೇಮಕ ಮಾಡಿಕೊಂಡಿಲ್ಲ. ಸ್ಥಳಾಂತರದಿಂದ ಬೆರಳಚ್ಚುಗಾರರನ್ನು ಒದಗಿಸುವುದು ಕಷ್ಟವಾಗಿದೆ. ಅದಕ್ಕೆ ಇರುವ ತೊಂದರೆ ಆಡಳಿತ ನಡೆಸುವವರಿಗೇ ಗೊತ್ತು. ಸ್ಥಳಾಂತರವಾದವರಿಗೇ ಗೊತ್ತು.

ಈ ಬೆರಳಚ್ಚುಗಾರರ ನೇಮಕದ ತೊಂದರೆಯಲ್ಲದೆ ಕಾರ್ಯಾಲಯದಲ್ಲಿ ಈಗಲೂ ಹಳೆಯ ಇಂಗ್ಲಿಷ್ ರಿಜಿಸ್ಟರ್ ಮತ್ತು ನಮೂನೆಗಳನ್ನು ಉಪಯೋಗಿಸುತ್ತಿರುವುದು ನಡೆದೇ ಇದೆ. ಹೊಸ ನಮೂನೆಗಳನ್ನು ಅಚ್ಚು ಮಾಡಲು, ಪರಿಷ್ಕೃತ ಆಡಳಿತ ಪದಕೋಶವನ್ನು ನಿರ್ಮಿಸಲು, ಕಾನೂನು ಪುಸ್ತಕಗಳನ್ನು ಕನ್ನಡದಲ್ಲಿ ಒದಗಿಸಲು ಈ ೨೩ವಾರಗಳಲ್ಲಿ ತೀರ್ಮಾನ ಕೈಗೊಳ್ಳುವುದಲ್ಲದೆ ಬಹಳ ಮುಂದುವರಿದಿಲ್ಲ. ಬರಿಯ ಎರಡೇ ಎರಡು ತಿದ್ದುಪಡಿಗಳನ್ನು ಸೂಚಿಸಿ ನಾಲ್ಕು ತಿಂಗಳಾದರೂ ಅವು ಅಂಗೀಕಾರವಾಗಿಲ್ಲ. ಅಂದ ಮೇಲೆ ೧೦೦ಕ್ಕೆ ೯೫ರಷ್ಟು ಕನ್ನಡ ಜಾರಿಯಲ್ಲಿ ಬಂದಿದೆ ಎಂದು ಹೇಳುವುದಾದರೂ ಹೇಗೆ? ಕಾವಲು ಸಮಿತಿಯ ಅಧ್ಯಕ್ಷರೆ ಹಾಗೆ ಹೇಳಿದ ಮೇಲೆ ತೂಕಡಿಸುವ ನೌಕರರಿಗೆ ಹಾಸಿಗೆ ಹಾಸಿಕೊಟ್ಟಂತಾಯಿತು. ಕನ್ನಡದ ಕೆಲಸ ಇನ್ನೂ ಆಗಬೇಕೆನ್ನುವವರ ಬಾಯಿಗೆ ಬಟ್ಟೆ ತುರುಕಿದಂತೆ ಆಯಿತು. ಅಧ್ಯಕ್ಷರೆ ನೂರಕ್ಕೆ ೯೮ರಷ್ಟು ಆಗಿದೆ ಅಂದ ಮೇಲೆ ಯಾರಿಂದ ಆಕ್ಷೇಪಣೆ ಎತ್ತಲಾದೀತು?

–ಕೋ. ಚೆನ್ನಬಸಪ್ಪ

ಕೃಪೆ: *ಕೋಚೆ ಯಾರು, ಏನು ಎಂತು? ಕೃತಿಯಿಂದ*

## ಅನುಬಂಧ - ೨

**ಅನಂತಪುರ ಸರ್ಕಾರಿ ಕಾಲೇಜಿನ ರಸಾಯನ ಶಾಸ್ತ್ರ ಪ್ರಯೋಗ ಶಾಲೆಗೆ ಬೆಂಕಿ ಹಚ್ಚಿದ ಆರೋಪದ ಮೇಲೆ ವಿಚಾರಣೆಗೆ ಗುರಿಯಾಗಿದ್ದ ಆರೋಪಿಗಳ ವಿವರ ನ್ಯಾಯಾಲಯದ ರಿಜಿಸ್ಟರ್‌ನಿಂದ**

**IN THE COURT OF THE SPECIAL JUDGE, ANANTHAPUR**

**ORDINANCE CASE No.II of 42**

**Description of the assused.**

| S.No. | Name & Father 's name | Caste | Occuption | Redicence | Age |
|---|---|---|---|---|---|
| 1. | A.B.R. Kotra Goed<br>S/o Veerappa | Lingayat. | Student | Arasanalu | 22 |
| 2. | V.K. Adinarayana Reddy<br>S/o Ranagappa | Kapu | -do- | Chimalanagupalli | 23 |
| 3. | Ko. Chennabasappa<br>S/o Veeranna | Lingayat | -do- | Alur | 21 |
| 4. | S.P . Nagi reddy<br>S/o Srivarami Reddy | Kapu | -do- | Seehavi | 19 |
| 5. | K.Thirumalareddy<br>S/o Banka Reddy | Kapu | -do- | Chamalagudur | 19 |
| 6. | N.Rajasekhare Reddy<br>S/o Chinnappa Reddy | Kupu | Agriculture | Illur | 24 |
| 7. | Sadasivan<br>S/o Chennappa | Lingayat | Harijan worker | Ananthapur | 29 |
| 8. | Venkatapp<br>S/o Obeyya | Boya | Employee in a Press | Ananthapur | 25 |
| 9. | Sri G. Venkata Reddy<br>S/o Venkatareddy | Kamma | Advocate | Ananthapur | 32 |
| 10. | Sri K.S. Raghavachar<br>S/o Krishnamachar | Brahmin | Pleader Detenue | Ananthapur | 53 |
| 11. | Nanjappa<br>S/o Pathrappa | Lingayat | Student | Kottur | 20 |
| 12. | N.C.Gangireddi<br>S/o Chinagireddy | Kapu | Student | Kamalanagar | 18 |
| 13. | Mallappa<br>S/o Nagaiah | Lingayat | Student | Kamalanagar | 21 |

Date of Occurrence. 10-9-1942. Complaint 26-9-1042. Before the S.S.M. Ananthpur. In this Court 14-11-1942, Apprehension or Appearance A-! to A-4 0n 13-9-1042. A0 on 15-9-1942 A-11 was a detenue. A-12 on 22-9-1942, A-13 on 7-10-1942.

**Note:** *A-10 and A-11 were directed to detained as detenues under Defence of india Rules, were sentenced in a case under Defence of India Rules.*

Release on Bail: Nil. Date of Trial-14-12-1942.
Close of Trial: 16-12-1942. Order – 17-12-1942.

Noted below who Signed(not legible).........

Sheristedar
30-12-1942

*ಕೃಪೆ : ಕೋಟೆ ಯಾರು ಏನು ಎಂತು? ಕೃತಿಯಿಂದ*

## ಅನುಬಂಧ - ೩

## ರಾಜಕೀಯ ಸಂತ್ರಸ್ತರು ಸರ್ಕಾರ ಕೊಡಬೇಕಿದ್ದ ಭೂಮಿಯನ್ನು ಆಯ್ಕೆ ಮಾಡಿಕೊಳ್ಳಲು ಕೋ. ಚೆಯವರಿಗೆ ಜಿಲ್ಲಾಧಿಕಾರಿ ಕಳಿಸಿದ್ದ ಪತ್ರ

**OFFICE OF THE DISTRIGT COLLECTOR**

**BELLARY**

R.C.No.A 3 4600/4

Dated:17-12-1948

**MEMO**

**Sub :** Land grant to Political Sufferers Bellary District Date of next meeting of the Advisory Committeeintimated.

It has been decided to hold the next meeting of the Political Sufferers Advisory Committee on 3-1-1942 in the collector's Court Hall. The person noted below who are not classified as Political Sufferers by the committee are requested to appear before the Committee with particulars of conviction and other testimonials. And other testimonials. And name of the Village may also be furnished to speed up the allotment of lands.

Sri. K.Chennabasappa, Vakeel, Bellary

BY ORDER HUZUR HEAD CLERK

Sd/. K.H. Anantharaman

*ಕೃಪೆ: ಕೋಚೆ ಯಾರು ಏನು ಎಂತು? ಕೃತಿಯಿಂದ*

# ಅನುಬಂಧ - ೪

## ಕೋ. ಚೆ ಚುನಾವಣೆಗೆ ನಿಂತಾಗ ಬೀಚಿ

ಶ್ರೀ. ಕೋ. ಚೆನ್ನಬಸಪ್ಪನವರು ಚುನಾವಣೆಗೆ ನಿಂತದ್ದು ನನಗೆ ಆಶ್ಚರ್ಯವನ್ನೂ, ಆನಂದವನ್ನೂ ಉಂಟು ಮಾಡಿತು. ಆಶ್ಚರ್ಯ: ಅವರು ರಾಜಕೀಯದಿಂದ ದೂರವಾಗಿ ದೀರ್ಘಕಾಲದ ಮೇಲೆ ರಾಜಕೀಯಕ್ಕೆ ಇಳಿದದ್ದು. ಆನಂದ: ಒಳ್ಳೆಯವರು ರಾಜಕೀಯದಲ್ಲಿ ಪಾಲ್ಗೊಂಡರೆ ಒಂದಿಷ್ಟು ಒಳ್ಳೆಯದಾಗಬಹುದೆಂಬ ನಿರೀಕ್ಷೆ.

ಶ್ರೀ ಕೋ. ಚೆನ್ನಬಸಪ್ಪನವರು ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ಧುಮುಕಿ ತುರಂಗದಲ್ಲಿದ್ದಾಗ, ಸರಕಾರೀ ನೌಕರಿ ಮಾಡುತ್ತಿದ್ದು ಸಕ್ಕರೆ ತುಪ್ಪ ಹೊಡೆಯುತ್ತಿದ್ದರು. ಎಂ.ಎಲ್.ಸಿ., ಎಂ.ಎಲ್.ಎ., ಎಂ.ಪಿ ಆದರು. ಏಕೀಕರಣ ಚಳವಳಿಯಲ್ಲಿ ಮನೆ ಸುಟ್ಟುಕೊಂಡ ಶ್ರೀ ಕೋ. ಚೆ. ರಾಜಕೀಯದಲ್ಲಿ ಕಣ್ಮರೆಯಾಗಿ, ಏಕೀಕರಣ ವಿರೋಧಿಗಳು ಮಂತ್ರಿಗಳಾದರು. ಯೋಗ್ಯತೆಯಲ್ಲಿಯಾಗಲಿ, ಪ್ರಾಮಾಣಿಕತೆಯಲ್ಲಿಯಾಗಲಿ ಅವರ ಹಿಮ್ಮಡದ ಎತ್ತರಕ್ಕೂ ಬಾರದವರು ಏನೇನೋ ಆಗಿ ಹೋದರು. ಶ್ರೀ ಕೋ. ಚೆ. ಏನೂ ಆಗಲಿಲ್ಲ. ಏಕೆ? ನುಗ್ಗಿ ಹೋಗಿ ತೋರಿಸಿಕೊಳ್ಳುವ ಸಣ್ಣತನ ಅವರದಲ್ಲ. ನಾಡೇ ಅವರನ್ನು ಗುರುತಿಸಿ ಗೌರವಿಸಬೇಕು.

ನನ್ನ ನೆನಪು ೩೩ ವರ್ಷಗಳ ಹಿಂದೆ ಹೋಗುತ್ತದೆ. ಬಳ್ಳಾರಿಯಲ್ಲಿ ನಾವಿಬ್ಬರೂ ಮಧ್ಯರಾತ್ರಿಯವರೆಗೆ ಕುಳಿತು ಏಕೀಕರಣದ ವಿಚಾರ, ಸುಂದರ ಕರ್ನಾಟಕವನ್ನು ಕಟ್ಟುವ ಕನಸು ಕಟ್ಟುತ್ತಿದ್ದ ಆ ದಿನಗಳು ನೆನಪಾಗುತ್ತವೆ. ಕರ್ನಾಟಕವೇನೋ ಆಯಿತು. ಆದರೆ ಇಲ್ಲಿ ಕನ್ನಡಕ್ಕೆ, ಕನ್ನಡಿಗರಿಗೆ ಸಲ್ಲಬೇಕಾದ ಸ್ಥಾನ ಸಿಕ್ಕಿದೆಯೇ? ಇದು ಅಸಲು ಪ್ರಶ್ನೆ. ಶ್ರೀ ಕೋ.ಚೆ ವಿಧಾನಪರಿಷತ್ತಿನಲ್ಲಿದ್ದರೆ ಕೊರಗಿದ ಕನ್ನಡ ದನಿಗೆ ಬಾಯಿ ಬಂದೀತು.

ಶ್ರೀ. ಕೋ. ಚೆಯವರನ್ನು ತಿಳಿಯದ ಯಾವ ಶಿಕ್ಷಕನೂ ಇರಲಾರ. ಅಂಥವರಾದರೂ ಅವರನ್ನು ಆರಿಸಿಕಳಿಸುವರೆಂಬ ಆಸೆ ನನ್ನದು. ಬುದ್ಧಿಜೀವಿಗಳಾದ ಶಿಕ್ಷಕರು ಬುದ್ಧಿ ಜೀವಿಯಾದ ಬರಹಗಾರನಿಗೆ ಪುರಸ್ಕಾರ ಕೊಡದಿದ್ದರೆ ಮತ್ತಾರು ಕೊಡಬೇಕು.?

— ಬೀಚಿ

*ಕೃಪೆ: ಕೋಚೆ ಯಾರು ಏನು ಎಂತು? ಕೃತಿಯಿಂದ*

ಅನುಬಂಧ - ೫

# ರೈತ

RYTA KANNADA WEEKLY, BELLARY.

ಅತ್ಯುತ್ತಮ ವಾರ ಪತ್ರಿಕೆ
"ರೈತ"
ನಿಮ್ಮ ಮೆಚ್ಚುಗೆಯ "ರೈತ" ಪತ್ರಿಕೆಗೆ
ಕೂಡಲೇ ಚಂದಾದಾರರಾಗಿರಿ!

| ನಡೆಸುತ್ತಿರುವ ... ಕೊಡಲಾಗಿದೆ.] ... ಮಹಾ | ೧೫—೮—೧೯೪೯ | ಸಂಚಿಕೆ ೧ |
| --- | --- | --- |

— ಸಂಪಾದಕರು —
ಕೋ. ಚೆನ್ನಬಸಪ್ಪ B.A., LL. B.,



ನಮಗೆ ಸ್ವಾತಂತ್ರ್ಯವನ್ನು ಕೊಟ್ಟ
ಪೂಜ್ಯ ಬಾಪೂಜಿ

## ಓ ರೈತ ಬಾಂಧವರೇ ಬನ್ನಿ ವಿಜಯೋತ್ಸವಕೆ

ನಿನಗಾಗಿ ಈ ಉತ್ಸವಂ ಸಂಭ್ರಮಂ ವಿಜಯಂ.
ನಿನಗಿಲ್ಲದೀ ವಿಜಯ ಬರಿ ಹೆಣದ ಶೃಂಗಾರ!
ಹರಿಜನರ ಹೊರಗಿರಿಸಿ ದೈವ ಪೂಜೆಯ ಗೈಪ್ಪೆ-
ವೆಂದು ಬಾರಿಸಿಕೊಂಡ ಶುಷ್ಕ ಘಂಟೆಯಸದ್ದು!
ಭಕ್ತಿಯಿಲ್ಲದ ಬರಿಯ ಡಾಂಭಿಕರ ಆಚಾರ!
ಬಿಳಿಯಾರಾಳ್ವಿಕೆಯಿಂದ ಬಿಡುಗಡೆಯ ಪಡೆದೆವೆಂ-
ದೆಂಬ ಸಂಭ್ರಮಂ ಸಾಲದೀ ಹೊತ್ತಿನಲಿ ಕರಿಯ-
ರಾಳ್ವಿಕೆಯ ತುಳಿತಕ್ಕೆ ಗುರಿಯಾಗದೊಲು
ಜಾಗ್ರತೆಯ ವಹಿಸುವುದು! ಕಬ್ಬಿಣದ ಕಡಿವಾಣಮಂ
ತೆಗೆದು ಬಿಳಿ ಸವಾರನ ನಿಸ್ಸ ಬೆನ್ನಮೇಲಿಂ ಇಳಿಚಿ
ಸ್ವರ್ಣ ವಾಘೆಯ ತೊಡಿಸಿ ಮೊಗಕೆ ಮುದ್ದಿಟ್ಟು
ಮರಳಿ ನಿನ್ನಂ ದುಡಿವ ಹಯವಾಗಿ ಮಾಳ್ಪ
ಒಳಸಂಚುಗಳನೆಲ್ಲ ಸ್ಫೋಟನಂಗೈಯ್ಯಲ್ಕೆ
ಮುನ್ನುಗ್ಗಿ ಬನ್ನಿ ಓ ರೈತಬಾಂಧವರೇ!
ನಿಮಗಾಗಿ ಮಡಿದ ವೀರರಿವೆರಳುತ ಬರಿದೆ
ನಿಷ್ಕಾರಣಂ ಸುರಿಯಿತೆಂದಳಲುವಪರಿಯು
ಗೈಯ್ಯದಿರಿ ನಿಮ್ಮ ಮೌಢ್ಯದಿಂ. ರೈತ ರಾಜ್ಯದ
ಶಂಕುಸ್ಥಾಪನೆಗೆ ಬನ್ನಿ ನೀವ್ ಹಿಂದುಳಿಯದಿರಿ
ಆಗ ಈ ವಿಜಯ ಸಾರ್ಥಕಂ ತಾನಾದವುದು.

—ಕೋ. ಚೆ.

ಪುಟ: ೨೦ — ಬೆಲೆ: ೨ ಆಣೆ

## ದ್ವಿತೀಯ ಸ್ವಾತಂತ್ರ್ಯೋತ್ಸವ ವಿಶೇಷ ಸಂಚಿಕೆ

# ಅನುಬಂಧ – ೬

## ಕೋ. ಚೆ. ಅವರ ಕೃತಿಗಳು

**ಕವನ ಸಂಗ್ರಹಗಳು**

೧. ಸ್ವಾತಂತ್ರ್ಯ ಮಹೋತ್ಸವ

೨. ಪ್ರಾಣಪಕ್ಷಿ

೩. ಜೀವತೀರ್ಥ

೪. ಹೃದಯ ನೈವೇಧ್ಯ

**ಸಣ್ಣ ಕಥೆಗಳು**

೧. ಗಡೀಪಾರು

೨. ನಮ್ಮೂರ ದೀಪ

೩. ಆ ಮುಖ ಈ ಮುಖ

೪. ಗಾಯಕನಿಲ್ಲದ ಸಂಗೀತ

೫. ಉಂಡವಣೆ ಜಾಣ

೬. ನ್ಯಾಯಲಯದ ಸತ್ಯಕಥೆಗಳು

**ಕಾದಂಬರಿಗಳು**

೧. ಹಿಂದಿರುಗಿ ಬರಲಿಲ್ಲ

೨. ದಿವಾನ್ ಬಹದ್ದೂರ್

೩. ನೊಗಿದ ನೇಣು

೪. ರಕ್ತ ತರ್ಪಣ

೫. ಪೂರ್ಣವತಿ

೬ ಶ್ರೀ ಕೃಷ್ಣದೇವರಾಯ

೭ ಬೆಳಕು ಹರಿಯಿತು (ತುರ್ತು ಪರಿಸ್ಥಿತಿಯನ್ನು ಕುರಿತು)

೮. ಬೇಡಿ ಕಳಚಿತು–ದೇಶ ಒಡೆಯಿತು

೯. ನ್ಯಾಯದ ಬಲದಲ್ಲಿ (ಅಪ್ರಕಟಿತ)

**ಜೀವನ ಚರಿತ್ರೆ**

೧. ಸ್ವಾತಂತ್ರ್ಯಯೋಧ ಶ್ರೀ ಅರವಿಂದ

೨. ಚೈತನ್ಯಮಯಿ ಶ್ರೀಮಾತಾ

೩. ಶ್ರೀಮಾತಾ (ಮೂಲ: ಶ್ರೀ ಅರವಿಂದರು ಅನುವಾದ)

೪. ಬಾಲಕರ ಶ್ರೀ ಅರವಿಂದ

೫. ಪೂರ್ಣಯೋಗಿ ಶ್ರೀ ಅರವಿಂದ

೬. ಶ್ರೀ ಅರವಿಂದ (ಬಾಲಭಾರತಿ)

೭. ಶ್ರೀಮಾತಾಜಿ (ಬಾಲಭಾರತಿ)

೮. ಶ್ರೀ ಮೃತ್ಯುಂಜಯ ಸ್ವಾಮಿಗಳು

೯. ಯುಗ ಪುರುಷ ಶ್ರೀ ಅರವಿಂದ

**ವಿಮರ್ಶೆ–ನಾಟಕ–ಪ್ರಬಂಧ–ಇತರೆ**

೧. ಶ್ರೀ ರಾಮಕೃಷ್ಣ ಲೀಲಾ ನಾಟಕಂ

೨. ಶ್ರೀ ರಾಮಯಾಣ ದರ್ಶನಂ ಮಹಾಕಾವ್ಯ ಸಮೀಕ್ಷೆ (ದೇ.ಜ.ಗೌ. ಟ್ರಸ್ಟ್ ಬಹುಮಾನಿತ ಗ್ರಂಥ)

೩. ಬೆಳಕಿನೊಂದಿಗೆ

೪. ನಮಗೆ ಬೇಕಾದ ಸಾಹಿತ್ಯ

೫. ದಕ್ಷಿಣೇಶ್ವರ ದರ್ಶನ (ಪ್ರವಾಸ)

೬. ದೃಢ ಪ್ರತಿಜ್ಞೆ

೭. ಈ ರಾಜ್ಯದೊಡೆಯ ರೈತ

೮. ಖಜಾನೆ (ವಯಸ್ಕರಗಾಗಿ ಅರ್ಥಶಾಸ್ತ್ರ)

೯. ಸಹಕಾರವೆ ಸುಖದ ದಾರಿ

೧೦. ಶ್ರೀ ಅರವಿಂದರು ಮತ್ತು ಅವರ ಆಶ್ರಮ

೧೧. ಬಲ್ಲವರೊಡನೆ (ವ್ಯಕ್ತಿ ಚಿತ್ರಗಳು)

೧೨. ಧೀನಬಂಧು ಬಸವಣ್ಣ

೧೩. ಎಸ್, ನಿಜಲಿಂಗಪ್ಪ: ಒಂದು ಅಧ್ಯಯನ

**ಅನುವಾದಗಳು**

೧. ದಿವ್ಯ ಜೀವನ (ಶ್ರೀ ಅರವಿಂದ "ಲೈಫ್ ಡಿವೈನ್" ಗ್ರಂಥದ ಭಾಷಾಂತರ)

೨. ಸಾವಿತ್ರಿ (ಮೂಲ ಶ್ರೀ ಅರವಿಂದರ ಮಹಾಕಾವ್ಯದ ಕನ್ನಡಾನುವಾದ)

೩. ಕೃತಿ ಸಾರ ಸಂಗ್ರಹ (ವಿವೇಕಾನಂದರ ಸಮಗ್ರ ಕೃತಿಯ ಸಂಗ್ರಹಾನುವಾದ)

೪. ಸಾವಿತ್ರಿ–ಮಹಾಕಾವ್ಯ ಪರಿಚಯ ಪ್ರಬಂಧ ಸಂಕಲನ

೫. ಸ್ವಾಮಿಜೀಯ ಪತ್ರಗಳು

೬. ಕಡಲತಡಿಯಿಂದ ಹೈಮಾಚಲವೆಡೆಗೆ

೭. ಸ್ವಾಮಿಜಿಯ ಸಿಂಹವಾಣಿ

೮. ಶ್ರೀ ರಾಮಕೃಷ್ಣರ ದೃಷ್ಟಾಂತ

೯. ಹಿಂದೂಧರ್ಮ (ಮೂಲ:ಡಾ, ರಾಧಕೃಷ್ಣನ್)

೧೦. ಸಂಸಾರ ಯೋಗ (ಶ್ರೀ ರಾಮಕೃಷ್ಣರು ಗೃಹಸ್ಥರಿಗಾಗಿ ಮಾಡಿದ ಉಪದೇಶ)

೧೧. ಆದರ್ಶ ,ನಾಗರಿಕ–ಮೂ. ಸ್ವಾಮಿ ರಂಗನಾಥಾನಂದಜಿ

೧೨. ಜಗಜ್ಜನನಿ ಭಾರತ

೧೩. ಅಶೋಕನ ಶೀಲಾ ಶಾಸನಗಳು

೧೪. ಭಾರತೀಯ ಘಟನೆ (ಪ್ರಶ್ನೋತ್ತರ ರೂಪದಲ್ಲಿ)

೧೫. ಆಂಧ್ರ ಕಥಾ ಮಂಜೂಷ

೧೬. ಧರ್ಮವರಂ ರಾಮಕೃಷ್ಣಮಾಚಾರ್ಯ

೧೭. ಮಿಶ್ರಾ ಕಮೀಟಿಯ ವರದಿಯ ಕನ್ನಡ ಅನುವಾದ

**ಸಂಪಾದಿತ**

೧. "ರಕ್ಷಾಶತಕಂ"

೨. ಶ್ರೀ ಕುವೆಂಪು ಸಂದರ್ಶನ

೩. ಶ್ರೀ ಕುವೆಂಪು ಭಾಷಣಗಳು ಬಿನ್ನವತ್ತಳೆಗಳು

೪. ಹಿಂದೂಧರ್ಮ ರಕ್ಷಕ ಟಿಪ್ಪುಸುಲ್ತಾನ್

೫. ಶ್ರೀ ವಿವೇಕಾನಂದ ಹಿಂದು ಸನಾನತ ವಾದಿಯೆ?

೬. ರೈತ ಪತ್ರಿಕೆ

**ಇತರೆ**

೧. ನನ್ನ ಮನಸ್ಸು-ನನ್ನ ನಂಬುಗೆ ಭಾಗ ೧-೨
(ನಿವೃತ್ತೋತ್ತರ) ಆತ್ಮಕಥೆ

೨. ನ್ಯಾಯಧೀಶನ ನೆನಪುಗಳು

೩. ಕೋ. ಚೆ. ನ್ಯಾಯದೃಷ್ಟಿ

೪. ಕೋ. ಚೆ. ಸಾಹಿತ್ಯ ಸಮಾಜ ಧರ್ಮ ದೃಷ್ಟಿ

೫. ಪ್ರಾಥಮಿಕ ಶಿಕ್ಷಣ-ಮೂಲಭೂತ ಹಕ್ಕು

೬. ಹಿಂದುಳಿದವರು ಯಾರು ?

೭. ಜಿಲ್ಲಾ ಪರಿಷತ್ತು ಮತ್ತು ಮಂಡಲ ಪಂಚಾಯ್ತಿಗಳು

೮. Havenur Report-Its Fallacy

೯. ನಾನು ಓದಿದ ಶಾಲೆ

<u>ಅನುಬಂಧ - ೭</u>

**ಕೋ. ಚೆ ಜೀವನದ ಪ್ರಮುಖ ಘಟನೆಗಳು**

೧೯೨೨ ಬಳ್ಳಾರಿ ಜಿಲ್ಲಾ ಕೂಡ್ಲಿಗಿ ತಾಲೂಕು ಆಲೂರು ಮುಜರಾಯಿ ಗ್ರಾಮ ಕಾನಾಮಡುವಿನಲ್ಲಿ ಜನನ, ತಂದೆ ಶ್ರೀ ಕೋ. ವೀರಣ್ಣ, ತಾಯಿ ಶ್ರೀಮತಿ ಬಸಮ್ಮ.

೧೯೨೭-೩೧ ಪ್ರಾಥಮಿಕ ಶಿಕ್ಷಣ ಕಾನಾಮಡುಗಿನಲ್ಲಿ.

೧೯೩೧-೩೪ ಮಾಧ್ಯಮಿಕ ಶಿಕ್ಷಣ ಶ್ರೀ ಶರಣಬಸವೇಶ್ವರ ಹೈಯರ್ ಎಲಿಮೆಂಟರಿ ಶಾಲೆ, ಕಾನಾಮಡುಗು.

೧೯೩೫-೩೯ ಹೈಸ್ಕೂಲ್ ಶಿಕ್ಷಣ ಮುನಿಸಿಪಲ್ ಹೈಸ್ಕೂಲ್, ಬಳ್ಳಾರಿ.

೧೯೩೯-೪೪ ಕಾಲೇಜು ಶಿಕ್ಷಣ ದತ್ತಮಂಡಲ(ಈಗಿನ ಸರ್ಕಾರಿ)ಕಲಾ ಶಾಲೆ, ಅಂನತಪುರ (ಆಂಧ್ರ ಪ್ರದೇಶ )

೧೨-೯-೧೯೪೨ ಚಲೇಜಾವ್ ಚಳವಳಿಯಲ್ಲಿ ಭಾಗವಹಿಸಿದ್ದರು.

೧೭-೧೨-೧೯೪೨ ಅನಂತಪುರ ವಿಶೇಷ ನ್ಯಾಯಾಲದಲ್ಲಿ ಭಾರತ ಸಂರಕ್ಷಣ ಕಾಯಿದೆಯ ಕೆಳಗೆ ವಿಚಾರಣೆ, ಬಿಡುಗಡೆ.

೧೯೪೨ ಸರೋಜಮ್ಮನವರ ಜೊತೆಗೆ ವಿವಾಹ.

೧೯೪೪-೪-೬ ಕಾನೂನು ವಿದ್ಯಾಭ್ಯಾಸ ಆರ್. ಎಲ್. ಲಾ ಕಾಲೇಜ್.

೧೯೪೫ ಬೆಳಗಾಂ ಏಕೀಕರಣ ಮಹಾಸಮಿತಿಯ ಕಾರ್ಯಕಾರಿ ಸಮಿತಿಯ ಸದಸ್ಯ.

೧೨-೧೧-೧೯೪೬ ಮುಂಬೈ ಉಚ್ಚ ನ್ಯಾಯಲಯದಲ್ಲಿ ಅಡ್ವೋಕೆಟ್ ಆಗಿ ಸನದ್ ಪಡೆದದ್ದು.

೧೯೪೬-೧೯೬೫ ಬಳ್ಳಾರಿಯಲ್ಲಿ ವಕೀಲ ವೃತ್ತಿ.

೧೯೪೭ ಪೂರ್ವ ಕರ್ನಾಟಕ ಏಕೀಕರಣ ಪರಿಷತ್ತಿನ ಸ್ಥಾಪನೆ.

೧೯೪೮ ಧರ್ ಸಮಿತಿಯ ಮುಂದೆ ಪ್ರಾಂತ ನಿರ್ಮಾಣದ ಬಗ್ಗೆ ನಿಯೋಗ.

೧೯೪೮-೧೯೬೨ ರೈತ ಪ್ರತಿಕೆ ಸಂಪಾದಕರಾಗಿದ್ದರು.

೧೯೫೨ ನ್ಯಾಯಮೂರ್ತಿ ವಾಂಛೂ ಸಮಿತಿ ಮುಂದೆ ಬಳ್ಳಾರಿ ಕ್ರಿಯಾ ಸಮಿತಿಯ ವತಿಯಿಂದ ನಿಯೋಗ.

೧೯೫೨ ಪ್ರಥಮ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧೆ, ಸೋಲು.

೧೯೫೩ ನ್ಯಾಯಮೂರ್ತಿ ಎಲ್.ಎಸ್. ಮಿಶ್ರ ಆಯೋಗದ ಮುಂದೆ ಬಳ್ಳಾರಿ ಪರವಾಗಿ ಮನವಿ ಸಮರ್ಪಣೆ, ಮೈಸೂರು ಶಾಸಕರಿಂದ ಸಹಿ ಸಂಗ್ರಹಣೆ.

೧-೧೦-೧೯೫೩ ಬಳ್ಳಾರಿ ವಿಲೀನ ಕರ್ನಾಟಕ ಪ್ರಾಂತ ರಚನೆಗೆ ನಾಂದಿ, ಮನೆಗೆ ಕಿಡಿಗೇಡಿಗಳಿಂದ ಬೆಂಕಿ.

೧೯೫೬ ರಾಜ್ಯ ಪುನರ್ವಿಂಗಡನಾ ಸಮಿತಿಯ ಮುಂದೆ ಬಳ್ಳಾರಿ ಕರ್ನಾಟಕ ಕ್ರಿಯಾ ಸಮಿತಿಯ ಅಹವಾಲಿನ ಮಂಡನೆ, ಅಖಿಲ ಕನಾಟಕ ರಾಜ್ಯ ನಿರ್ಮಾಣ ಪರಿಷತ್ತಿನ ಸದಸ್ಯ.

೧೯೫೬ ತುಂಗಭದ್ರಾ ಕಾಲುವೆ ನೀರಿನ ಸತ್ಯಗ್ರಹದ ಸಂಚಾಲಕ.

೧೯೫೬-೬೫ ಬಳ್ಳಾರಿ ಜಿಲ್ಲಾ ವಯಸ್ಕರ ಶಿಕ್ಷಣ ಸಮಿತಿಯ ಕಾರ್ಯದರ್ಶಿ, ಪಂಪಾ ವಿದ್ಯಾಪೀಠದ ಸ್ಥಾಪನೆ.

೧೯೫೮ ೩೮ನೇ ಕನ್ನಡ ಸಾಹಿತ್ಯ ಸಮ್ಮೇಳನದ ಕಾರ್ಯದರ್ಶಿ.

೧೯೫೯-೧೯೬೧ ಮೈಸೂರು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯ.

೧-೩-೧೯೬೨ ಬಳ್ಳಾರಿ ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್.

೯-೧೨-೧೯೬೬ ಜಿಲ್ಲಾ ಮತ್ತು ಸೆಶನ್ ನ್ಯಾಯಧೀಶ.

೧೯೭೪ "ಶ್ರೀ. ರಾ.ದ. ಮಹಾಕಾವ್ಯ ಸಮೀಕ್ಷೆ" ಗ್ರಂಥಕ್ಕೆ ದೇಜಗೌ ಟ್ರಸ್ಟ್ ಪ್ರಶಸ್ತಿ ಪ್ರಾಪ್ತಿ.

೧-೩-೧೯೭೭ ಜಿಲ್ಲಾ ನ್ಯಾಯಾಧೀಶರಾಗಿ ನಿವೃತ್ತಿ ಮತ್ತು ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ವಕೀಲರಾಗಿ ಕಾರ್ಯ ನಿರ್ವಹಣೆ.

೧೯೭೭-೮೫ ಬಿ.ಇ.ಎಲ್. ಕರ್ನಾಟಕ ಕಾರ್ಮಿಕ ಹಿತಾರಕ್ಷಣಾ ಸಮಿತಿ ಅಧ್ಯಕ್ಷ

೧೯೮೦ ಶಿಕ್ಷಕರ ಕ್ಷೇತ್ರದಿಂದ ಚುನಾವಣೆಯ ಕಣಕ್ಕೆ ಮತ್ತು ಸೋಲು.

೧೯೭೭ ರಾಮದುರ್ಗ ಬೆಂಗಳಿಗಿ ವಾಣಿಜ್ಯ ವಿದ್ಯಾಲಯದಲ್ಲಿ ಸನ್ಮಾನ.

೧೯೭೯ ಕನ್ನಡ ಆಡಳಿತ ಭಾಷಾ ಕ್ರಿಯಾಸಮಿತಿ ಅಧ್ಯಕ್ಷ.

೧೯೭೯ ಕರ್ನಾಟಕ ಸಾಹಿತ್ಯ ಆಕಾಡೇಮಿ ಪ್ರಶಸ್ತಿ.

೧೯೮೩ ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಪ್ರೊ. ಮಾಳವಾಡ ಸಾಹಿತ್ಯ ಪ್ರಶಸ್ತಿ ಪುರಸ್ಕಾರ "ದಿವ್ಯ ಜೀವನ" ಗ್ರಂಥಕ್ಕೆ.

೧೯೮೩-೮೬ ಕರ್ನಾಟಕ ಸಾಹಿತ್ಯ ಆಕಾಡೆಮಿ ಸದಸ್ಯ.

೧೯೮೬ ಹುಬ್ಬಳ್ಳಿ ಮೂರು ಸಾವಿರ ಮಠದ ಶ್ರೀ ಜ. ಗಂಗಾಧರ ಧರ್ಮ ಪ್ರಚಾರರ ಗ್ರಂಥ ಪುರಸ್ಕಾರ ಸಮಿತಿ ಮತ್ತು ಶ್ರೀ ಚಿತ್ರರಾಗಿ ಸಂಸ್ಥಾನಮಠ ಇಳಕಲ್ ಇವರಿಂದ 'ಧೀನ ಬಂಧು ಬಸವಣ್ಣ' ಗ್ರಂಥಕ್ಕೆ ಪುರಸ್ಕಾರ.

೧೯೯೨ ಸ್ವಾತಂತ್ರ್ಯ ಹೋರಾಟಗಾರರ ಪಿಂಚಣಿ ಪಡೆಯಲು ಹೆಗಡೆಯವರಿಂದ ಒತ್ತಾಯ ಪಿಂಚಣಿಯ ಅರ್ಜಿ ಭರ್ತಿ.

೨೦೦೩ ಪಿಂಚಾಣಿ ನೀಡದ ಕಾರಣ ಕೋರ್ಟಿನಲ್ಲಿ ರಿಟ್ ಅರ್ಜಿ ದಾಖಲು, ಬಂದ ಹಣದಿಂದ ಕೋ. ಚೆ 'ಸಾಹಿತ್ಯ ಮತ್ತು ಸಂಸ್ಕೃತಿ ಟ್ರಸ್ಟ್

೨೦೦೬ ಸುವರ್ಣಾ ಕರ್ನಾಟಕ ಪ್ರಶಸ್ತಿ ಪ್ರಧಾನ.

೨೦೦೮ ಕೋ. ಚೆ. ಪ್ರಸಾದ ನಿಲಯದ ಸ್ಥಾಪನೆಯ ಉದ್ದೇಶ.

೨೦೦೯ ಕೋ. ಚೆ ಪ್ರಸಾದ ನಿಲಯದ ಅನಾವರಣ.

## ಗ್ರಂಥಋಣ


೧. ಅಮರೇಶ್ ಮಗಡೋಣಿ (ಸಂ.,) **ಕನ್ನಡ ಅಧ್ಯಯನ ಸಂಪುಟ–೧೩, ಸಂಚಿಕೆ–೨** ಜುಲೈ–ಡಿಸೆಂಬರ್, ಪ್ರಸಾರಾಂಗ ಕನ್ನಡ. ವಿ.ವಿ. ಹಂಪಿ, ೨೦೦೭

೨. ಅರವಿಂದ ಮಾಲಗುತ್ತಿ (ಪ್ರ.ಸಂ.,) **ಕುವೆಂಪು ಕೃತಿ ವಿಮರ್ಶೆ,** ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವ ವಿದ್ಯಾಲಯ, ಮೈಸೂರು, ೨೦೦೬

೩. ಗೋಪಾಲರಾವ್ ಎಚ್.ಎಸ್., **ಕರ್ನಾಟಕ ಏಕೀಕರಣ ಇತಿಹಾಸ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೧೯೯೬

೪. ಗೋವಿಂದರಾಜ್ ಸಿ.ಆರ್., **ಕರ್ನಾಟಕ ಏಕೀಕರಣ ಮತ್ತು ಕನ್ನಡ ಸಾಹಿತ್ಯ ಪರಿಷತ್ತು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೫

೫. ಚಂದ್ರಶೇಖರಯ್ಯ ಬಿ.ಎಂ., **ಕೂಡ್ಲಿಗಿ ತಾಲೂಕು ದರ್ಶನ,** ಐಬಿಎಚ್ ಪ್ರಕಾಶನ, ಬೆಂಗಳೂರು, ೧೯೮೭

೬. ಚಂದ್ರಶೇಖರ್ ಬಿ.ಆರ್., **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟಗಾರರು,** ಶ್ರೀ ಸಿದ್ಧವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಪುರ, ೧೯೯೪

೭. ಚಂದ್ರಶೇಖರ್ ಎಸ್., **ಏಕೀಕರಣ ಒಂದು ಕಥನ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರ, ೨೦೦೫

೮. ಚಂದ್ರಶೇಖರ್ ಎಸ್., **ವಸಾತು ಕಾಲಿನ ಕರ್ನಾಟಕ,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ೨೦೦೬

೯. ಚಿನ್ನಸ್ವಾಮಿ ಸೋಸಲೆ. ಎನ್., **ಗಡಿ ಚಳವಳಿಗಳು,** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೧

೧೦. ಚೆನ್ನಬಸಪ್ಪ ಕೋ., **ಕರ್ನಾಟಕ ಏಕೀಕರಣ: ಬಳ್ಳಾರಿ ಜಿಲ್ಲೆಯ ಹಿನ್ನಲೆಯಲ್ಲಿ,** ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೭

೧೧. ಚೆನ್ನಬಸಪ್ಪ ಕೋ., **ಕೋ. ಚೆನ್ನಬಸಪ್ಪನವರ ಅಧ್ಯಕ್ಷೀಯ ಭಾಷಣ,** ೮ನೇ ಬಳ್ಳಾರಿ ಜಿಲ್ಲಾ ಸಾಹಿತ್ಯ ಸಮ್ಮೇಳನ, ಹರಪನಹಳ್ಳಿ, ೧೯೯೩

೧೨. ಚೆನ್ನಬಸಪ್ಪ ಕೋ., **ಕೋಚೆ ಸಮಗ್ರ ಕಥಾ ಕೋಶ,** ಐಬಿಎಚ್ ಪ್ರಕಾಶನ, ೨೦೦೮

೧೩. ಚೆನ್ನಬಸಪ್ಪ ಕೋ., **ಕೋಚೆ ಸಾಹಿತ್ಯ ಸಮಾಜ ಧರ್ಮದೃಷ್ಟಿ,** ಸ್ವಪ್ನ ಬುಕ್ ಹೌಸ್, ಬೆಂಗಳೂರು, ೨೦೦೨

೧೪. ಚೆನ್ನಬಸಪ್ಪ ಕೋ., **ದೀನ ಬಂಧು ಬಸವಣ್ಣ,** ಶ್ರೀ ಅರವಿಂದ ಪ್ರಕಾಶನ, ಬೆಂಗಳೂರು, ೧೯೮೫

೧೫. ಚೆನ್ನಬಸಪ್ಪ ಕೋ., **ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೧)**, ಸುರುಚಿ ಪ್ರಕಾಶನ, ಮೈಸೂರು, ೧೯೭೩

೧೬. ಚೆನ್ನಬಸಪ್ಪ ಕೋ., **ನನ್ನ ಮನಸ್ಸು ನನ್ನ ನಂಬಿಗೆ (ಭಾಗ-೨)**, ಶ್ರೀ ಅರವಿಂದ ಪ್ರಕಾಶನ, ಬೆಂಗಳೂರು, ೧೯೯೭

೧೭. ಚೆನ್ನಬಸಪ್ಪ ಕೋ., **ನಾನು ಓದಿದ ಶಾಲೆ**, ಸಂವಹನ ಪ್ರಕಾಶನ, ಮೈಸೂರು, ೨೦೦೮

೧೮. ಚೆನ್ನಬಸಪ್ಪ ಕೋ., **ನ್ಯಾಯಾಧೀಶನ ನೆನಪುಗಳು**, ವಾಗ್ದೇವಿ ಪುಸ್ತಕಗಳು, ಮೈಸೂರು, ೧೯೮೬

೧೯. ಚೆನ್ನಬಸಪ್ಪ ಕೋ., **ನ್ಯಾಯಾಲಯದ ಸತ್ಯಕಥೆಗಳು**, ಸಂವಹನ ಪ್ರಕಾಶನ, ಮೈಸೂರು, ೨೦೦೪

೨೦. ಚೆನ್ನಬಸಪ್ಪ ಕೋ., **ಬಲ್ಲವರೊಡನೆ** (ವ್ಯಕ್ತಿ ಚಿತ್ರಗಳು), ಪ್ರತಿಭಾ ಗ್ರಂಥಮಾಲೆ, ಧಾರವಾಡ, ೧೯೭೭

೨೧. ಚೆನ್ನಬಸಪ್ಪ ಕೋ., **ಮೂವತ್ತೇಳನೆಯ ಕನ್ನಡ ಸಾಹಿತ್ಯ ಸಮ್ಮೇಳನ**, ಮೈಸೂರು ಲೇಖಕರ ಗೋಷ್ಠಿಯ ಸ್ವಾಗತಾಧ್ಯಕ್ಷರ ಸ್ವಾಗತ ಭಾಷಣ, ಮೈಸರೂರ, ೧೯೫೫

೨೨. ಚೆನ್ನಬಸಪ್ಪ ಕೋ., **ಹೃದಯ ನೈವೇದ್ಯ**, ಸಜೀವ ಸಾಹಿತ್ಯಮಾಲೆ ಶಿವಮೊಗ್ಗ, ೧೯೬೮

೨೩. ಚೆನ್ನಬಸಪ್ಪ ಕೋ.,(ಸಂ.,) **ಹಿಂದೂ ಧರ್ಮದ ರಕ್ಷಕ ಟಿಪ್ಪು ಸುಲ್ತಾನ್**, ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೩

೨೪. ತಂಬಂಡ ವಿಜಯ್ ಪೂಣಚ್ಚ (ಪ್ರ.ಸಂ.,) **ಚರಿತ್ರೆ ವಿಶ್ವಕೋಶ-೪**, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೨೦೦೧

೨೫. ನಂಜಣ್ಣವರ ಎಸ್.ಎಸ್., **ಕರ್ನಾಟಕ ಜಲಸಂಪನ್ಮೂಲಗಳು**, ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ, ೧೯೯೫

೨೬. ಬರಗೂರು ರಾಮಚಂದ್ರಪ್ಪ., **ಕರ್ನಾಟಕ ಸಂಗಾತಿ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು, ೨೦೦೨

೨೭. ಭಾಗ್ಯಲಕ್ಷ್ಮಿ ಎಂ., **ಬಳ್ಳಾರಿ ಪರಿಸರ ಕನ್ನಡ-ತೆಲುಗು ದ್ವಿಭಾಷಿಕತೆ: ಸಮಾಜೋ ಭಾಷಿಕ ಅಧ್ಯಯನ**, (ಅಪ್ರಕಟಿತ ಪಿಹೆಚ್.ಡಿ ಪ್ರಬಂಧ) ಕನ್ನಡ ವಿ.ವಿ. ಹಂಪಿ, ೨೦೦೨

೨೮. ಮಧು ಎಂ.ಎನ್., **ಹೊಸಪೇಟೆ ಪ್ರದೇಶದ ಚಾರಿತ್ರಿಕ ಅಧ್ಯಯನ** (ಎಂ.ಫಿಲ್ ಅಪ್ರಕಟಿತ ಪ್ರಬಂಧ) ಕನ್ನಡ ವಿ.ವಿ. ಹಂಪಿ, ೨೦೦೭

೨೯. ಮರುಳಸಿದ್ದಯ್ಯ ಎಚ್.ಎಂ., (ಸಂ.,) **ಕೋಚೆ ನ್ಯಾಯದೃಷ್ಟಿ: ಕೋ. ಚೆನ್ನಬಸಪ್ಪನವರ ಕಾನೂನು ಬರಹಗಳು**, ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೧೯೯೬

೩೦. ಮಹಾಬಲೇಶ್ವರಪ್ಪ ಬಿ.ಸಿ., **ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳವಳಿಗಳು,** ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೧೯೯೭

೩೧. ಮಹಾದೇವಯ್ಯ ಪಿ., **ಬಳ್ಳಾರಿ ಜಿಲ್ಲೆಗೆ ತೆಲುಗರ ವಲಸೆ,** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೧೯೯೦

೩೨ ಮೃತ್ಯುಂಜಯ ಹೊರಕೇರಿ., **ಬಳ್ಳಾರಿ ಜಿಲ್ಲೆಯ ಬರಹಗಾರರು,** ಶ್ರೀ ಸಿದ್ದವೀರ ಶಿವಾಚಾರ್ಯ ಜ್ಞಾನ ಪ್ರಕಾಶನ, ಪುರ, ೧೯೯೪

೩೩. ರವಿಕುಮಾರ್ ಎನ್.ಎಂ., (ಸಂ.,) **ಮುನ್ನಡೆಯ ಕೂಡ್ಲಿಗಿ: ಕೂಡ್ಲಿಗಿ ತಾಲೂಕಿನ ಸಮಗ್ರ ದರ್ಶನ,** ಹಿಮಂತ ಪ್ರಕಾಶನ, ಯಂ. ಬಿ. ಅಯ್ಯನಹಳ್ಳಿ, ೧೯೯೮

೩೪. ರವೀಂದ್ರನಾಥ ಕೆ., (ಸಂ.,) **ಬಳ್ಳಾರಿ ಜಿಲ್ಲಾ ದರ್ಶನ,** ಪ್ರಸಾರಾಂಗ, ಗುಲ್ಬರ್ಗಾ ವಿಶ್ವ ವಿದ್ಯಾಲಯ, ಗುಲ್ಬರ್ಗಾ, ೨೦೦೫

೩೫. ವಿರುಪಾಕ್ಷಿ ಪೂಜಾರಹಳ್ಳಿ., **ವಸಾಹತುಕಾಲೀನ ಬಳ್ಳಾರಿ ಜಿಲ್ಲೆ,** (೨೦೦೨-೦೩ನೇ ಸಾಲಿನ ಯೋಜನೆ ಅಪ್ರಕಟಿತ) ಕನ್ನಡ ವಿ.ವಿ. ಹಂಪಿ, ೨೦೦೩

೩೬. ವಿವಿಧ ಲೇಖಕರು., **ಕೋಚೆ ಯಾರು ಏನು ಎಂತು?,** ಕೋಚೆ ಸಂಭಾವನಾ ಸಮಿತಿ, ಬೆಂಗಳೂರು, ೧೯೮೮

೩೭. ವಿವಿಧ ಲೇಖಕರು., **ನ್ಯಾಯ ನಿಷ್ಠುರಿ ನ್ಯಾಯಮೂರ್ತಿ ಕೂ. ಬ ನಾವದಗಿ** (ಅಭಿನಂದನಾ ಗ್ರಂಥ), ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ್, ೧೯೯೫

೩೮. ವೆಂಕಮ್ಮ ಎನ್.ಡಿ., **ಸ್ವಾತಂತ್ರ್ಯ ಯೋಧನ ಸಂವೇದನೆ,** ಮಹರ್ಷಿ ಶಂಭೂಕ ಪ್ರಕಾಶನ, ಬಳ್ಳಾರಿ ೧೯೮೯

೩೯. ಶಿವರುದ್ರಪ್ಪ ಜಿ.ಎಸ್., **ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ,** ಸಂಪುಟ-೩, ಪ್ರಸಾರಾಂಗ, ಬೆಂಗಳೂರು ವಿ.ವಿ. ಬೆಂಗಳೂರು, ೧೯೭೬

೪೦. ಶ್ರೀನಿವಾಸರಾವ್ ಎಸ್.ವಿ., (ಸಂ.,) **ಕನ್ನಡ ನಾಡಿನ ಸ್ಮರಣೀಯ ಮಹನೀಯರು,** ಪ್ರತಿಭಾ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಬೆಂಗಳೂರು, ೨೦೦೭

೪೧. ಶೇಷಾದ್ರಿ ಬಿ., (ಸಂ.,) **ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ,** ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ, ೧೯೯೮

೪೨. ಸತ್ಯಮೂರ್ತಿ ಬಿ.ಜಿ., **ಸಾಹಿತಿ ಮಾಹಿತಿ ಕೋಶ,** ಲೇಖಕರೇ ಪ್ರಕಾಶಕರು, ಬೆಂಗಳೂರು, ೨೦೦೫

೪೩. ಸತ್ಯವತಿ ಎನ್. **ಕರ್ನಾಟಕ ಏಕೀಕರಣದಲ್ಲಿ ಬಳ್ಳಾರಿ ಜಿಲ್ಲೆ,** (ಎಂ.ಫಿಲ್ ಅಪ್ರಕಟಿತ ಪ್ರಬಂಧ) ಕನ್ನಡ ವಿ.ವಿ. ಹಂಪಿ, ೨೦೦೭

೪೪. ಸರಿತಾ ಕುಸುಮಾಕರ ದೇಸಾಯಿ., (ಸಂ.,) ಇವರೇ ನಮ್ಮ ಬೀಚಿ, ಸಂತೋಷ್ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೪

೪೫. ಸಿದ್ದನಗೌಡ ಜಿ.ಬಿ., ತುಂಗಭದ್ರಾ ನದಿ ಪರಿಸರದ ಧಾರ್ಮಿಕ ಕ್ಷೇತ್ರಗಳು, (ಎಂ.ಫಿಲ್ ಅಪ್ರಕಟಿತ ಪ್ರಬಂಧ) ಕನ್ನಡ ವಿ.ವಿ. ಹಂಪಿ, ೨೦೦೭

೪೬. ಸೂರ್ಯನಾಥ ಕಾಮಂತ್., ಬಳ್ಳಾರಿ ಜಿಲ್ಲಾ ಗೈಜಿಟಿಯರ್ಸ್, ಸಂಪುಟ-೧. ಕರ್ನಾಟಕ ಸರ್ಕಾರ, ಬೆಂಗಳೂರು, ೧೯೭೬

೪೭ ಸೂರ್ಯನಾಥ ಕಾಮತ್., ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು, ಸಂಪುಟ-೩. ಗೀತಾ ಬುಕ್ ಹೌಸ್. ಮೈಸೂರು, ೧೯೮೦

## ಪತ್ರಿಕೆಗಳು

೧. ರೈತ

೨. ಪ್ರಜಾವಾಣಿ

೩. ಡೆಕನ್ ಹೆರಾಲ್ಡ್

೪. ಅಂತರ್ಜಾಲ



ಕೊ. ಚೆನ್ನಬಸಪ್ಪನವರ ತಂದೆ ಶ್ರೀ ವೀರಣ್ಣನವರು ತಾಯಿ ಶ್ರೀಮತಿ ಬಸಮ್ಮನವರು
ಮೊಮ್ಮಕ್ಕಳೊಡನೆ (1959)



ಕೋ. ಚೆ. ಪುತ್ರರು, ಪುತ್ರಿಯರು ಮತ್ತು ತಂದೆಯವರು. (1967)

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



ಶ್ರೀರಾಮಕೃಷ್ಣರ ಪಾತ್ರದಲ್ಲಿ ಕೋ. ಚೆನ್ನಬಸಪ್ಪನವರು.



ಜಿಲ್ಲಾ ನ್ಯಾಯಾಧೀಶರಾಗಿ ಕೋ. ಚೆನ್ನಬಸಪ್ಪನವರು. (1966)

ಕೃಪೆ: ಕೋ.ಚೆ.ಯವರ ಪುಸ್ತಕದಿಂದ




ಬಿ.ಇ.ಎಲ್. ಕರ್ನಾಟಕ ಕಾರ್ಮಿಕ ಹಿತರಕ್ಷಣಾ ಸಮಿತಿ, ಅಧ್ಯಕ್ಷ ಕೋ. ಚೆ. (೧೯೮೪)
ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ, ಕೋ. ಚೆ., ಶ್ರೀ ಕೇಸರಿ,
ನ್ಮಾನಿತರಾದ ಶ್ರೀಮತಿ ಶಕುಂಶಲಾಬಾಯಿ ಪಾಂಡುರಂಗರಾವ್ ಜೋಳದರಾಶಿ, ಡಾ॥ ಕೆ. ದೊಡ್ಡನಗೌಡ.

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



ಬೆಳಗಾಂವಿ ಜಿಲ್ಲಾ ನ್ಯಾಯಾಧೀಶನಾಗಿ [೧೯೬೬]

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



ದ.ಕನ್ನಡ ಜಿಲ್ಲೆಯಿಂದ ವರ್ಗವಾದಾಗ ಜಿಲ್ಲಾ ನ್ಯಾಯಾಲಯದ ಸಿಬ್ಬಂದಿ ಏರ್ಪಡಿಸಿದ್ದ
ಬೀಳ್ಕೊಡಿಗೆ ಸಮಾರಂಭದ ಚಿತ್ರ [೧೯೭೪].



ವಿಜಾಪುರದಿಂದ ವರ್ಗವಾದಾಗ ಜಿಲ್ಲಾ ನ್ಯಾಯಾಲಯದ ಸಿಬ್ಬಂದಿ
ಪ್ರೊಸೆಸ್ ಸರ್ವರ್ಸ್ ಏರ್ಪಡಿಸಿದ್ದ ಸಮಾರಂಭ [೧೯೭೬].
ತಂದೆ ವೀರಣ್ಣನವರು, ಮಗಳು ಮಂಜುಳ, ಕೋ.ಚೆ. [illegible],

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



ಕನ್ನಡ ಆಡಳಿತ ಭಾಷಾ ಕ್ರಿಯಾ ಸಮಿತಿ ಸ್ಥಾಪನೆ.
ಅಧ್ಯಕ್ಷ ಕೋ. ಚೆ., ಕಾರ್ಯದರ್ಶಿ ಶ್ರೀ ಡಿ. ಲಿಂಗಯ್ಯ, ಸದಸ್ಯರಾದ ಪಾಟೀಲ ಪುಟ್ಟಪ್ಪ, ಡಾ॥ ದೇಜಗೌ.

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



'ದಿವ್ಯಜೀವನ' ಪ್ರಥಮ ಸಂಪುಟದ ಬಿಡುಗಡೆ ಸಮಾರಂಭ (೧೯೮೦)
ಶ್ರೀ ಸಿ. ಶಿವಪ್ಪ, ಕೋ. ಚೆ., ಕುವೆಂಪು, ಡಾ॥ ಗೋರೂರು ರಾಮಸ್ವಾಮಿ ಐಯ್ಯಂಗಾರ್.




'ದಿವ್ಯಜೀವನ' ದ್ವಿತೀಯ ಸಂಪುಟದ ಬಿಡುಗಡೆ ಸಮಾರಂಭ (೧೯೮೩)
ಕೋ. ಚೆ., ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ, ಡಾ॥ ರಂ. ಶ್ರೀ ಮುಗಳಿ.

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



'ದೀನಬಂಧು ಬಸವಣ್ಣ' ಬಿಡುಗಡೆ ಸಮಾರಂಭ, ಗದುಗಿನಲ್ಲಿ
ಗದುಗಿನ ತೋಂಟದಾರ್ಯ ಜಗದ್ಗುರುಗಳು ಹಾಗೂ ಇಳಕಲ್ಲಿನ ಶ್ರೀ ಮಹಾಂತಪ್ಪ ಸ್ವಾಮಿಗಳು

**ಕೃಪೆ: ಕೋ.ಚೆ.ಯವರ ಪುಸ್ತಕದಿಂದ**



ಶ್ರೀಮತಿ ಸರೋಜಮ್ಮ ಮತ್ತು ಶ್ರೀ. ಕೋ. ಚೆನ್ನಬಸಪ್ಪ
ದಾಂಪತ್ಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ



ದಾಂಪತ್ಯ ಸುವರ್ಣ ಮಹೋತ್ಸವ ೧೯೯೩ ಡಿಸೆಂಬರ್ ೨೪



ದಾಂಪತ್ಯ ಸುವರ್ಣ ಮಹೋತ್ಸವ
'ಆಗ (೧೯೪೩ರಲ್ಲಿ) ನಿಮ್ಮ ಮದುವೆಗೆ ಬಂದಿದ್ದವರಲ್ಲಿ ಈಗ ಇರುವವನು
ನಾನೊಬ್ಬನೆ ಎಂದು ಕಾಣುತ್ತದೆ' ಶ್ರೀ ನಿಜಲಿಂಗಪ್ಪನವರು ಆಶೀರ್ವದಿಸಿದಾಗ



ದಾಂಪತ್ಯ ಸುವರ್ಣ ಮಹೋತ್ಸವ ಸಂದರ್ಭದಲ್ಲಿ

**ಕೃಪೆ: ಕೋ.ಚೆ.ಯವರ ಪುಸ್ತಕದಿಂದ**



'ದಿವ್ಯ ಜೀವನ' (ಪೂರ್ವಾರ್ಧ-ಪ್ರಥಮ ಸಂಪುಟ)ದ ಬಿಡುಗಡೆ ಸಮಾರಂಭ - ೧೯೮೨ (ಪುಟ ೧೨೭)
(ಎ-ಬ: ಕೋ.ಚೆ., ಕುವೆಂಪು, ಗೊರೂರು, ನ್ಯಾಯಮೂರ್ತಿ ಸಿ. ಶಿವಪ್ಪ, ಡಾ. ಕೆ. ಸಿ. ಗುರುದೇವ)

---

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



೧೯೭೬ - ಸಾಹಿತ್ಯ ಅಕಾಡೆಮಿ ಪ್ರಶಸ್ತಿ ವಿಜೇತರು
ಕೆ. ಟಿ. ರಾಮಸ್ವಾಮಿ ಐಯಂಗಾರ್, ಮಾಸ್ತಿ, [illegible], ಕೋ.ಚೆ.



'ದಿವ್ಯಜೀವನ' ಉತ್ತರಾರ್ಧ ಬಿಡುಗಡೆ ಸಮಾರಂಭ (31-12-1985)



ಕೋ. ಕರ್ನಾಟಕದ ನಿಜವಾದ 'ಏಕೋ' ಪಾಟೀಲ ಪುಟ್ಟಪ್ಪ (ಪು ೨೩೫)
ಕೋ.ಚೆ. ಪಾಪು ದೇಜಗೌ



ಪಶ್ಚಿಮ ಬಂಗಾಳದ ಮುಖ್ಯಮಂತ್ರಿ ಶ್ರೀ ಜ್ಯೋತಿಬಸು ಅವರೊಂದಿಗೆ

ಕೃಪೆ: ಕೋ.ಚೆ.ಯವರ ಪುಸ್ತಕದಿಂದ



ಸಾಹಿತ್ಯ ಅಕಾದೆಮಿ ಪ್ರಶಸ್ತಿ ಪ್ರಧಾನ (೧೯೭೯)
ಕೋ.ಚೆ. ಅಕಾದೆಮಿ ಅಧ್ಯಕ್ಷ ಡಾ॥ ಹಾ. ಮಾ.ನಾಯಕ, ರಾಜ್ಯಪಾಲ ಶ್ರೀ ಗೋವಿಂದನಾರಾಯಣ.

ಕೃಪೆ: ಕೋ.ಚೆ.ಯವರ ಪುಸ್ತಕದಿಂದ

